# ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ

(ಆಳುಪ, ಹೊಯ್ಸಳ, ವಿಜಯನಗರ ಮತ್ತು ಕೆಳದಿ ನಾಯಕರು)

ಕನ್ನಡ ವಿಶ್ವವಿದ್ಯಾನಿಲಯ ಹಂಪಿಗೆ ಪಿಎಚ್.ಡಿ. ಪದವಿಗಾಗಿ

ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ


ಸಂಶೋಧನ ಅಭ್ಯರ್ಥಿ

ರಶ್ಮಿ ಹೆಚ್. ಎಂ.

ಮಾರ್ಗದರ್ಶಕರು

ಡಾ. ವಿಶಾನ್ಸ್ ಪಿಂಟೊ

ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ

ಸಂತ ಅಲೋಶಿಯಸ್ ಕಾಲೇಜು (ಸ್ವಾಯತ್ತ)

ಮಂಗಳೂರು–575003





ಚರಿತ್ರೆ ವಿಭಾಗ, ಸಮಾಜವಿಜ್ಞಾನಗಳ ನಿಕಾಯ

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ


ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ

2019

# ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ

(ಆಳುಪ, ಹೊಯ್ಸಳ, ವಿಜಯನಗರ ಮತ್ತು ಕೆಳದಿ ನಾಯಕರು)

ಕನ್ನಡ ವಿಶ್ವವಿದ್ಯಾನಿಲಯ ಹಂಪಿಗೆ ಪಿಎಚ್.ಡಿ. ಪದವಿಗಾಗಿ

ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ


ಸಂಶೋಧನ ಅಭ್ಯರ್ಥಿ

**ರಶ್ಮಿ ಹೆಚ್. ಎಂ.**

ಮಾರ್ಗದರ್ಶಕರು

**ಡಾ. ವಿಶಾನ್ಸ್ ಪಿಂಟೊ**

ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ

ಸಂತ ಅಲೋಶಿಯಸ್ ಕಾಲೇಜು (ಸ್ವಾಯತ್ತ)

ಮಂಗಳೂರು–575003





**ಚರಿತ್ರೆ ವಿಭಾಗ, ಸಮಾಜವಿಜ್ಞಾನಗಳ ನಿಕಾಯ**

**ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ**

**ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ**

**2019**

# ಸಂಶೋಧಕರ ಪ್ರಮಾಣ ಪತ್ರ

"ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ", ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ವಿಶಾನ್ಸ್ ಪಿಂಟೊ, ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸಂತ ಅಲೋಶಿಯಸ್ ಕಾಲೇಜು (ಸ್ವಾಯತ್ತ), ಮಂಗಳೂರು ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ರಶ್ಮಿ ಹೆಚ್. ಎಂ.

ಸಂಶೋಧನ ವಿದ್ಯಾರ್ಥಿ

ದಿನಾಂಕ : 14.08.2019

ಸ್ಥಳ : ಬಲ್ಮಠ, ಮಂಗಳೂರು

## ಮಾರ್ಗದರ್ಶಕರ ದೃಢೀಕರಣ ಪತ್ರ

**"ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ"**, ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದ ಪಿಎಚ್.ಡಿ. ಪದವಿಗಾಗಿ ರಶ್ಮಿ ಹೆಚ್.ಎಂ., ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರು**

**ಡಾ. ವಿಶಾನ್ಸ್ ಪಿಂಟೊ**

ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ

ಸಂತ ಅಲೋಶಿಯಸ್ ಕಾಲೇಜು (ಸ್ವಾಯತ್ತ),

ಮಂಗಳೂರು

ದಿನಾಂಕ : 14-08-2019

ಸ್ಥಳ: ಬಲ್ಮಠ, ಮಂಗಳೂರು

# ಸಂಕೇತಾಕ್ಷರಗಳು ಮತ್ತು ವಿಸ್ತರಣೆ

| | |
|---|---|
| ಕ್ರಿ.ಶ. | ಕ್ರಿಸ್ತಶಕ |
| ARSIE | Annual Report on South Indian Epigraphy |
| EC | Epigrphia Carnatica |
| EI | Epigraphia Indica |
| IA | Indian Antiquary |
| MAR | Annual Report of the Mysore Archaeological Department |
| SII | South Indian Inscriptions |
| P. / Pp. | Page / Printed page |

# ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ

(ಆಳುಪ, ಹೊಯ್ಸಳ, ವಿಜಯನಗರ ಮತ್ತು ಕೆಳದಿ ನಾಯಕರು)

## ಪರಿವಿಡಿ

**ಅಧ್ಯಾಯ – ಒಂದು**

# ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ – ಪ್ರಸ್ತಾವನೆ

## 1.1. ಪೂರ್ವಪೀಠಿಕೆ

ತುಳುನಾಡು ಪ್ರಾಚೀನ ಕರ್ನಾಟಕ, ಮಧ್ಯಕಾಲೀನ, ಆಧುನಿಕ ಮತ್ತು ಆಧುನಿಕೋತ್ತರ (ವಸಾಹತುಶಾಹಿ) ಕಾಲಘಟ್ಟದಲ್ಲಿ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಪಶ್ಚಿಮದ ಸಮುದ್ರ ಮೂಲಕ ತನ್ನನ್ನು ಭಾರತೀಯ ಉಪಖಂಡದ ಇತರ ತೀರಗಳೊಂದಿಗಿನ ವ್ಯಾಪಾರಕ್ಕೆ ಮತ್ತು ವಿದೇಶಿಯ ವ್ಯಾಪಾರಕ್ಕೆ ತೊಡಗಿಸಿಕೊಂಡಿದುದು ಎಲ್ಲರಿಗೂ ತಿಳಿದಿರುವ ಸಂಗತಿಯಾದರೂ, ಈ ವ್ಯಾಪಾರ ಮತ್ತು ವಹಿವಾಟು ಎಲ್ಲಾ ಪ್ರದೇಶಗಳಲ್ಲಿಯೂ ಏಕರೀತಿಯಾಗಿರದೇ ಪ್ರಾದೇಶಿಕ ವ್ಯತ್ಯಯಗಳನ್ನು ವಿಶೇಷತೆಗಳನ್ನು ತನ್ನದಾಗಿಸಿಕೊಂಡಿರುತ್ತದೆ. ಒಂದು ಪ್ರದೇಶದ ವ್ಯಾಪಾರ ಮತ್ತು ವ್ಯಾಣಿಜ್ಯ ಸ್ಥಳೀಯ ಕೃಷಿ ಅದರ ಉತ್ಪನ್ನಗಳು, ಸ್ಥಳೀಯ ಗಣಿಗಾರಿಕೆ, ಸಸ್ಯವರ್ಗ, ಅರಣ್ಯ, ಅರಣ್ಯೋತ್ಪನ್ನಗಳು ಮುಂತಾದ ಪ್ರಾಕೃತಿಕ ಸಂಪತ್ತನ್ನು ಮತ್ತು ಅವುಗಳ ಮಾನವನ ಆವಶ್ಯಕತೆಗಳನ್ನು ಅವಲಂಬಿಸಿರುತ್ತದೆ. ಹೀಗಾಗಿ ಪ್ರತಿ ದೇಶದ ವ್ಯಾಪಾರ ಮತ್ತು ವಹಿವಾಟು ಒಂದೇ ರೀತಿಯಾಗಿರುವುದಿಲ್ಲ. ಸಾಮಾನ್ಯ ಶಕೆಯ ಆರಂಭಕ್ಕೂ ಪೂರ್ವದಿಂದಲೇ ತುಳುನಾಡಿನ ಕಡಲತೀರದ ಬಂದರುಗಳು ವಿದೇಶಿಯ ವ್ಯಾಪಾರದಲ್ಲಿ ತೊಡಗಿದ್ದುದ್ದನ್ನು ಇತ್ತೀಚಿನ ಸಾಗರೋತ್ತರ ಸಂಪರ್ಕದ ಅಧ್ಯಯನಗಳು ಅಂತರ್ದೇಶೀಯ ಆರ್ಥಿಕ ಪರಿಸ್ಥಿತಿಯ ಅಧ್ಯಯನಗಳು ಖಚಿತಪಡಿಸುತ್ತವಾದರೂ ಎಲ್ಲಾ ಅಧ್ಯಯನಗಳು ಕೆಲವೊಂದು ಇತಿಮಿತಿಯಲ್ಲಿ ಕಾರ್ಯನಿರ್ವಹಿಸುತ್ತವೆ. ಈ ಹಿನ್ನಲೆಯಲ್ಲಿ ಗಮನಿಸಿದಾಗ ತುಳುನಾಡಿನ ವ್ಯಾಪಾರ ಬಹುತೇಕವಾಗಿ ಒಂದು ಬಗೆಯ ವಿನಿಮಯ ಕೇಂದ್ರವಾಗಿತ್ತೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಕೆಲವು ತುಳುನಾಡಿನ ಇತಿಹಾಸಕಾರರು ಈ ಬಂದರುಗಳ ಮೂಲಕ ನಡೆಯುತ್ತಿದ್ದ ಎಲ್ಲಾ ವ್ಯಾಪಾರಗಳು ರಫ್ತು ಪದಾರ್ಥಗಳೆಲ್ಲವೂ ತುಳುನಾಡಿನಲ್ಲಿಯೇ ಉತ್ಪಾದನೆಯಾಗುತ್ತಿದ್ದವು ಅಥವಾ ಬೆಳೆಯುತ್ತಿದ್ದವು ಎಂಬ ಭಾವನೆ ಬರುವಂತೆ ಆಕರಗಳನ್ನು ವಿಮರ್ಶಿಸಿರುತ್ತಾರೆ. ಆದರೆ ವಸ್ತುಸ್ಥಿತಿ ಇದಕ್ಕೆ ಭಿನ್ನವಿದೆ. ಪ್ರಾಚೀನ ಕಾಲದಿಂದಲೂ ತುಳುನಾಡಿನ ವ್ಯಾಪಾರ, ಕಾಡಿನ ಉತ್ಪನ್ನಗಳು ಬಯಲು ಸೀಮೆಯಿಂದ ಆಮದಾಗುತ್ತಿದ್ದ ಶ್ರೇಷ್ಠ ಗುಣಮಟ್ಟದ ಅಕ್ಕಿ, ಹತ್ತಿಬಟ್ಟೆಗಳ, ಹರಳುಗಳು, ಔಷಧೀಯ ಸಸ್ಯಗಳು, ವ್ಯವಸಾಯೋತ್ಪನ್ನಗಳು ಮುಂತಾದವುಗಳನ್ನು ಒಳಗೊಂಡಿದ್ದವು. ಕಬ್ಬಿಣ ಇತರ

ಧಾತುಗಳು ಘಟ್ಟ ಮತ್ತು ತುಳುನಾಡಿನ ಬಂದರುಗಳನ್ನು ಸೇರುತ್ತಿದ್ದವು. ಒಳನಾಡಿನ ಬಯಲು ಸೀಮೆಯಲ್ಲಿಯೂ ಬೆಳೆಯುತ್ತಿದ್ದ ವಿವಿಧ ಬಗೆಯ ಅಕ್ಕಿಯನ್ನು ವಿದೇಶಗಳಿಗೂ, ತುಳುನಾಡಿನಲ್ಲಿ ಉತ್ಪಾದನೆಯಾಗುತ್ತಿದ್ದ ಪ್ರಾದೇಶಿಕ ಬಳಕೆಯ ದಪ್ಪ ಕೆಂಪು ಅಕ್ಕಿ, ಕರಿಅಕ್ಕಿಯನ್ನು ಮಲಬಾರ್ ತೀರಕ್ಕೆ ಸಾಗಿಸಿ ಅದಕ್ಕೆ ಬದಲಾಗಿ ತೆಂಗಿನನಾರು, ಕೊಬ್ಬರಿ, ತೆಂಗಿನ ಎಣ್ಣೆ ಆಮದು ಮಾಡಿಕೊಳ್ಳುತ್ತಿದ್ದರು. ಇದೇ ರೀತಿ ಲಕ್ಷದ್ವೀಪಗಳಿಗೆ ಅಕ್ಕಿ, ಹತ್ತಿಬಟ್ಟೆ ದಿನನಿತ್ಯದ ಸಾಮಾನುಗಳನ್ನು ಪೂರೈಸಿ, ಅಲ್ಲಿಂದ ತೆಂಗಿನ ನಾರಿನ ಉತ್ಪನ್ನಗಳನ್ನು, ತೆಂಗನ್ನು ಆಮದು ಮಾಡಿಕೊಳ್ಳುತ್ತಿದ್ದರು. ಏಡನ್ ಮುಂತಾದ ಬಂದರುಗಳಿಗೆ ಹತ್ತಿಬಟ್ಟೆ, ಶ್ರೀಗಂಧದ ಮರ, ಕಾಡಿನ ಉತ್ಪನ್ನಗಳು, ಸಾಂಭಾರ, ಉತ್ಕೃಷ್ಟವಾದ ಸಣ್ಣ ಬಿಳಿಯ ಅಕ್ಕಿ ಮುಂತಾದವುಗಳನ್ನು ಬ್ರಿಟಿಷ್ ಪ್ರಾಬಲ್ಯದ ದಿನಗಳವರೆಗೆ ರಫ್ತುಮಾಡುತ್ತಿತ್ತು. ಬ್ರಿಟಿಷ್ ಪ್ರಾಬಲ್ಯದಿಂದಾಗಿ ಅಂತರ್‌ದೇಶಿಯ ಮತ್ತು ಆಂತರಿಕ ವ್ಯಾಪಾರ ಬಹಳಷ್ಟು ಕುಸಿಯಿತು. ಕೆಲವು ಬಂದರುಗಳು ಐತಿಹಾಸಿಕ ಕಾಲಘಟ್ಟದ ವಿವಿಧ ಮನೆತನಗಳ ಪ್ರೋತ್ಸಾಹದಿಂದಾಗಿ ತಮ್ಮ ಶ್ರೇಷ್ಠತೆಯ ತುರೀಯಾವಸ್ಥೆಯನ್ನು ತಲುಪಿದರೆ ಮತ್ತೆ ಕೆಲವು ನೈಸರ್ಗಿಕ ಅಡೆತಡೆಗಳು ಮತ್ತು ವ್ಯಾಪಾರಿಗಳ ವಲಸೆಯಿಂದಾಗಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡವು. ಭಟ್ಕಳ, ಬಾರಕೂರು, ಬಸ್ರೂರು ವಿಜಯನಗರ ಕಾಲದಲ್ಲಿ ಅತ್ಯಂತ ಪ್ರಬಲವಾಗಿ ಬಿರುಸಿನ ಮತ್ತು ತುರುಸಿನ ವ್ಯಾಪಾರದಲ್ಲಿ ತೊಡಗಿಕೊಂಡಿದ್ದವು. ಇದು ಹೊಯ್ಸಳರ ಕಾಲಘಟ್ಟದ ಕೊನೆಯಲ್ಲಿ ಪ್ರಾರಂಭವಾಯಿತೆನ್ನಬಹುದು. 3ನೇ ಬಲ್ಲಾಳ ಚಿಕ್ಕತಾಯಿಯನ್ನು ಮದುವೆ ಆದ ನಂತರ ಈ ಪ್ರದೇಶದೊಂದಿಗಿನ ಹೊಯ್ಸಳರ ಚಟುವಟಿಕೆಗಳು ಅಧಿಕವಾದವು. ಇದಕ್ಕೆ ಪೂರ್ವದಲ್ಲಿ ಕರ್ನಾಟಕದ ಕರಾವಳಿಯ ಬಂದರುಗಳು ಮತ್ತು ವರ್ತಕ ಸ್ಥಾನಗಳ ನಡುವಿನ ಕೊಡುಕೊಳ್ಳುವ ವ್ಯಾಪಾರ ಎರಡನೇ ದರ್ಜೆಯ ವ್ಯಾಪಾರವಾಗಿ ಪರಿವರ್ತಿತವಾಗಿತ್ತು. ಆದರೆ ಕೇಂದ್ರ ಆಡಳಿತ ವ್ಯವಸ್ಥೆಯ ನೇರ ಅವಗಾಹನೆಯಲ್ಲಿನ ವ್ಯಾಪಾರಕ್ಕೆ ಅವಕಾಶವಿರಲಿಲ್ಲ. ಸ್ಥಳೀಯ ವ್ಯಾಪಾರಿಗಳು ಮತ್ತು ನಾನಾದೇಶಿಗಳು ಐಹೊಳೆಯ ಅಯನೂರ್ವರು, ಸೆಟ್ಟಿಕಾರರು ಇತ್ಯಾದಿ ವ್ಯಾಪಾರಿ ಸಂಘಗಳ ವರ್ತಕರು ತುಳುನಾಡಿನ ಬಂದರು ನಗರಗಳಲ್ಲದೇ ಒಳನಾಡಿನ ವ್ಯಾಪಾರ ಪಟ್ಟಣಗಳಾದ ಉಪ್ಪಿನಂಗಡಿ, ಬೆಳ್ತಂಗಡಿ, ವಿಟ್ಲ, ಬಂಟ್ವಾಳ, ಮಂಗಳೂರು, ಕಾರ್ಕಳ, ಮೂಡಬಿದರೆ, ವೇಣೂರು, ಮಲ್ಪೆ, ಬಾರಕೂರು, ಬಸ್ರೂರು, ಕುಂದಾಪುರ, ಶಂಕರನಾರಾಯಣ, ಬೈಂದೂರು, ಭಟ್ಕಳ, ಕೊಲ್ಲೂರು ಗೇರುಸೊಪ್ಪೆ, ಬನವಾಸಿ, ಹೊನ್ನಾವರ, ಮುಂತಾದ ಬಂದರುಗಳು ಮತ್ತು ಆಂತರಿಕ

ವ್ಯಾಪಾರ ಕೇಂದ್ರಗಳಲ್ಲಿ ನೆಲೆನಿಂತು ದೇಶಿಯ ಮತ್ತು ವಿದೇಶಿಯ ವ್ಯಾಪಾರದಲ್ಲಿ ತೊಡಗಿದುದನ್ನು ಈ ಪ್ರದೇಶದ ಪ್ರಾರಂಭದ ಇತಿಹಾಸ ತಜ್ಞರುಗಳಾದ ಗಣಪತಿರಾವ್ ಐಗಳ್, ಮಂಜೇಶ್ವರ ಗೋವಿಂದ ಪೈ, ಬಿ. ಎ. ಸಾಲೆತ್ತೂರು, ಕೆ. ವಿ. ರಮೇಶ್, ಪಿ ಗುರುರಾಜ ಭಟ್, ಮತ್ತು ಇತ್ತೀಚಿನ ಕಾಲಘಟ್ಟದ ವಿದ್ವಾಂಸರುಗಳಾದ ಬಿ. ಎಸ್. ಶಾಸ್ತ್ರಿ, ಕೆ. ಜಿ. ವಸಂತ ಮಾಧವ, ಬಿ. ವಸಂತ ಶೆಟ್ಟಿ, ಮಾಲತಿ ಕೃಷ್ಣಮೂರ್ತಿ, ಮೋಹನ್‌ಕೃಷ್ಣ ರೈ ಮುಂತಾದವರು ಈ ಎಲ್ಲಾ ತಮ್ಮ ಸಂಶೋಧನೆಗಳಲ್ಲಿ, ಪ್ರೌಢಪ್ರಬಂಧಗಳಲ್ಲಿ ಮತ್ತು ಸಂಪ್ರಬಂಧಗಳಲ್ಲಿ ಸಾಕಷ್ಟು ವಿಸ್ತಾರವಾಗಿ ದಾಖಲಿಸಿರುತ್ತಾರೆ. ಆದರೆ ಈ ಪ್ರದೇಶದಲ್ಲಿದ್ದ ವ್ಯಾಪಾರ ಮಾರ್ಗಗಳು ಅವುಗಳು ಕಾರ್ಯನಿರ್ವಹಿಸುತ್ತಿದ್ದ ವಿಧಾನಗಳು ಕಡಲ ತೀರದೊಂದಿಗೆ ಘಟ್ಟ ಮತ್ತು ಬಯಲುಸೀಮೆ ಹೊಂದಿದ್ದ ಸಂಪರ್ಕ ವಿಶೇಷವಾಗಿ ಆಮದು ರಫ್ತು ಇತರ ಆರ್ಥಿಕ ಚಟುವಟಿಕೆಗಳು ಮುಂತದವುಗಳನ್ನು ನಿಖರವಾಗಿ ಪ್ರತ್ಯೇಕ ಕಾಲಮಿತಿ ಒಳಗೆ ಗುರುತಿಸದಿರುವುದು ಕಂಡುಬರುತ್ತದೆ ಅಥವಾ ಎಲ್ಲಾ ವಿದೇಶೀಯ ಮತ್ತು ಆಂತರಿಕ ವ್ಯಾಪಾರ ತುಳುನಾಡಿನ ಉತ್ಪಾದನೆಯನ್ನು ಮತ್ತು ಪ್ರಕೃತಿಯನ್ನೇ ಅವಲಂಬಿಸಿತೆಂಬ ಭಾವನೆಗಳು ಉಂಟಾಗುವ ರೀತಿ ಆಕರಗಳನ್ನು ವಿಮರ್ಶಿಸಲಾಗಿದೆ.

ಈಗ ಈ ಬಗೆಯ ಅಧ್ಯಯನಕ್ಕೆ ದೇಶಿಯ ಮತ್ತು ವಿದೇಶೀಯ ಸಾಹಿತ್ಯ ಪ್ರಕಾರಗಳೆರಡು ವಿಪುಲ ಮಾಹಿತಿ ಒದಗಿಸುವುದಾದರೂ ಕ್ರಿ.ಶ. 8ನೇ ಶತಮಾನದಿಂದ ಈಚೆಗಿನ ಕೆಲವು ಆಕರಗಳು ಮಾತ್ರ ಅತ್ಯುತ್ತಮ ಮತ್ತು ವಸ್ತುನಿಷ್ಠವಾಗಿಯೂ ಸಂಶೋಧನೆಗೊಂಡಿಲ್ಲವೆಂದೇ ಹೇಳಬಹುದು. ಇದಕ್ಕೆ ಕಾರಣಗಳು ಇಲ್ಲದಿಲ್ಲ. ವಿಪರೀತವೆನ್ನುವ ಸುದೀರ್ಘ ಆರು ತಿಂಗಳ ಮಳೆಗಾಲ ತುಳುನಾಡ ಎಲ್ಲೆಯಲ್ಲಿ ಕಂಡುಬರುವ ಅಭೇದ್ಯವೆನಿಸುವ ಘಟ್ಟಪ್ರದೇಶ, ಸಂಪರ್ಕ ಮಾಧ್ಯಮಗಳ ಕೊರತೆ ಇವು ತುಳುನಾಡನ್ನು ವಸ್ತುಶಃ ಪರಿವರ್ತಿಸಿದ್ದವೆಂದು ವಿದ್ವಾಂಸರ ಅಭಿಮತ. ಆದರೂ ಮಂಗಳೂರು, ಉಡುಪಿ ಈ ಪ್ರದೇಶಗಳನ್ನು ಸಂಪರ್ಕಿಸುವ ದಕ್ಷಿಣದ ಘಟ್ಟದ ಮಾರ್ಗಗಳು ಕುಂದಾಪುರ, ಬಸ್ರೂರು, ಬೈಂದೂರನ್ನು ಸಂಪರ್ಕಿಸುವ ತುಳುನಾಡಿನ ಮಧ್ಯದ ಘಟ್ಟಮಾರ್ಗಗಳು ವಿಪುಲವಾಗಿದ್ದವೆಂದು ಇತ್ತೀಚಿನ ಸಂಶೋಧಕರ ಸಂಶೋಧನೆಗಳು ಖಚಿತ ಸ್ವರದಲ್ಲಿ ವಸ್ತುನಿಷ್ಠ ಆಕರಗಳ ಹಿನ್ನಲೆಯಲ್ಲಿ ಗುರುತಿಸುತ್ತವೆ. ಹಾಗಾಗಿ ಈವರೆಗೆ ವಿದ್ವಾಂಸರುಗಳು ಭಾವಿಸಿದಂತೆ ತುಳುನಾಡಿನ ಕರಾವಳಿ ದ್ವೀಪದಂತಿಲ್ಲವಾದರೂ ಅದರೊಂದಿಗಿನ ಸಂಪರ್ಕ ಮತ್ತು ವ್ಯಾಪಾರ ತ್ರಾಸದಾಯಕವಾಗಿದ್ದಿತು. ಆದರೂ ವ್ಯಾಪಾರ

ಮತ್ತು ವಹಿವಾಟು ಪ್ರಾಚೀನ ಕಾಲಘಟ್ಟದಿಂದ ಆಧುನಿಕ ಕಾಲಘಟ್ಟದವರೆಗೂ ಸಂಸ್ಕೃತಿಯನ್ನು ಬೆಳವಣಿಗೆಯನ್ನು ಹೊಂದುತ್ತಾ ಸೈನ್ಯ ಮತ್ತು ಪ್ರಭುತ್ವದ ವಿಸ್ತಾರದೊಂದಿಗೆ ವ್ಯಾಪಾರವು ವಿಸ್ತಾರವಾದುದನ್ನು ಗುರುತಿಸಬಹುದು.

## 1.2. ಭೌಗೋಳಿಕ ಪರಿಸರ ಮತ್ತು ವ್ಯಾಪಾರ

ತುಳುವ ಪದವು ಒಂದು ಭೌಗೋಳಿಕ ಪ್ರದೇಶವಾಗಿ ಬಳಕೆಯಾಗಿರುವುದು ಐತಿಹಾಸಿಕ ಗ್ರಂಥಗಳಲ್ಲಿ ಖಚಿತವಾಗುತ್ತದೆಯಾದರೂ ತುಳುವ ಪದವನ್ನು ಒಂದು ಜನಾಂಗವಾಗಿ, ಒಂದು ಭಾಷೆಯಾಗಿ, ಒಂದು ಸಂಸ್ಕೃತಿಯಾಗಿ ಕೂಡ ವಿದ್ವಾಂಸರು ಭಾವಿಸಿರುವುದು ಮತ್ತು ಅದಕ್ಕೆ ಆಕರಗಳನ್ನು ಒದಗಿಸಿರುವುದು ಸಂಶೋಧನೆಯ ಹಂತದಲ್ಲಿ ತುಳುವ ಪದದ ವಿವೇಚನೆ ಸಹ ತುಳುನಾಡಿನ ಇತಿಹಾಸದಷ್ಟೇ ರೋಚಕವಾಗಿ ಕಂಡುಬರುತ್ತದೆ. ತೌಳವದ ಸಂಸ್ಕೃತದ ರೂಪವೇ ತುಳುವ ಎಂದು ರೂಪಾಂತರಗೊಂಡಿರ ಬಹುದೆಂದು ಕೆ. ವಿ. ರಮೇಶ್ ಮುಂತಾದ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ತುಳುನಾಡಿನ ಅತೀ ಪ್ರಾಚೀನ ಉಲ್ಲೇಖ ಸಂಗಂ ಸಾಹಿತ್ಯದಲ್ಲಿ ಕಂಡುಬರುತ್ತದೆ. ಕರ್ನಾಟಕದ ಶಾಸನಗಳಲ್ಲಿ ಕಂಡುಬರುವ ತುಳು, ತೌಲವ, ಅಥವಾ ತುಳು ಪದಗಳು ಪ್ರದೇಶವನ್ನು ಪ್ರತಿನಿಧಿಸುವುದಿಲ್ಲ, ಬದಲಾಗಿ ಜನಾಂಗವನ್ನು ನಿರ್ದೇಶಿಸುತ್ತವೆ. ಹೀಗಾಗಿ ತುಳುನಾಡಿನ ಪ್ರಾಚೀನತೆಯನ್ನು ನಿಖರವಾಗಿ ನಿರ್ಧರಿಸುವುದೂ ಒಂದು ಮಹತ್ವದ ಸಾಧನೆ. ಪ್ರಸ್ತುತ ಅಧ್ಯಯನದ ಮಿತಿಯು ವ್ಯಾಪಾರ ಮತ್ತು ಆಂತರಿಕ ವ್ಯಾಪಾರದ ಮಾರ್ಗಗಳಿಗೆ ಸೀಮಿತವಾಗಿರುವ ತುಳುನಾಡಿನ ಭೌಗೋಳಿಕ ಎಲ್ಲೆಗಳನ್ನು ವಿವಿಧ ಇತಿಹಾಸ ಕಾಲಘಟ್ಟಗಳಲ್ಲಿ ಗುರುತಿಸುವ ಪ್ರಯತ್ನಕ್ಕೆ ಮುಂದಾಗದೆ ತುಳುನಾಡಿನ ಎಲ್ಲೆಗಳನ್ನು ಈ ಹಿಂದೆ ವಿದ್ವಾಂಸರು ಒಪ್ಪಿಕೊಂಡಿರುವಂತೆಯೇ ಭಾವಿಸಿ ಆ ಪ್ರದೇಶದ ಆಂತರಿಕ ಮತ್ತು ವಿದೇಶೀ ವ್ಯಾಪಾರದ ಬಗೆಗಿನ ಕೆಲ ವಿಶೇಷ ಸಂಗತಿಗಳನ್ನು ಆಯಾಮಗಳನ್ನು ಸಂಶೋಧಿಸಿ ಪ್ರಸ್ತುತ ಪಡಿಸುವುದನ್ನೇ ಸಂಶೋಧನೆಯ ಮಿತಿಯಾಗಿಸಿಕೊಂಡಿದೆ ಈ ಶೀರ್ಷಿಕೆ. ಕೇರಳೋತ್ಪತ್ತಿ ಗ್ರಂಥದ ಆಧಾರದ ಮೇಲೆ ಕೆಲವು ವಿದ್ವಾಂಸರು ಕುಂದಾಪುರ ತಾಲೂಕಿನ ಕೋಟೇಶ್ವರದ ಪ್ರದೇಶವನ್ನು ತುಳುನಾಡಿನ ಕೇಂದ್ರವೆಂದು ಭಾವಿಸುತ್ತಾರೆ. ಆದರೆ ಪ್ರಾಚೀನ ತಮಿಳು ಗ್ರಂಥವಾದ ಅಹನಾನೂರು ಮತ್ತು ಪಟ್ಟಾಪಲಮಂಗಲಂನ ಎರಡನೇ ನಂದಿವರ್ಮನ ಕಾಲದ ಶಾಸನದಲ್ಲಿ ಉಕ್ತವಾಗಿರುವಂತೆ ಹೊನ್ನಾವರದ ಪ್ರದೇಶವನ್ನು ತುಳುನಾಡೆಂದು

ಗುರುತಿಸಲಾಗಿದೆ. ಸಾಲೆತ್ತೂರು ಅವರು ತುಳುವ ಪದ ಕನ್ನಡ ಪದದ ಮೂಲಪದವಾದ 'ತುಳು' ಪದದಿಂದ ಬಂದಿರಬಹುದೆಂದು ಭಾವಿಸುತ್ತಾರೆ. ಆದರೆ ತುಳುವ ಪದದ ಅರ್ಥವನ್ನು ಬೇರೆ ರೀತಿಯಾಗಿ ಮಾಡಲಾಗಿದೆ. ತುಳುವ ಎಂದರೆ ಶಾಂತಿಪ್ರಿಯರು ಮತ್ತು ಸಹಿಷ್ಣುಗಳು ಎಂಬ ಅರ್ಥವೂ ಬರುತ್ತದೆ. ಈ ವಾದವನ್ನು ಮಂಜೇಶ್ವರ ಗೋವಿಂದ ಪೈಗಳು ಅನುಮೋದಿಸುತ್ತಾರೆ. ಮತ್ತೊಂದು ಗುಂಪಿನ ವಿದ್ವಾಂಸರು ತುಳು ಪದ ಮೂಲಪದವಾದ ತುಳೈ ಅಂದರೆ ದೋಣಿಯ ಹುಟ್ಟು ಅಥವಾ ಹುಟ್ಟುಹಾಕು, ಹುಟ್ಟು, ದೋಣಿ ಮುಂತಾದ ಅರ್ಥಗಳನ್ನು ಕೊಡುತ್ತದೆ. ಅಲ್ಲದೆ ನೀರಿಗೆ ಹಾರು ಎಂಬ ಅರ್ಥವೂ ಇರುವುದರಿಂದ ತುಳುವರು ಸಮುದ್ರದೊಂದಿಗಿನ ಜೀವನವನ್ನು ನಡೆಸಿದವರೆಂದು ಅಂದರೆ ಮೀನುಗಾರ ಅಥವಾ ಸಮುದ್ರ ವ್ಯಾಪಾರದಲ್ಲಿ ತೊಡಗಿದವರೆಂದು ಅರ್ಥೈಸಬಹುದಾಗಿದೆ. ಮೂರನೆಯ ವಾದದಂತೆ 'ತುಳುವರು' ಪದ ದನಗಾಹಿಗಳೆಂಬ ಅರ್ಥವನ್ನು ಕೊಡುತ್ತದೆ. ಎಂ.ಕೆ.ಎಲ್.ಎನ್. ಮೂರ್ತಿಯವರ ಕಬ್ಬಿಣ ಯುಗ ಸಂಸ್ಕೃತಿ ಹರಡುವಿಕೆಯ ಆಧಾರದ ಮೇಲೆ ಹೇಳುವುದಾದರೆ ಕರ್ನಾಟಕದ ಕಡಲತೀರ ಕಬ್ಬಿಣಯುಗದಲ್ಲಿ ಮೊದಲು ಸಂಸ್ಕೃತೀಕರಣಗೊಂಡಿತೆಂದು ಆನಂತರ ಘಟ್ಟ, ಬಯಲುಸೀಮೆ ಇದಕ್ಕೆ ಒಳಪಟ್ಟಿತೆಂದು ಭಾವಿಸುತ್ತಾರೆ. ಈ ಹಿನ್ನೆಲೆಯಲ್ಲಿ ತುಳುವ ಪದವನ್ನು ಗಮನಿಸಿದರೆ ಇವರನ್ನು ಪ್ರಾದೇಶಿಕ ಮೂಲನಿವಾಸಿಗಳು ಎಂದೇ ಗುರುತಿಸಬೇಕಾಗುತ್ತದೆ. ತೌಳವ ಮೂಲನಿವಾಸಿಗಳಿದ್ದ ಪ್ರದೇಶವೇ ನಂತರ ತುಳುನಾಡಾಗಿ ಪರಿವರ್ತಿತವಾಗಿರಬಹುದು ಎಂದು ಭಾವಿಸಿ ತುಳು ಭಾಷೆಯನ್ನಾಡುವ ಭಾಷಿಕರು ಮತ್ತು ವಿವಿಧ ಕಾಲಘಟ್ಟಗಳಲ್ಲಿ ಈ ಭಾಷೆಯನ್ನಾಡುವ ಅರಸರು ರಾಜಕೀಯ ಪ್ರಭುತ್ವವನ್ನು ಮೆರೆದ ಪ್ರದೇಶಗಳನ್ನು ತುಳುನಾಡಾಗಿತ್ತೆಂದು ಭಾವಿಸಬೇಕಾಗುತ್ತದೆ.

ತುಳುನಾಡಿನ ವಿಸ್ತಾರವನ್ನು ಅಥವಾ ಅದರ ಕೇಂದ್ರವನ್ನು ಗುರುತಿಸುವುದು ಸ್ವಲ್ಪ ಜಟಿಲ ಸಮಸ್ಯೆ. ಅತ್ಯಂತ ಪ್ರಾಚೀನ ಉಲ್ಲೇಖದಂತೆ ತುಳುನಾಡಿನ ಕೇಂದ್ರ ಬನವಾಸಿಯ ಸುತ್ತಮುತ್ತಲಿನ ಹೊನ್ನಾವರ ಮತ್ತು ಭಟ್ಕಳ ನಡುವಿನ ಪ್ರದೇಶವಿರಬಹುದೆಂದು ಗುರುತಿಸಲಾಗಿದೆ. ಆದರೆ ಯಾವುದನ್ನೂ ನಿರ್ಧಾರವಾಗಿ ಹೇಳಲು ಸಾಧ್ಯವಿಲ್ಲ. ಗೋವಿಂದ ಪೈಯವರು ಒಂದನೆಯ ಶತಮಾನಕ್ಕೆ ಹಿಂದೆ ಕರ್ನಾಟಕದ ಕಡಲ ತೀರದಲ್ಲಿದ್ದ ಭಾಷೆಗಳ ಕುರಿತು ಈ ಬಗೆಯ ಅಭಿಪ್ರಾಯವನ್ನು ಕೊಡುತ್ತಾರೆ. ವೈತರಣಿಯಿಂದ ಗೋವೆಯವರೆಗೆ ಕೊಂಕಣಿ ಭಾಷೆ. ಗೋವೆಯಿಂದ ಬಾರ್ಕೂರು ಅಥವಾ ಸೀತಾನದಿಯವರೆಗೆ ಕನ್ನಡ, ಅಲ್ಲಿಂದ

ದಕ್ಷಿಣದಲ್ಲಿ ಚಂದ್ರಗಿರಿ ಅಥವಾ ನೀಲೇಶ್ವರದ ಹೊಳೆಯವರೆಗೂ ತುಳುಭಾಷೆ ಇದ್ದಿತೆಂದು ಅಭಿಪ್ರಾಯಪಡುತ್ತಾರೆ. ಇದರ ಆಧಾರದಿಂದ ನೋಡಿದಾಗಲೂ ತುಳುನಾಡಿನ ಎಲ್ಲೆ ಪ್ರಾರಂಭವಾಗುವುದು ಗೇರುಸೊಪ್ಪೆಯ ಆಸುಪಾಸಿನಲ್ಲಿ. ಈ ಎಲ್ಲ ಆಕರಗಳಿಂದ ನಿರ್ಧಾರವಾಗುವ ವಿಷಯವೆಂದರೆ, ಪ್ರಾಚೀನ ತುಳುವ ದೇಶದ ಎಲ್ಲೆ, ಹೊನ್ನಾವರ, ಗೇರುಸೊಪ್ಪೆ ಸುತ್ತುಮುತ್ತಲಿನ ಪ್ರದೇಶದಲ್ಲಿಯೇ ಪ್ರಾರಂಭವಾಗುವುದು ನಿಖರವಾಗಿ ವೇದ್ಯವಾಗುತ್ತದೆ. ಆದರೆ 9 ಮತ್ತು 10ನೇ ಶತಮಾನದ ಕಾಲದಲ್ಲಿ ಮತ್ತು ಅನಂತರ ಗೇರುಸೊಪ್ಪೆ, ಹೊನ್ನಾವರ ಮತ್ತು ಸುತ್ತಮುತ್ತಲಿನ ಪ್ರದೇಶವನ್ನು ತುಳುನಾಡೆಂದು ಕರೆಯುತ್ತಿದ್ದಂತೆ ಶಾಸನಾಧಾರಗಳು ದೊರೆಯುತ್ತದೆ. ಆದರೆ ತುಳುನಾಡಿನ ಬಗೆಗೆ ಇರುವ ಕಲ್ಪನೆಯನ್ನು ಇಟ್ಟುಕೊಂಡು ಅದರ ವಿಸ್ತಾರವನ್ನು ಹೇಳುವ ಪ್ರಯತ್ನವನ್ನು ಕೆಲವು ವಿದ್ವಾಂಸರು ನಡೆಸಿದ್ದಾರೆ. 12ನೇ ಶತಮಾನದವರೆಗೆ ತುಳುನಾಡು ಎಂದರೆ ಹೊಯ್ಸಳ ಸಾಮ್ರಾಜ್ಯಕ್ಕೆ ಪಶ್ಚಿಮ ದಿಕ್ಕಿನಲ್ಲಿದ್ದ ಸಮೀಪದ ನೀಲೇಶ್ವರದವರೆಗಿನ ತುಳು ಮಾತನಾಡುವ ಪ್ರದೇಶವನ್ನು ತುಳುನಾಡೆಂದು ಗುರುತಿಸಲಾಗಿತ್ತೆಂದು ತಿಳಿದುಬರುತ್ತದೆ. ವಿಜಯನಗರ ಕಾಲದ ತುಳುರಾಜ್ಯ ಅಥವಾ ಬಾರ್ಕೂರು ರಾಜ್ಯ, ತುಳುಭಾಷೆ ಮಾತನಾಡುವ ಒಟ್ಟು ಪ್ರದೇಶವಾದ ಬಾರ್ಕೂರಿನಿಂದ ನೀಲೇಶ್ವರದವರೆಗಿನ ಕಡಲತಡಿ ಮತ್ತು ಅದಕ್ಕೆ ಹೊಂದಿಕೊಂಡ ಘಟ್ಟಗಳೆಂದು ತಿಳಿದುಬರುತ್ತದೆ.

ಇಲ್ಲಿನ ಭೌಗೋಳಿಕ ಹಿನ್ನಲೆ ಒಳನಾಡಿನ ವ್ಯಾಪಾರಕ್ಕೆ ನೀಡಿದ ಕೊಡುಗೆ ಅಪಾರ. ಹೊಳೆ, ಹಳ್ಳ, ತೋಡು, ಕಡಲೊತ್ತುಗಳು, ದಟ್ಟ ಕಾಡುಗಳು, ಪಶ್ಚಿಮ ಘಟ್ಟದ ಸಾಲುಗಳೆ ಮುಂತಾದ ನಿಸರ್ಗದ ರಚನೆಗಳು ಸಾಗಾಣಿಕೆಯನ್ನು ಶ್ರಮದಾಯಕವಾಗಿಸಿವೆ. ತಲೆಹೊರೆಯಲ್ಲಿ ಹಾಗೂ ದೋಣಿಗಳ ಮುಖಾಂತರವೇ ಹೆಚ್ಚಿನ ಸರಕು ಸಾಗಣಿಕೆಯಾಗುತ್ತಿತ್ತು. ತಲೆಹೊರೆಯಲ್ಲಿ ಮತ್ತು ನದಿಯ ಹಿನ್ನೀರುಗಳಲ್ಲಿ ಅಕ್ಕಿ ಸಾಗಾಟವಾಗುತ್ತಿತ್ತು ಮತ್ತು ಇದಕ್ಕೆ ರಸ್ತೆ ಸುಂಕ ಹಾಗೂ ನದಿ ಸುಂಕಗಳೆರಡನ್ನೂ ಕೊಡಬೇಕಾಗಿತ್ತು. ಪ್ರಯಾಣಿಕರಿಗೆ ಮತ್ತು ಸೈನಿಕರಿಗಷ್ಟೇ ಹೆದ್ದಾರಿಗಳಾಗಲೀ, ಒಳ್ಳೆಯ ರಸ್ತೆಗಳ ಅನಿವಾರ್ಯತೆಯಿತ್ತು ಏಕೆಂದರೆ ಇಲ್ಲಿನ ಜನರ ಬಳಿ ಎತ್ತುಗಳು, ಬಂಡಿಗಳು ಇದ್ದವು. ಇದನ್ನು ಬುಖಾನನ್ ವರದಿಯೂ ದೃಢಿಕರಿಸುತ್ತದೆ. ಅಕ್ಕಿ, ಕಬ್ಬು, ತೆಂಗಿನಕಾಯಿ, ಅಡಿಕೆ, ಶುಂಠಿ ಕೊಬ್ಬರಿ, ಬೆಲ್ಲ, ತೆಂಗಿನನಾರು, ಕಾಚು ಇತ್ಯಾದಿಗಳು ಇಲ್ಲಿನ ಪ್ರಮುಖ ಉತ್ಪನ್ನಗಳಾಗಿದ್ದು, ವ್ಯಾಪಾರದ ಮುಖ್ಯ ವಸ್ತುಗಳಾಗಿದ್ದವು.

ಸ್ವಾಭಾವಿಕವಾದ ನದಿಗಳು, ಅಥವಾ ಕೃತಕವಾದ ಕಾಲುವೆಗಳ ಮೂಲಕ ಆಂತರಿಕವಾಗಿ ಹಡಗು ಅಥವಾ ದೋಣಿಗಳಲ್ಲಿ ಸರಕು ಮತ್ತು ಪ್ರಯಾಣಿಕರನ್ನು ಸಾಗಿಸುವ ವ್ಯವಸ್ಥೆಯನ್ನು ಒಳನಾಡಿನ ಜಲಸಾರಿಗೆ ಎಂದು ಕರೆಯುತ್ತಾರೆ. 18ನೇ ಶತಮಾನಕ್ಕಿಂತ ಮೊದಲು ಜಲಸಾರಿಗೆಯಿಂದ ಪ್ರಯಾಣಿಕರನ್ನು ಮತ್ತು ಸರಕನ್ನು ಒಳನಾಡಿನಲ್ಲಿ ಸಾಗಿಸಲಾಗುತ್ತಿತ್ತು. ದೊಡ್ಡ ಪ್ರಮಾಣದ ಸರಕನ್ನು ಕಡಿಮೆ ಖರ್ಚಿನಲ್ಲಿ ರವಾನಿಸಲು ಅನುಕೂಲವಾಗಿದೆ. ರಸ್ತೆ ಸಾರಿಗೆ ವ್ಯವಸ್ಥೆ ಇಲ್ಲದ ಪ್ರದೇಶಗಳಲ್ಲಿ ಜಲಸಾರಿಗೆಯ ಪ್ರಾಮುಖ್ಯ ಹೆಚ್ಚಾಗಿದೆ. ಕರಾವಳಿ ಕರ್ನಾಟಕದಲ್ಲಿ ಮಂಗಳೂರು, ಮತ್ತು ಕಾರವಾರಗಳ ನಡುವೆ ಕೆಲವು ನದಿಗಳಾದ ಕಾಳಿ, ಗಂಗಾವತಿ, ಅಘನಾಶಿನಿ, ಕೊಲ್ಲೂರು, ಸೀತಾ, ಗುರುಪುರ, ನೇತ್ರಾವತಿಗಳು ಒಳನಾಡಿನ ವ್ಯಾಪಾರಕ್ಕೆ ಬಳಕೆಯಾಗುತ್ತಿವೆ.

ನದಿ ವ್ಯಾಪಾರದ ಪರಿಣಾಮವು ತುಳುನಾಡಿನಲ್ಲಿ ಹೆಚ್ಚು ಇರಲಿಲ್ಲ. ಇದು ಕೆಲವು ಭೌಗೋಳಿಕ ಅಂಶಗಳ ಕಾರಣದಿಂದಾಗಿತ್ತು. ಮೊದಲಿಗೆ ಪಶ್ಚಿಮ ಘಟ್ಟ ಜಿಲ್ಲೆಯ ಪೂರ್ವದ ಗಡಿಯಾಗಿ ರೂಪುಗೊಂಡಿದೆ. ಈ ಪರ್ವತ ಶ್ರೇಣಿಯ ಕೆಲವು ಹಾದಿಗಳ ಮೂಲಕ ರಾಜ್ಯದ ಬಯಲುಪ್ರದೇಶದ ಭಾಗಗಳೊಂದಿಗೆ ಸಂವಹನ ಸಾಧ್ಯವಾಗಿಸಿಕೊಂಡಿದೆ ಎಂದು ಕರುಣಾಕರ್‌ರವರು ತಿಳಿಸಿದ್ದಾರೆ. ಆದರೆ ನದಿಗಳ ಮೂಲಕ ತುಳುನಾಡಿನಲ್ಲಿ ಹೆಚ್ಚು ಸರಕುಗಳು ಸಾಗಣಿಕೆಯಾಗುತ್ತಿತ್ತು ಎಂಬುದನ್ನು ಲ. ನ. ಸ್ವಾಮಿಯವರು, ಮಾಲತಿ ಮೂರ್ತಿಯವರು ವಿವರಿಸಿದ್ದಾರೆ. ಈ ಮೇಲಿನ ಹೇಳಿಕೆಗಳಿಂದ ತಿಳಿಯುವುದೆಂದರೆ, ನದಿ ಮಾರ್ಗಗಳು ವ್ಯಾಪಾರಕ್ಕೆ ಅನುಕೂಲವಾಗಿದ್ದನ್ನು ಧೃಡಿಕರಿಸುತ್ತವೆ.

ತುಳುನಾಡಿನ ಹೆಚ್ಚಿನ ನದಿಗಳು ಪಶ್ಚಿಮಘಟ್ಟದಲ್ಲಿ ತಮ್ಮ ಹುಟ್ಟನ್ನು ಪಡೆದುಕೊಳ್ಳುತ್ತವೆ ಇದಲ್ಲದೆ ಘಟ್ಟಗಳು ಸಮುದ್ರದಿಂದ 80 ಕಿಲೋ ಮೀಟರ್‌ಗಳಿಗಿಂತಲೂ ಹೆಚ್ಚು ದೂರದಲ್ಲಿವೆ. ಆದ್ದರಿಂದ ಈ ನದಿಗಳು ಪ್ರತಿಯೊಂದು ಕಡೆಯೂ 160 ಕಿಲೋ ಮೀಟರ್‌ಗಳಿಗಿಂತ ಮೀರಿದೆ. ನೈಋತ್ಯ ಮಾನ್ಸೂನ್ ಮಳೆ, ಈ ನದಿಗಳಲ್ಲಿ ಇದು ತ್ವರಿತವಾದ ಪ್ರವಾಹಗಳಲ್ಲಿ ಪರಿವರ್ತಿತವಾಗಿ ಹಲವು ಭಾರಿ ವಿನಾಶಕಾರವಾಗಿ ಪರಿವರ್ತಿತವಾಗುತ್ತವೆ. ಅದಲ್ಲದೆ ನದಿಸಾರಿಗೆಗೆ ಅನುಕೂಲಕರವಾದ ನದಿಗಳನ್ನು ನೀಡಿದೆ ನದಿಗಳಾದ ನೇತ್ರಾವತಿ, ಗುರುಪುರ, ಗಂಗೊಳ್ಳಿ, ಸೀತಾನದಿ ಮತ್ತು ಸ್ವರ್ಣ ನದಿಗಳನ್ನು ಸ್ಥಳೀಯ ವ್ಯಾಪಾರಿಗಳು ತಮ್ಮ

ಸರಕುಗಳನ್ನು ಹಲವಾರು ವ್ಯಾಪಾರ ಕೇಂದ್ರಗಳಿಗೆ ಸಾಗಿಸಲು ಬಳಸಿದರು. ಜಿಲ್ಲೆಯ ಉತ್ತರದ ಭಾಗಗಳಲ್ಲಿ ನದಿಗಳ ಮೂಲಕ ನೀರಿನ ಸಾಗಣೆಯ ಸಾಧ್ಯತೆ ಹೆಚ್ಚಾಗಿದ್ದಿತು.

ಮಂಗಳೂರು, ಭಟ್ಕಳ, ಹೊನ್ನಾವರ, ಮಲಬಾರ್‌ನ ಕೊಚ್ಚಿನ್ ಪುಲಿಕಾಟ್, ಪಸುಪಳ್ಳಿ ಮತ್ತು ಮಂಗಳೂರಿನ ಕಯಾಲ್ ನಡುವೆ ಸಣ್ಣ ಹಡಗುಗಳ ಮೂಲಕ ಅಂತರ-ಕರಾವಳಿ (Inter-Coastal) ವ್ಯಾಪಾರವನ್ನು ನಡೆಸಲಾಯಿತು. ಅಕ್ಕಿ, ತೆಂಗಿನ ಎಣ್ಣೆ, ಬೆಲ್ಲ ಮತ್ತು ಇತರೆ ಪದಾರ್ಥಗಳು ಮಂಗಳೂರಿನಿಂದ ಹೊರಭಾಗಗಳಿಗೆ ಹೋಗುತ್ತವೆ. ಪ್ರತಿಯಾಗಿ ಹತ್ತಿ ಮತ್ತು ರೇಷ್ಮೆ ಸಾಮಾಗ್ರಿಗಳನ್ನು ತರಲಾಯಿತು. ಕರ್ನಾಟಕದ ಕರಾವಳಿಯ ಬಂದರುಗಳ ನಡುವಣ ವ್ಯಾಪಾರವು ಈ ಅವಧಿಯಲ್ಲಿಯೇ ಚುರುಕಾಗಿತ್ತು.

ಪ್ರಾಚೀನ ಕಾಲದಿಂದಲೂ ತುಳುನಾಡಿನ ನದಿಗಳು ಆಂತರಿಕ ವ್ಯಾಪಾರದಲ್ಲಿ ಪ್ರಮುಖ ಪಾತ್ರ ವಹಿಸಿವೆ. ನೇತ್ರಾವತಿ ನದಿಯು ಸಾಮಾನ್ಯ ಪ್ರವಾಹ ಕಾಲದಲ್ಲಿ ಉಪ್ಪಿನಂಗಡಿಯವರೆಗೆ ಸಂಚರಿಸಬಹುದಾದ ನದೀ ಮಾರ್ಗವಾಗಿತ್ತು. ಇದೇ ರೀತಿ ಕರಾವಳಿಯ ಬಹುತೇಕ ನದಿಗಳೆಲ್ಲವೂ ಸಾಕಷ್ಟು ದೂರದವರೆಗೆ ಸರಕು ಸಾಗಾಣಿಕೆಯನ್ನು ನದಿಮಾರ್ಗದಲ್ಲಿ ನೆರವೇರಿಸುತ್ತವೆ. ಇಂದು ನದಿ ಪಾತ್ರಗಳಲ್ಲಿ ಬಂದ ಅಣೆಕಟ್ಟುಗಳು, ಅರಣ್ಯಗಳ ಒತ್ತುವರಿ, ಗಣಿಗಾರಿಕೆ ಹಾಗೂ ಜನಸಂಖ್ಯೆ ಹೆಚ್ಚಳ, ವಸತಿ ಪ್ರದೇಶಗಳ ಬೆಳವಣಿಗೆ, ನದಿಯ ಹರಿವಿನ ಪ್ರಮಾಣವನ್ನು ನಿಯಂತ್ರಿಸುವುದರಿಂದ ಹಿಂದಿನ ಕಾಲದ ನೈಜ ಪ್ರದೇಶದವರೆಗೆ, ನಾವು ಇಂದು ಸಾಗಲು ಸಾಧ್ಯವಾಗುತ್ತಿಲ್ಲವಾದರೂ ಈ ನದಿಗಳು ಅತ್ಯುತ್ತಮ ಒಳನಾಡಿನ ವಾಪಾರದ ಜೀವನಾಡಿಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ತುಳುನಾಡಿನಲ್ಲಿ ಅನೇಕ ನದಿಗಳು ಮತ್ತು ಹಲವಾರು ಹಿನ್ನೀರುಗಳು ಇವೆ. ಈ ಪ್ರದೇಶದ ಮುಖ್ಯ ನದಿಗಳು, ಚಂದ್ರಗಿರಿ ಅಥವಾ ಪಯಸ್ವಿನಿ, ಬೇಕಲ್, ಚಿತ್ತಾರಿ, ಕವಾಯ್, ಕುಮಾರಧಾರ, ನೇತ್ರಾವತಿ, ಗುರುಪುರ, ಸುವರ್ಣ, ಅಥವಾ ಸ್ವರ್ಣ, ಸೀತಾ ಮತ್ತು ಗಂಗೊಳ್ಳಿ (ಪಂಚಗಂಗಾವಳಿ), ಕಾಳಿ ನದಿಗಳಾಗಿವೆ. ಅಸಂಖ್ಯಾತ ಆದರೂ ಇವುಗಳ ಪೈಕಿ ಯಾವುದೂ 100 ಮೈಲಿಗಳಿಗಿಂತ ಹೆಚ್ಚು ಉದ್ದವಾಗಿಲ್ಲ. ನದಿಗಳು ಮತ್ತು ಹಿನ್ನೀರುಗಳು ಕೃಷಿಯ ಕಾರ್ಯಾಚರಣೆಗಳಿಗೆ ಅನುಕೂಲ ಕಲ್ಪಿಸುತ್ತವೆ. ಕೃತಕ ನೀರಾವರಿ ಮೇಲೆ ಅವಲಂಬನೆಯನ್ನು ಕಡಿಮೆ ಮಾಡುತ್ತದೆ ಮತ್ತು ಬಹುತೇಕವಾಗಿ ಆಂತರಿಕ ಸಂವಹನವನ್ನು ಉತ್ತೇಜಿಸುತ್ತವೆ.

ಕರಾವಳಿ ಕರ್ನಾಟಕದ ನದಿಗಳ ಒಳನಾಡಿನ ವ್ಯಾಪಾರದ ಮಾರ್ಗಗಳ ಬಗ್ಗೆ ನದಿಗಳು ಎಲ್ಲಿಯವರೆಗೆ ಸಂಚಾರಕ್ಕೆ ಯೋಗ್ಯವಾಗಿದ್ದವೆಂದು ದಾಖಲಿಸುತ್ತಾರೆ. ಶರಾವತಿ ನದಿಯು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯಿಂದ ಸುಮಾರು 16 ಕಿ.ಮೀ. ದೂರದಲ್ಲಿರುವ ಕವಲೇದುರ್ಗದ ಬಳಿ ಅಂಬುತೀರ್ಥದಲ್ಲಿ ಹುಟ್ಟುತ್ತದೆ. ಅದರ ಮೂಲದಿಂದ ವಾಯವ್ಯ ದಿಕ್ಕಿನಲ್ಲಿ ಹರಿಯುತ್ತದೆ. ಪುಟ್ಟಗುಪ್ಪೆ ಮತ್ತು ಬಾರಂಗಿ ಹತ್ತಿರ ಹರಿದ್ರವತಿ ಮತ್ತು ಯೆನ್ನೆಹೊಳೆ ಉಪನದಿಗಳು ಶರಾವತಿ ನದಿಗೆ ಸೇರಿಕೊಳ್ಳುತ್ತವೆ. ಮೇಲಿನವುಗಳ ಜೊತೆಗೆ ಹುರಳಿಹೋಳೆ, ಬಿರ್‌ದನಹೊಳೆ, ಸರ್ಮ್ಮಾನ್ವತಿ, ಧುಳಿಮಕ್ಕಿ ಮತ್ತು ಇತರ ಹೊಳೆಗಳು ಉಪನದಿಗಳು ಶಿವಮೊಗ್ಗ ಜಿಲ್ಲೆಯಲ್ಲಿ ನದಿಗೆ ಸೇರುತ್ತವೆ. ಶರಾವತಿ ನದಿಯು ತಲಗುಪ್ಪದ ಬಳಿ ಜೋಗ್ ಫಾಲ್ಸ್ ಎಂದು ಕರೆಯಲ್ಪಡುವ ಜಲಪಾತವನ್ನು ಸೃಷ್ಟಿಸಿದೆ. ನಂತರ ಇದು ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದ ಸಮೀಪ ಅರಬ್ಬೀ ಸಮುದ್ರವನ್ನು ಸೇರುತ್ತದೆ. ಈ ನದಿಯ ಒಟ್ಟು ಉದ್ದವು 128 ಕಿ.ಮೀ. ಮತ್ತು ನಾಡದೋಣಿಗಳಾದ, ಮಚುವೆಗಳು, ಪತೆಮರಿಗಳು ಗೇರುಸೊಪ್ಪಾವರೆಗೆ ಸಂಚರಿಸಬಹುದಾಗಿತ್ತು.

ನೇತ್ರಾವತಿ ನದಿಯು ತುಳುನಾಡಿನ ಪ್ರಮುಖ ನದಿಯಾಗಿದೆ. ಇದು ಪಶ್ಚಿಮ ಘಟ್ಟದ ಕುದುರಮುಖ ಶ್ರೇಣಿಯಲ್ಲಿ ಹುಟ್ಟಿ, ಬಂಗಾಡಿ ಕಣಿವೆಯ ಮುಖಾಂತರ ಹರಿದು, ಬೆಳ್ತಂಗಡಿ ತಾಲೂಕನ್ನು ದಾಟಿ, ಬಂಟ್ವಾಳದ ಮುಖಾಂತರ ಮಂಗಳೂರಿನೆಡೆ ಸಾಗಿ ಕೊಡಿಯಾಲದ ಬಳಿ ಅರಬೀಸಮುದ್ರವನ್ನು ಸೇರುತ್ತದೆ. ಈ ನದಿಯು ಬೆಳ್ತಂಗಡಿ ತಾಲೂಕಿನಲ್ಲಿ ಉತ್ತರದಿಂದ ದಕ್ಷಿಣಕ್ಕೆ ಮತ್ತು ಮುಂದೆ ನೈಋತ್ಯ ದಿಕ್ಕಿಗೆ ಹರಿದು, ಬಂಟ್ವಾಳ ತಾಲೂಕಿನ ಮಧ್ಯಭಾಗದಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಹರಿದು, ಮಂಗಳೂರು ತಾಲೂಕಿನ ದಕ್ಷಿಣ ಭಾಗದಲ್ಲಿ ತಾಲೂಕನ್ನು ಅಡ್ಡದಿಡ್ಡಿಯಾಗಿ ಹಾಯ್ದು ಮಂಗಳೂರಿನ ದಕ್ಷಿಣ ಭಾಗದಲ್ಲಿ ಗುರುಪುರ ನದಿಯನ್ನು ಕೂಡಿಕೊಂಡು ಅರಬೀ ಸಮುದ್ರವನ್ನು ಸೇರುತ್ತದೆ. ನದಿಯ ಹರಿವಿನ ಒಟ್ಟು ಉದ್ದ 96 ಕಿ.ಮೀ. ಮುಂಗಾರು ಮಳೆಯ ದಿನಗಳಲ್ಲಿ ನೇತ್ರಾವತಿಯಲ್ಲಿ ಅಧಿಕ ಪ್ರವಾಹವಿರುತ್ತದೆ. ಮಂಗಳೂರಿನ ಬಳಿ ನದಿಯ ಪಾತ್ರ ವಿಶಾಲವಾಗಿದ್ದು, ನದಿಯ ಮಧ್ಯೆ ಸಣ್ಣ ದ್ವೀಪಗಳಿವೆ. ಫಲವತ್ತಾಗಿರುವ ಈ ಭಾಗಗಳಲ್ಲಿ ಭತ್ತ ಮತ್ತು ಕಬ್ಬು ಬೆಳೆಗೆ ಅನುಕೂಲವಾಗಿದೆ. ಕುಮಾರಧಾರಾ ಮತ್ತು ಗುರುಪುರ ಹೊಳೆಗಳು ನೇತ್ರಾವತಿ ನದಿಯ ಉಪನದಿಗಳು. ಪುತ್ತೂರು ತಾಲೂಕಿನಲ್ಲಿ ಆಗ್ನೇಯದಂಚಿನಿಂದ ಹರಿದು ಬರುವ ಕುಮಾರಧಾರಾ ನದಿಯು ನಂತರ ತಾಲೂಕಿನ ಮಧ್ಯದಲ್ಲಿ ಹರಿದು ಉಪ್ಪಿನಂಗಡಿಯ ಬಳಿ ನೇತ್ರಾವತಿ ನದಿಯನ್ನು

ಕೂಡಿಕೊಳ್ಳುತ್ತದೆ. ನೇತ್ರಾವತಿ ನದಿಯು ಮಂಗಳೂರಿನಿಂದ ಬಂಟ್ವಾಳದವರೆಗೆ ಸದಾಕಾಲದಲ್ಲಿಯೂ, ಮಳೆಗಾಲದಲ್ಲಿ ಉಪ್ಪಿನಂಗಡಿಯವರೆಗೂ ನಾಡದೋಣಿಗಳಲ್ಲಿ ಸಂಚರಿಸಲು ಯೋಗ್ಯವಾಗಿದೆ.

ಗೌರಿಹೊಳೆಯು ಪುತ್ತೂರು ತಾಲೂಕಿನ ಈಶಾನ್ಯದಲ್ಲಿ ಶಿರಾಡಿ ಘಟ್ಟದೆಡೆಯಿಂದ ಹರಿದುಬಂದು ಕಡಬದಿಂದ ಸ್ವಲ್ಪ ಪಶ್ಚಿಮದಲ್ಲಿ ಕುಮಾಧಾರಾ ನದಿಯನ್ನು ಸೇರುತ್ತದೆ. ಗುರುಪುರ ಹೊಳೆಯು ಮಂಗಳೂರು ತಾಲೂಕಿನ ಪೂರ್ವದ ಗಡಿಯಲ್ಲಿ ಸ್ವಲ್ಪ ದೂರ ಹರಿದು, ಅನಂತರ ವಾಯವ್ಯಕ್ಕೆ ತಿರುಗಿ ತಾಲೂಕಿನ ಮಧ್ಯೆ ಅಡ್ಡವಾಗಿ ಹಾಯ್ದು, ಅನಂತರ ದಕ್ಷಿಣಾಭಿಮುಖವಾಗಿ ಕರಾವಳಿಗೆ ಸಮಾನಾಂತರವಾಗಿ ಮಂಗಳೂರಿನ ದಕ್ಷಿಣ ತುದಿಯ ವರೆಗೂ ಹರಿದು ನೇತ್ರಾವತಿ ನದಿಯ ಜೊತೆಗೂಡಿ ಅರಬ್ಬೀಸಮುದ್ರವನ್ನು ಸೇರುತ್ತದೆ.

ಮುಲ್ಕಿ ನದಿಯು ಮಂಗಳೂರು ತಾಲೂಕನ್ನು ಉಡುಪಿ ಮತ್ತು ಕಾರ್ಕಳ ತಾಲೂಕುಗಳನ್ನು ಬೇರ್ಪಡಿಸುವ ಉತ್ತರ ಗಡಿಯಾಗಿ ಹರಿಯುತ್ತದೆ. ಪಯಸ್ವಿನಿ ನದಿಯು ಸುಳ್ಯ ತಾಲೂಕಿನ ದಕ್ಷಿಣದಲ್ಲಿ ಆಗ್ನೇಯದಿಂದ ವಾಯವ್ಯಕ್ಕೆ ಹರಿದು ಕೇರಳ ರಾಜ್ಯವನ್ನು ಪ್ರವೇಶಿಸುತ್ತದೆ. ಈ ನದಿಗಳು ದಾರಿಯುದ್ದಕ್ಕೂ ಜಿಲ್ಲೆಯ ಪ್ರಾಚೀನ ವ್ಯಾಪಾರಿ ಮಾರ್ಗಗಳಿದ್ದು, ಅವು ಇಂದು ಸಂಚಾರಿ ಮಾರ್ಗಗಳಾಗಿ ಪರಿವರ್ತಿತವಾಗಿವೆ ಈ ಮಾರ್ಗಗಳ ಬಳಕೆ ಅವುಗಳು ಸೇರುತ್ತಿದ್ದ ಗಮ್ಯವನ್ನು ಮುಂದಿನ ಪುಟಗಳಲ್ಲಿ ವಿಶ್ಲೇಷಿಸಲಾಗಿದೆ.

ತುಳುನಾಡಿನ ಆಂತರಿಕ ವ್ಯಾಪಾರದ ಸಾಮಗ್ರಿಗಳನ್ನು ಮತ್ತು ವ್ಯಾಪಾರಿಗಳು ಎಂಟು ವಿಭಾಗವಾಗಿ ವರ್ಗೀಕರಿಸಬಹುದು. ಅಂದರೆ, ಆಹಾರ ಸಾಮಾಗ್ರಿಗಳು, ಹಣ್ಣುಗಳು, ಮಸಾಲೆಗಳು, ಲೋಹಗಳು, ಜವಳಿ, ಪ್ರಾಣಿಗಳು, ಐಷಾರಾಮಿ ಸರಕುಗಳು ಮತ್ತು ದಿನನಿತ್ಯದ ಬಳಕೆಯ ವಸ್ತುಗಳು. ಆಹಾರದ ಸಾಮಾಗ್ರಿಗಳೆಂದರೆ ಅಕ್ಕಿ, ಗೋಧಿ, ಭತ್ತ, ವಿವಿಧ ರೀತಿಯ ಧಾನ್ಯಗಳು, ಮೀನು, ಮೆಣಸಿನಕಾಯಿಗಳು, ಹಾಲು, ಸಕ್ಕರೆ, ತೆಂಗಿನ ಎಣ್ಣೆ, ಬೆಲ್ಲ, ಉಪ್ಪು, ಮತ್ತು ತುಪ್ಪ ಮೊದಲಾದ ವಿವಿಧ ಧಾನ್ಯಗಳನ್ನು ಒಳಗೊಂಡಿವೆ. ಅಕ್ಕಿ, ತೆಂಗಿನಕಾಯಿ, ತೆಂಗಿನನಾರು, ಕಾಳುಮೆಣಸು ಮುಂತಾದವುಗಳನ್ನು ಈ ಕರಾವಳಿಯುದ್ದಕ್ಕೂ ದೋಣಿಗಳ ಮೂಲಕ ವಿವಿಧ ಬಂದರುಗಳಿಗೆ, ಒಳನಾಡಿನ ವ್ಯಾಪಾರ ಕೇಂದ್ರಗಳಿಗೆ ಸಾಗಿಸಲಾಗುತ್ತಿತ್ತು. ಭಟ್ಕಳ, ಬಸ್ರೂರು ಮತ್ತು ಬಾರ್ಕೂರು ಬಂದರುಗಳಿಂದ ಶ್ರೇಷ್ಠ ಗುಣಮಟ್ಟದ ಬಿಳಿ

ಅಕ್ಕಿಯನ್ನು ರಫ್ತು ಮಾಡಲಾಗುತ್ತಿತ್ತು. ದಕ್ಷಿಣದ ಬಂದರುಗಳಾದ ಮಂಗಳೂರು ಮತ್ತು ಕುಂಬಳೆಗಳಿಂದ ದಪ್ಪ, ಒರಟಾದ ಕಪ್ಪು, ಕೆಂಪು ಮತ್ತು ಕಡಿ ಅಕ್ಕಿಯನ್ನು ರಫ್ತು ಮಾಡಲಾಗುತ್ತಿತ್ತು. ಈ ಕರಾವಳಿ ಬಂದರುಗಳಿಂದ ಮಲಬಾರ್ ಪ್ರದೇಶಕ್ಕೂ, ಕೊಂಕಣ ಪ್ರದೇಶ, ಪರ್ಶಿಯನ್ ಕೊಲ್ಲಿ ಮತ್ತು ಕೆಂಪು ಸಮುದ್ರದ ಬಂದರುಗಳಿಗೂ ಅಕ್ಕಿಯನ್ನು ರಫ್ತು ಮಾಡುತ್ತಿದ್ದರು. ತುಳುನಾಡು ಹಲವಾರು ನೈಸರ್ಗಿಕ ಬಂದರುಗಳನ್ನು ಹೊಂದಿತ್ತು. ಅವುಗಳಲ್ಲಿ ಭಟ್ಕಳ ಅಂತಾರಾಷ್ಟ್ರೀಯ ವಾಣಿಜ್ಯ ಕೇಂದ್ರವಾಗಿತ್ತು. ತುಳುನಾಡಿಗೂ ಮಲೆನಾಡಿಗೂ ನಡುವಿನ ಸಂಪರ್ಕವು ದುರ್ಗಮ ಬೆಟ್ಟ ಮತ್ತು ಕಣಿವೆಗಳ ಮೂಲಕ ಕಾಲುದಾರಿ ಮತ್ತು ರಸ್ತೆಗಳ ಮೂಲಕ ಸಾಧ್ಯವಿತ್ತು. ಇದೇ ಮಾರ್ಗವನ್ನು ಅನುಸರಿಸಿ ವಿದೇಶಿಯರು ಒಳನಾಡನ್ನು ಪ್ರವೇಶಿಸಿ ವ್ಯಾಪಾರ, ವಹಿವಾಟು ಇತ್ಯಾದಿ ಕಾರ್ಯಗಳಲ್ಲಿ ನಿರತರಾದರು ಮಲೆನಾಡಿನ ಪ್ರಮುಖ ವಾಣಿಜ್ಯ ಬೆಳೆಗಳಾದ ಮೆಣಸು, ಏಲಕ್ಕಿ ಇತ್ಯಾದಿ ಸಂಭಾರ ಪದಾರ್ಥಗಳು ವಿದೇಶಿಯರನ್ನು ಆಕರ್ಷಿಸಿತು. ಈ ಸರಕುಗಳಿಗೆ ವಿದೇಶಿ ಮಾರುಕಟ್ಟೆಯಲ್ಲಿ ಭಾರೀ ಬೇಡಿಕೆ ಇತ್ತು ಈ ವ್ಯಾಪಾರಿಗಳು ಒಂದಕ್ಕೆ ನೂರರಷ್ಟು ಲಾಭವನ್ನು ಪಡೆಯುತ್ತಿದ್ದರು. ಹಾಗೆಯೇ ಕಾರವಾರ, ಮಿರ್ಜಾನ್, ಬಸರೂರು, ಬಾರಕೂರು, ಮಂಗಳೂರು, ಮತ್ತು ಕಾಸರಗೋಡು ಬಂದರುಗಳ ಮೂಲಕ ವಿದೇಶಿ ವ್ಯಾಪಾರ ವಹಿವಾಟುಗಳು ನಡೆಯುತ್ತಿದ್ದವು. ವಿದೇಶಿಯರು ತುಳುನಾಡಿನ ಕರಾವಳಿ ತೀರದ ಮತ್ತು ಒಳನಾಡಿನ ಪ್ರಮುಖ ಪಟ್ಟಣಗಳಾದ ಭಟ್ಕಳ, ಮಂಗಳೂರು, ಹೊನ್ನಾವರ, ಬೈಂದೂರು, ಬಸರೂರು, ಕುಂಬಳೆ, ಮಿರ್ಜಾನ್ ಮಂಜೇಶ್ವರ, ಕಾಸರಗೋಡು, ಕಾರ್ಕಳ, ಮೂಡಬಿದರೆ, ಕಳಸ, ಸಾಗರ, ಚಂದಾವರ ಬನವಾಸಿ ಇತ್ಯಾದಿ ಪಟ್ಟಣಗಳಲ್ಲಿ ನೆಲೆಸಿ ವ್ಯಾಪಾರ ವಹಿವಾಟಿನಲ್ಲಿ ತೊಡಗಿಸಿಕೊಂಡಿದ್ದಕ್ಕೆ ಆಕರಗಳು ಲಭ್ಯವಿದೆ.

ಭೂಮಾರ್ಗವಾಗಿ ದೇಶದ ಎಲ್ಲ ಕಡೆಗಳಿಂದ ಸಂಪರ್ಕಿಸಬಹುದಾದ ಹಾಗೂ ಸಮುದ್ರಮಾರ್ಗವಾಗಿ ವಿದೇಶಿಯರು ತಲುಪಬಹುದಾದ ಈ ಭೂಪ್ರದೇಶ ಪ್ರಾಚೀನ ಕಾಲದಿಂದಲೂ ಬೇಟೆಯಾಡುವವರಿಗೆ, ಮೀನುಗಾರರಿಗೆ, ಉತ್ತು ಬಿತ್ತು ಬದುಕುವವರಿಗೆ, ವ್ಯಾಪಾರಸ್ಥರಿಗೆ, ಕುಶಲಕರ್ಮಿಗಳಿಗೆ, ಜೀವನ ನಿರ್ವಹಣೆಗೆ ಅಗತ್ಯವಿದ್ದ ಪ್ರಾಕೃತಿಕ ಸೌಲಭ್ಯಗಳನ್ನು ಒದಗಿಸಿತ್ತು. ಶತ್ರುಗಳ ಪೀಡೆಯಾಗಲೀ, ವಿಷಮ ಹವಾಮಾನವಾಗಲೀ, ಇತರ ಪ್ರಾಕೃತಿಕ ತೊಂದರೆಗಳಾಗಲೀ ಹೆಚ್ಚಿನ ಮಟ್ಟದಲ್ಲಿಲ್ಲದ ಕಾರಣ ಶಾಂತಿಪ್ರಿಯರಿಗೆ ನೆಲೆಸಲು ಇದೊಂದು ಆದರ್ಶ ತಾಣವಾಗಿ ಮೂಡಿಬಂತು.

ತುಳುನಾಡವರಿಗೆ ಕ್ರಿ. ಶ. 2ನೇ ಶತಮಾನದಲ್ಲೇ ಗ್ರೀಕರೊಂದಿಗೆ, ರೋಮ್-ಚೀನಾ-ಅರೇಬಿಯದೊಂದಿಗೆ ನಿಕಟ ವ್ಯಾಪಾರ-ವಹಿವಾಟವಿತ್ತು. ವ್ಯಾಪಾರಿಗಳು ಹೆಚ್ಚಾಗಿ ವಿದೇಶಿಯರು ಮತ್ತು ಮುಸಲ್ಮಾನರಾಗಿದ್ದರು. ಕ್ರಿ. ಶ. 7ನೇ ಶತಮಾನದ ಹೊತ್ತಿಗೆ ಇಲ್ಲವೇ ಅದಕ್ಕೂ ಸ್ವಲ್ಪ ಮುಂಚೆ ಅರಬ್ಬಿಗಳು ಇಲ್ಲಿ ವ್ಯಾಪಾರ ಮಾಡಲು ಬಂದರು. ವ್ಯಾಪಾರ ಮಾಡುವ ಅರಬರನ್ನು ಸ್ಥಳೀಯರು 'ಬ್ಯಾರಿ'(ವ್ಯಾಪಾರಿ)ಗಳು ಎಂದು ಕರೆದರು. ಅವರಲ್ಲಿ ಎಷ್ಟೋ ಮಂದಿ ಇಲ್ಲಿನ ಹುಡುಗಿಯರನ್ನು ಮದುವೆಯಾಗಿ ಮಂಗಳೂರು, ಉಳ್ಳಾಲ, ಕಾಸರಗೋಡು, ಬಸ್ರೂರು, ಭಟ್ಕಳ, ಹೊನ್ನಾವರ ಮುಂತಾದ ಪಟ್ಟಣಗಳಲ್ಲಿ ನೆಲೆನಿಂತರು [ಇವರ ಮಕ್ಕಳಿಗೆ 'ಮಾಪಿಳ್ಳೆ'ಗಳು ಎಂದು ಹೆಸರು. ಈ ಮಾಪಿಳ್ಳೆಗಳಲ್ಲಿ ಅನೇಕರು ಬಂಗರಾಜರ ಸೈನ್ಯದಲ್ಲಿಯೂ, ಉಲ್ಲಾಳದ ಚೌಟರಾಣಿಯ ನೌಕಾಪಡೆಯಲ್ಲೂ ಕೆಲಸ ಮಾಡಿದ್ದರು. ಇವರಲ್ಲಿ ಬಹಳಷ್ಟು ಜನ ವ್ಯಾಪಾರದಿಂದ ತುಂಬಾ ಶ್ರೀಮಂತರಾಗಿ ಪ್ರತಿಷ್ಠೆಯ ಸ್ಥಾನ ಗಳಿಸಿಕೊಂಡರು]. 'ಹಂಜುಮಾನ' ಎನ್ನುವ ವ್ಯಾಪಾರ ಸಂಘಟನೆಗಳನ್ನು ಅವರು ಹೊಂದಿದ್ದರು. ತುಳುನಾಡನ್ನು ಸಮುದ್ರ ವ್ಯಾಪಾರವು ಶ್ರೀಮಂತಗೊಳಿಸಿತು. ಸಾಗರೋತ್ತರ ಪ್ರದೇಶಗಳಿಗೆ ತಿಳಿದಿರುವ ವ್ಯಾಪಾರ ಸಮುದಾಯಗಳ ಸಮುದ್ರ ವ್ಯಾಪಾರದ ಚಟುವಟಿಕೆಗಳ ಮೂಲಕ ನೆನಪಿನಲ್ಲಿಟ್ಟುಕೊಳ್ಳಲು ಆಸಕ್ತಿದಾಯಕ ಅಂಶಗಳಲ್ಲಿ ಒಂದಾಗಿದೆ ಎಂದು ವ್ಯಾಪಾರ ಸಮುದಾಯಗಳ ಉಪಸ್ಥಿತಿಯು ಈ ಪ್ರದೇಶದ ಧಾರ್ಮಿಕ ಆಧಾರಿತ ಸಂಸ್ಕೃತಿ ಇತಿಹಾಸದ ಅಧ್ಯಯನವಾಗಿದೆ. ಪ್ರಾಚೀನ ತುಳುವರು ಸಾಗರೋತ್ತರ ಸಂಪರ್ಕವನ್ನಿಟ್ಟುಕೊಂಡಿರುವುದು ಜೊತೆಗೆ ವ್ಯಾಪಾರ ಕ್ಷೇತ್ರದಲ್ಲಿ ಸೇತುವೆಯಾಗಿ ಕಾರ್ಯನಿರ್ವಹಿಸಿರುವುದು ಸಾಂದರ್ಭಿಕ ಆಕರಗಳಿಂದ ದೃಢಪಟ್ಟಿದೆ. ಕಾಲಕ್ರಮೇಣ ತುಳುನಾಡಿನ ಮೇಲೆ ಪ್ರಭುತ್ವವನ್ನು ಸಾಧಿಸಿರಬಹುದು. ಪ್ರಾಚೀನ ಲಿಖಿತ ಆಧಾರಗಳು ಕ್ರಿಸ್ತಪೂರ್ವ ಅಂತ್ಯ ಮತ್ತು ಕ್ರಿಸ್ತಶಕದ ಪ್ರಾರಂಭದ ಕಾಲದಿಂದಲೇ ಕರ್ನಾಟಕದ ಕಡಲತೀರ ಹೋರದೇಶಗಳೊಂದಿಗೆ ಸಂಪರ್ಕ ಸಾಧಿಸಿದ್ದನ್ನು ನಿಖರವಾಗಿ ಗುರುತ್ತಿಸುತ್ತವೆ. ಗ್ರೀಕ್ ದೇಶದ ಪ್ಲಿನಿಯ 'ಪ್ರಾಗ್ಯೆತಿಕ ಚರಿತ್ರೆ'ಯಲ್ಲಿ ಕರ್ನಾಟಕದ ಕಡಲತೀರದ ಬಗೆಗೆ ಪ್ರಥಮ ಉಲ್ಲೇಖ ದೊರೆಯುತ್ತದೆ. ಈತನ ಗ್ರಂಥದಲ್ಲಿ 'ಮುಜ್ಯೆರಿಸ್' ಎಂಬ ಬಂದರಿನ ಬಗ್ಗೆ ಮಾಹಿತಿ ಇದೆ. ಅದು ಕರ್ನಾಟಕದ ಬಂದರೆಂದು ಹಲವಾರು ಅಭಿಪ್ರಾಯಪಟ್ಟಿದ್ದಾರೆ. 'ಟಾಲೆಮಿಯ' 2ನೇ ಶತಮಾನದಲ್ಲಿ ಉಲ್ಲೇಖಿಸಿರುವ 'ನಿತ್ರೇಸ'ನ್ನು ನೇತ್ರಾವತಿಯ ಮುಖಜಭೂಮಿಯಲ್ಲಿರುವ ಮಂಗಳೂರೆಂದು ಗುರುತಿಸಲಾಗಿದೆ. ಪ್ಲಿನಿ ಕೂಡಾ ಇದನ್ನು 'ನಿತ್ರಾಸ' ಎಂದು ಗುರುತಿಸುತ್ತಾನೆ. 'ಕಾಸ್‌ಮಸ್' ಈ ಬಂದರನ್ನು

'ಮ್ಯಾಂಗರೋಥ್' ಎಂದು ಗುರುತಿಸುತ್ತಾನೆ. ಟಾಲೆಮಿಯ ಪ್ರಕಾರ ಈ ಪ್ರದೇಶದಲ್ಲಿ ಕಡಲ್ಗಳ್ಳರ ಹಾವಳಿ ಅಧಿಕವಾಗಿತ್ತೆಂದು ಹೇಳುತ್ತಾನೆ. 'ಪೆರಿಪ್ಲಸ್ ಆಫ್ ಎರಿತ್ರಿಯನ್ 'ಸೀ' ಗ್ರಂಥಕರ್ತೃ ಕರ್ನಾಟಕದ ಬಂದರುಗಳಾದ ಕಾರವಾರ, ಹೊನ್ನಾವರಗಳನ್ನು ತಿಳಿಸುತ್ತಾನೆ. ಈ ಎಲ್ಲಾ ದಾಖಲೆಗಳು ಪ್ರಾರಂಭಿಕ ದಿನಗಳಲ್ಲಿ ಕರ್ನಾಟಕದ ಕಡಲತೀರ ಸಮುದ್ರಮಾರ್ಗದ ವ್ಯಾಪಾರವನ್ನು ಹೊರದೇಶಗಳೊಂದಿಗೆ ನಡೆಸುತ್ತಿದ್ದೀತೆಂದು ನಿಖರವಾಗಿ ತಿಳಿಸುತ್ತವೆ. 1899ರಲ್ಲಿ ಈಜಿಪ್ಟಿನ ಭೂ ಉತ್ಖನನದಲ್ಲಿ ದೊರೆತ ಗ್ರೀಕ್ ಪ್ರಹಸನವೊಂದರಲ್ಲಿ ಕೆಲವು ಕನ್ನಡ ಶಬ್ದಗಳು ಉಲ್ಲೇಖವಾಗಿರುವುದನ್ನು ಪ್ರಥಮ ಬಾರಿಗೆ ಶ್ಯಾಮಶಾಸ್ತ್ರಿಯವರು 1927ರಲ್ಲಿ ಪ್ರಕಟಿಸಿದರು. ಈ ಪ್ರಹಸನದಲ್ಲಿ ಗ್ರೀಸಿನ ಸ್ತ್ರೀಯೋರ್ವಳು ಕರ್ನಾಟಕದ ಕಡಲ ತೀರದಲ್ಲಿನ ಅರಸನ ಬಂಧಿಯಾಗುತ್ತಾಳೆ. ಆಕೆಯ ಸಂಬಂಧಿಗಳು ಬಂಧಿಸಿದ ವ್ಯಕ್ತಗಳಿಗೆ ಮಾದಕ ದ್ರವ್ಯ ಕುಡಿಸಿ ಆಕೆ ತನ್ನ ಬಿಡಿಸಿಕೊಂಡು ಹೋಗುತ್ತಾರೆ. ಪ್ರಹಸನದಲ್ಲಿ ಕಂಡುಬರುವ ಮಲ್ಪಿ ನಾಯಕ್, ಮಲ್ಪೆ ಮುಂತಾದ ಪದಗಳು ಕನ್ನಡವೆಂದು ಗುರುತಿಸಿದರು. ನಂತರ ಶ್ಯಾಮಶಾಸ್ತ್ರಿ, ಗೋವಿಂದ ಪೈ, ಎಸ್. ಶ್ರೀಕಂಠಯ್ಯ ಮುಂತಾದವರು ಗ್ರೀಕ್ ಪ್ರಹಸನದಲ್ಲಿ ಕಂಡುಬರುವ ಗ್ರೀಕೇತರ ಪದಗಳು ಕನ್ನಡವೆಂದು ಗುರುತಿಸಿದರು. ಪೈ ಮತ್ತು ಇತರ ವಿದ್ವಾಂಸರ ಲೇಖನಗಳಲ್ಲಿ ಒಂದು ಸಣ್ಣ ವ್ಯತ್ಯಯವೆಂದರೆ, ಕನ್ನಡ ಪದಗಳನ್ನು ಗುರುತಿಸುವ ಬಗೆ. ಈ ಮಾಹಿತಿಗಳು ಪ್ರಾಚೀನ ತುಳುವ ಪ್ರದೇಶ ಇತಿಹಾಸ ಯುಗ ಪ್ರಾರಂಭಕಾಲದ ಹೊತ್ತಿಗಾಗಲೇ ವಿದೇಶೀಯ ಸಂಪರ್ಕವನ್ನು ಸಾಧಿಸಿ ವ್ಯಾಪಾರ ವಹಿವಾಟಿನಲ್ಲೂ ತನ್ನನ್ನು ತೊಡಗಿಸಿಕೊಂಡಿದ್ದುದನ್ನು ಗುರುತಿಸಬಹುದಾಗಿದೆ. ಹಾಗಾಗಿ ತುಳುನಾಡು ಪ್ರಾಗಿತಿಹಾಸ ಕಾಲಘಟ್ಟದಿಂದ ವಸಾಹತುಶಾಹಿ ಕಾಲಘಟ್ಟದವರೆಗೆ ನಿರಂತರವಾಗಿ ವ್ಯಾಪಾರ ವಹಿವಾಟಿನಲ್ಲಿ ತೊಡಗಿಕೊಂಡು ಸಾಗಣೆಯ ಕ್ಷೇತ್ರದಲ್ಲಿ ನಡೆದ ಕ್ರಾಂತಿಯನ್ನನುಸರಿಸಿ ತನ್ನ ಬಂದರುಗಳ ಮೂಲಕ ವಿದೇಶದೊಂದಿಗೂ ನದಿ ಮತ್ತು ಭೂಮಾರ್ಗಗಳ, ಘಾಟಿಗಳ ಮೂಲಕ ಆಂತರಿಕ ವ್ಯಾಪಾರದಲ್ಲೂ ಮಹತ್ವಪೂರ್ಣವಾದ ಸಾಧನೆಯನ್ನು ಸಾಧಿಸಿತ್ತೆಂದು ಹೇಳಬಹುದು.

ಇಷ್ಟೆಲ್ಲಾ ಭೌಗೋಳಿಕ ಮತ್ತು ಐತಿಹಾಸಿಕ ಮಹತ್ವವನ್ನು ಹೊಂದಿರುವ ತುಳುನಾಡಿನ ದೇಶೀಯ ಮತ್ತು ವಿದೇಶೀಯ ವ್ಯಾಪಾರವನ್ನು ಅಧ್ಯಯನ ಮಾಡುವ ಮತ್ತು ಅದನ್ನು ಅರ್ಥೈಸಿಕೊಳ್ಳುವ ನಿಟ್ಟಿನಲ್ಲಿ ಸಂಶೋಧನೆ ಮಾಡಲು ಉದ್ದೇಶಿಸಿ ಪ್ರಸ್ತುತ ಶೀರ್ಷಿಕೆ **ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ** ವಿಷಯವನ್ನು ನನ್ನ ಪ್ರೌಢಪ್ರಬಂಧದ ಅಧ್ಯಯನಕ್ಕೆ ಆಯ್ಕೆಮಾಡಿಕೊಂಡಿರುತ್ತೇನೆ.

## 1.3. ಅಧ್ಯಯನದ ಉದ್ದೇಶ

ಪ್ರಸ್ತುತ ಶೀರ್ಷಿಕೆಯು ತುಳುನಾಡು ತಾನು ಹೊಂದಿರುವ ನೈಸರ್ಗಿಕ ನಿರ್ಮಿತಿಗಳು, ದುರ್ಗಮ ಭೌಗೋಳಿಕ ಲಕ್ಷಣಗಳು, ಭಾಷಾ ಇತಿಮಿತಿಗಳು ಹಾಗೂ ಸಾಂಸ್ಕೃತಿಕ ಪ್ರತ್ಯೇಕತೆಯ ನಡುವೆಯೂ ಬಯಲುಸೀಮೆ ಮತ್ತು ಕರ್ನಾಟಕದ ಇತರ ಭೂಭಾಗಗಳೊಂದಿಗೆ ಇತಿಹಾಸದ ಆರಂಭಕಾಲದಿಂದ ವಸಾಹತುಶಾಹಿ ಕಾಲಘಟ್ಟದವರೆಗೂ ನಿರಂತರವಾಗಿ ವ್ಯಾಪಾರ ಮತ್ತು ಸಾಂಸ್ಕೃತಿಕ ಸಂಪರ್ಕವನ್ನು ಹೊಂದಿದ್ದಿತು.

ಪ್ರಸ್ತುತ ಶೀರ್ಷಿಕೆಯಡಿ ಸಂಶೋಧನೆ ಕೈಗೊಂಡು ಕರಾವಳಿ, ಮಲೆನಾಡು ಮತ್ತು ಬಯಲುಸೀಮೆಗಳ ನಡುವಿನ ಆಂತರಿಕ ಸಂಬಂಧಗಳು, ಈ ಪ್ರದೇಶಗಳಲ್ಲಿ ಇರುವ ದುರ್ಗಮ ಘಟ್ಟಪ್ರದೇಶದ ನಡುವೆ ಕಂಡುಬರುವ ವ್ಯಾಪಾರಿ ಮಾರ್ಗಗಳು ಅಲ್ಲಿನ ವ್ಯಾಪಾರ ಕೇಂದ್ರಗಳು, ಧಾರ್ಮಿಕ ಕೇಂದ್ರಗಳು ಹೇಗೆ ವ್ಯಾಪಾರ ಕೇಂದ್ರಗಳಾಗಿ ಮಾರ್ಪಟ್ಟವು. ಅದಕ್ಕೆ ವ್ಯಾಪಾರಿಗಳು ಮತ್ತು ಸ್ಥಾನಿಕ ಪ್ರಭುಗಳ ಪ್ರೋತ್ಸಾಹ ಮುಂತಾದ ಮಹತ್ವಪೂರ್ಣವಾದ ವಿಷಯಗಳನ್ನು ಅಧ್ಯಯನ ಮಾಡುವ ಉದ್ದೇಶವನ್ನು ತನ್ನದಾಗಿಸಿಕೊಂಡಿದೆ.

ಕರಾವಳಿ ಕರ್ನಾಟಕದ ನದಿಗಳು ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ ಕಿರಿದಾದ ಪಾತ್ರವನ್ನು ಹೊಂದಿದ್ದು ವರ್ಷ ಋತುವಿನ ನದಿಗಳಾಗಿದ್ದರೂ ಘಟ್ಟದ ಕೆಳಗಿನ ಸಮತಟ್ಟಾದ ಕಿರುಬಯಲಿನಲ್ಲಿ ಹರಿಯುವ ಪಾತ್ರದುದ್ದಕ್ಕೂ ಹೇಗೆ ಸಂಸ್ಕೃತೀಕರಣಕ್ಕೆ ನೆರವಾಯಿತು ಮತ್ತು ಅದು ವ್ಯಾಪಾರ ಮಾರ್ಗವಾಗಿ ಮಾರ್ಪಟ್ಟಿತು ಎಂಬ ವಿಷಯಗಳನ್ನು ಅಧ್ಯಯನ ಮಾಡುವ ಉದ್ದೇಶವನ್ನು ಇದು ಹೊಂದಿದೆ.

ಕರಾವಳಿ ಕರ್ನಾಟಕದ ನದಿಗಳು ಜೀವನದಿಗಳಾಗಿರದೆ ಇವು ವರ್ಷಋತು ಮತ್ತು ಆನಂತರದ ಋತುವಿನಲ್ಲಿ ಮಾತ್ರ ತುಂಬಿಹರಿಯುವುದರಿಂದ ಕೇವಲ ಕೆಲವೇ ಕಾಲಘಟ್ಟಗಳಲ್ಲಿ ಇದು ಸಂಚಾರಯೋಗ್ಯವಾಗಿದ್ದು ಮಿಕ್ಕಂತೆ ಈ ನದಿಗಳು ವ್ಯವಸಾಯ ಮತ್ತು ಇತರ ಚಟುವಟಿಕೆಗಳಿಗೆ ಅನುಪಯುಕ್ತ ಎಂದು ಕೆಲ ವಿದ್ವಾಂಸರು ಭಾವಿಸಿದರೂ ಇದೆಲ್ಲವೂ ಮಾನವ ಸಂಸ್ಕೃತಿಯ ಆಧುನಿಕ ಚಟುವಟಿಕೆಗಳಾದ ಅರಣ್ಯನಾಶ, ಅರಣ್ಯ ಒತ್ತುವರಿ, ನೀರಾವರಿಗಾಗಿ ಜಲಾಶಯಗಳ ನಿರ್ಮಾಣ, ನದಿಗಳ ಜಲಾನಯನ ಪ್ರದೇಶದಲ್ಲಿ ಉಂಟಾದ ಗಣಿಗಾರಿಕೆ ಮುಂತಾದವುಗಳ ಪರಿಣಾಮವಾಗಿ ನದಿಯ ಬಯಲುಸೀಮೆಯ

ಪಾತ್ರಗಳು ಹೂಳಿನಿಂದ ಆವೃತವಾಗಿರುವುದು ಪರಿಸರ ವಿಜ್ಞಾನದ ಅಧ್ಯಯನಗಳು ಖಚಿತಪಡಿಸಿರುವುದರಿಂದ ಈ ಚಟುವಟಿಕೆಗಳ ಆರಂಭಕ್ಕೆ ಪೂರ್ವದಲ್ಲಿ ಕರಾವಳಿ ಕರ್ನಾಟಕದ ನದಿಗಳು ಜಲಮಾರ್ಗಗಳಾಗಿ ಕಾರ್ಯನಿರ್ವಹಿಸುತ್ತಿದ್ದುದನ್ನು ಈ ಪ್ರದೇಶದ ಸಾಹಿತ್ಯಿಕ ಮತ್ತು ಪುರಾತತ್ವೀಯ ಆಧಾರಗಳು ಸ್ಥಳೀಯ ಸಂಶೋಧನೆಗಳು ಖಚಿತಪಡಿಸುತ್ತವೆ. ಇದನ್ನು ನಮ್ಮ ಅಧ್ಯಯನ ವ್ಯಾಪ್ತಿಗೂ ಅಳವಡಿಸಿಕೊಳ್ಳುವುದು ಈ ಸಂಶೋಧನೆಯ ಉದ್ದೇಶ.

ಘಟ್ಟಗಳಲ್ಲಿ ಕಂಡುಬರುವ ಕಿರಿದಾದ ಮತ್ತು ಕಡಿದಾದ ಕಣಿವೆಗಳು ಬಯಲು ಸೀಮೆಯೊಂದಿಗೆ ಸಂಪರ್ಕ ಸಾಧಿಸುವಲ್ಲಿ ಮಹತ್ವಪೂರ್ಣವಾದ ಕಾರ್ಯನಿರ್ವಹಿಸಿವೆ. ಬಯಲುಸೀಮೆಯ ಶ್ರೇಷ್ಠ ಉತ್ಪನ್ನಗಳು ಈ ಮಾರ್ಗಗಳನ್ನು ಬಳಸಿ ಕರಾವಳಿಯ ಬಂದರುಗಳನ್ನು ತಲುಪಿ ಅಲ್ಲಿಂದ ವಿದೇಶಗಳಿಗೆ ರಫ್ತಾಗುತ್ತಿದ್ದವು. ಹೀಗಾಗಿ ಕಣಿವೆ ಮಾರ್ಗಗಳು ಬಯಲುಸೀಮೆಯ ಸಂಪರ್ಕ ಮಾಧ್ಯಮಗಳಾಗಿ ಬಳಕೆಯಾದ ಬಗ್ಗೆ ಮತ್ತು ಕರಾವಳಿ ತೀರವನ್ನು ಬಯಲುಸೀಮೆಯನ್ನು ಸಂಪರ್ಕಿಸುವ ಭೂಮಾರ್ಗಗಳನ್ನು ಗುರುತಿಸುವ ಮಹತ್ವಪೂರ್ಣವಾದ ಉದ್ದೇಶವನ್ನು ಈ ಅಧ್ಯಯನವು ತನ್ನದಾಗಿಸಿಕೊಂಡಿದೆ.

ಇತಿಹಾಸ ಕಾಲಘಟ್ಟದಲ್ಲಿ ಈ ಆಂತರಿಕ ಮಾರ್ಗಗಳು ಅಭಿವೃದ್ಧಿಯಾದ ಬಗೆ ಮತ್ತು ರಾಜಕೀಯ ಶಕ್ತಿಯ ವಿಸ್ತರಣೆ ಆನಂತರ ಕರಾವಳಿಯ ಮೇಲಾದ ವಿದೇಶಿಯ ಆಕ್ರಮಣ, ವಿಶೇಷವಾಗಿ ಪೋರ್ಚುಗೀಸರು, ಡಚ್ಚರು, ಇಂಗ್ಲೀಷರು ಇವರ ವಸಾಹತುಶಾಹಿ ನೀತಿ ಹೇಗೆ ತುಳುನಾಡಿನ ಆಂತರಿಕ ಮತ್ತು ವಿದೇಶಿ ವ್ಯಾಪಾರದ ಮೇಲೆ ಪ್ರಭಾವ ಬೀರಿತೆಂಬುದನ್ನು ಸ್ಥೂಲವಾಗಿ ಅಧ್ಯಯನ ಮಾಡುವ ಉದ್ದೇಶವನ್ನು ತನ್ನದಾಗಿಸಿಕೊಂಡಿದೆ.

ವಸಾಹತುಶಾಹಿ ಕಾಲಘಟ್ಟದಲ್ಲಿ ಸಾರಿಗೆ ಸಂಪರ್ಕದಲ್ಲಾದ ಮಹತ್ತರ ಬದಲಾವಣೆ ಕರಾವಳಿ ಮತ್ತು ಬಯಲುಸೀಮೆಯನ್ನು ಸಂಪರ್ಕಿಸಲು ಪ್ರಭಾವ ಬೀರಿದುದನ್ನು ನಗಣ್ಯವೆಂದು ಭಾವಿಸಲು ಸಾಧ್ಯವಿಲ್ಲ. ಆದರೆ ಈ ವ್ಯವಸ್ಥೆಯು ಅಧ್ಯಯನ ಕಾಲವ್ಯಾಪ್ತಿಯನ್ನು ಮೀರಿದುದರಿಂದ ಅದರ ಆರಂಭಿಕಾವಸ್ಥೆಯನ್ನು ಮಾತ್ರ ಗುರುತಿಸುವ ಉದ್ದೇಶವನ್ನು ಮಾತ್ರ ತನ್ನದಾಗಿಸಿಕೊಂಡಿದೆ. ಪ್ರಸ್ತುತ ಪ್ರೌಢಪ್ರಬಂಧವು ಈ ಕೆಳಗಿನ ಪ್ರಮುಖ ಉದ್ದೇಶಗಳನ್ನು ಹೊಂದಿ ಅಧ್ಯಯನಕ್ಕೆ ಒಳಪಟ್ಟಿದೆ.

1. ಪ್ರಸ್ತುತ ಸಂಶೋಧನೆಯು ತುಳುನಾಡಿನ ಪ್ರಾಗಿತಿಹಾಸಕಾಲದಿಂದ ಪ್ರಾರಂಭಮಾಡಿ ಬ್ರಿಟಿಷರ ಆಗಮನದ ಕಾಲದವರೆಗಿನ ವ್ಯಾಪಾರದ ಸ್ಥಿತಿಗತಿಗಳನ್ನು ಕೂಲಂಕುಷವಾಗಿ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.
2. ಈ ಮೇಲಿನ ಉದ್ದೇಶವನ್ನು ಪೂರೈಸುವ ಹಂತದಲ್ಲಿ ಪ್ರಾಗಿತಿಹಾಸ ಕಾಲದಲ್ಲಿನ ಸಾಗರೋತ್ತರ ಸಂಪರ್ಕಗಳು ಆನಂತರ ತುಳುನಾಡಿನ ಇತಿಹಾಸ ಪ್ರಾರಂಭ ಕಾಲದಿಂದ ವಿಜಯನಗರ ಕಾಲದವರೆಗೆ ಹೊಂದಿದ್ದ ವ್ಯಾಪಾರ ವಹಿವಾಟು, ಆ ಕಾಲದ ವ್ಯಾಪಾರಿ ಮಾರ್ಗಗಳು, ವ್ಯಾಪಾರಿ ಕೇಂದ್ರಗಳು ಮತ್ತು ಈ ಕಾಲಘಟ್ಟದಲ್ಲಿ ತುಳುನಾಡಿನಲ್ಲಿ ಕಾರ್ಯನಿರ್ವಹಿಸಿದ ಬಂದರುಗಳ ಆರ್ಥಿಕ ಇತಿಹಾಸವನ್ನು ಅಧ್ಯಯನ ಮಾಡುವ ಮಹತ್ವಪೂರ್ಣವಾದ ಉದ್ದೇಶವನ್ನು ತನ್ನದಾಗಿಸಿಕೊಂಡಿದೆ.
3. ತುಳುನಾಡಿನಲ್ಲಿ ಪೋರ್ಚುಗೀಸರ ಆಗಮನದಿಂದ ಬ್ರಿಟಿಷರ ಆಗಮನದವರೆಗಿನ ವ್ಯಾಪಾರದ ಏಕಸ್ವಾಮ್ಯ ಬಹುತೇಕವಾಗಿ ಅರಬ್ಬರಿಂದ ಪೋರ್ಚುಗೀಸರಿಗೆ ಹಸ್ತಾಂತರವಾಯಿತು. ಇದರಿಂದಾಗಿ ಕಡಲತೀರದಲ್ಲಿ ಅತ್ಯಂತ ಶಾಂತಿಯುತವಾಗಿ ಬದುಕಿ ಭಾರತೀಯರೊಂದಿಗೆ ಮತ್ತು ಕನ್ನಡಿಗರೊಂದಿಗೆ ತಮ್ಮ ಬದುಕು ಕಟ್ಟಿಕೊಂಡ ಅರಬ್ಬರ ಜೀವನ ಹಾಳಾಯಿತು. ಈ ಹಂತದಲ್ಲಿ ಪೋರ್ಚುಗೀಸರು ಕರ್ನಾಟಕದಲ್ಲಿ ವ್ಯಾಪಾರಕ್ಕಾಗಿ ಬಂದು ಮಾಡಿದ ರಾಜಕೀಯ ಚಟುವಟಿಕೆಗಳು, ವ್ಯಾಪಾರದ ಚಟುವಟಿಕೆಗಳು, ವಿಜಯನಗರ ಮತ್ತು ಪೋರ್ಚುಗೀಸರ ಸಂಬಂಧ ಮುಂತಾದ ವಿಚಾರಗಳನ್ನು ಚರ್ಚಿಸಲಾಗಿದೆ. ಇದಲ್ಲದೆ ತುಳು ನಾಡಿನಲ್ಲಿ ನಡೆದ ನೌಕಾ ಯುದ್ಧಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.
4. ತುಳುನಾಡಿನಲ್ಲಿ ಕಂಡುಬಂದ ವ್ಯಾಪಾರಿ ಸಂಘಟನೆಗಳು ಅವುಗಳ ಜೊತೆಜೊತೆ ಯಲ್ಲಿಯೇ ತುಳುನಾಡಿನಾದ್ಯಂತ ಬೆಳವಣಿಗೆ ಕಂಡ ವ್ಯಾಪಾರದ ಕೇಂದ್ರಗಳನ್ನು ಅಧ್ಯಯನ ಮಾಡುವ ಉದ್ದೇಶವನ್ನು ಈ ಸಂಶೋಧನೆಯು ಹೊಂದಿದೆ.
5. ತುಳುನಾಡು ಉತ್ಪಾದಿಸುತ್ತಿದ್ದ ಸರಕುಗಳು, ಒಳನಾಡಿನಿಂದ ಆಮದು ಮಾಡಿಕೊಳ್ಳುತ್ತಿದ್ದ ಸರಕುಗಳು, ವಿದೇಶಗಳಿಗೆ ರಫ್ತು ಮಾಡುತ್ತಿದ್ದ ಸರಕುಗಳನ್ನು ಅಧ್ಯಯನ ಮಾಡುವ ಬಹುಮುಖ್ಯ ಉದ್ದೇಶವನ್ನು ಈ ಸಂಶೋಧನೆಯು ಹೊಂದಿದೆ. ತುಳುನಾಡಿನ ಎಲ್ಲ ಬಂದರುಗಳು ಪ್ರಮುಖವಾಗಿ ಅಕ್ಕಿಯನ್ನು ರಫ್ತುಮಾಡುವ

ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದವು. ಅದನ್ನು ಅಧ್ಯಾಯ ಒಂದರಲ್ಲಿ ಉಪಶೀರ್ಷಿಕೆಯಲ್ಲಿ ಅಧ್ಯಯನ ಮಾಡುವ ಉದ್ದೇಶ ಹೊಂದಿದೆ.

## 1.4. ಅಧ್ಯಯನದ ವ್ಯಾಪ್ತಿ

ಕರ್ನಾಟಕದ ಕರಾವಳಿ ತೀರದ ಬಗೆಗೆ ಮತ್ತು ತುಳುನಾಡಿನ ಇತಿಹಾಸದ ಬಗೆಗೆ ಅಧ್ಯಯನ ಮಾಡಿರುವ ಬಹುತೇಕ ವಿದ್ವಾಂಸರು ಅದರಲ್ಲೂ ಆರಂಭಿಕ ಇತಿಹಾಸಕಾರರು ಹೆಚ್ಚಾಗಿ ಈ ಪ್ರದೇಶದ ರಾಜಕೀಯ, ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಒತ್ತು ನೀಡಿರುವುದು ಕಂಡುಬರುತ್ತದೆ. ಇದಕ್ಕೆ ಉದಾಹರಣೆಯಾಗಿ ಗಣಪತಿರಾವ್ ಐಗಳ್, ಮಂಜೇಶ್ವರ ಗೋವಿಂದ ಪೈ, ಬಿ.ಎ. ಸಾಲೆತ್ತೂರ್, ಕೆ. ವಿ. ರಮೇಶ್ ಮತ್ತು ಪಿ. ಗುರುರಾಜ ಭಟ್ ಮುಂತಾದವರನ್ನು ಉಲ್ಲೇಖಿಸಬಹುದು. ಈ ಎಲ್ಲ ಅಧ್ಯಯನಗಳಲ್ಲಿಯೂ ಮತ್ತು ಆನಂತರದ ದಕ್ಷಿಣ ಕನ್ನಡಜಿಲ್ಲೆ ಮತ್ತು ಉತ್ತರಕನ್ನಡ ಜಿಲ್ಲೆಯ ಬಗೆಗಿನ ಸಂಶೋಧನೆಗಳಲ್ಲೂ ಆಂತರಿಕ ವ್ಯಾಪಾರ ಮತ್ತು ವಿದೇಶೀವ್ಯಾಪಾರ ರಾಜಕೀಯಾಧ್ಯಯನದ ಉಪಶೀರ್ಷಿಕೆಯಾಗಿ ಕಂಡುಬರುತ್ತದೆ. ಇದರ ಹಿನ್ನೆಲೆಯಲ್ಲಿ ಆನಂತರದ ವಿದ್ವಾಂಸರುಗಳಾದ ಕೆ. ಜಿ. ವಸಂತ ಮಾಧವ, ಬಿ. ವಸಂತ ಶೆಟ್ಟಿ, ಮಾಲತಿ ಮೂರ್ತಿ ಮುಂತಾದವರು ಕೆಲವೊಂದು ಕಾಲಘಟ್ಟದ ವಿದೇಶಿ ವ್ಯಾಪಾರಕ್ಕೆ ಒತ್ತುನೀಡಿರುವುದು ಕಂಡುಬರುತ್ತದೆ. ಇದಲ್ಲದೆ ಬಸ್ರೂರು, ಬಾರ್ಕೂರು, ಮಂಗಳೂರು ಮುಂತಾದ ರಾಜಕೀಯ ಮತ್ತು ಆರ್ಥಿಕ ಕೇಂದ್ರಗಳ ಸ್ಥಳೀಯ ಇತಿಹಾಸದ ಬಗೆಗೂ ಸಮಗ್ರ ಅಧ್ಯಯನವಾಗಿದೆಯಾದರೂ ತುಳುನಾಡಿನ ಆಂತರಿಕ ಮತ್ತು ವಿದೇಶಿ ವ್ಯಾಪಾರದ ಬಗ್ಗೆ ಅಧ್ಯಯನಗಳ ಕೊರತೆ ಕಂಡುಬರುತ್ತದೆ. ಆದರೆ ಲ. ನ. ಸ್ವಾಮಿಯವರು 'ಮ್ಯಾರಿಟೈಮ್ ಕಾಂಟಾಕ್ಟ್ಸ್ ಅಲಾಂಗ್ ದಿ ವೆಸ್ಟ್‌ಕೋಸ್ಟ್ ಆಫ್ ಇಂಡಿಯಾ ವಿತ್ ಸ್ಪೆಷಲ್ ರೆಫ್‌ರೆನ್ಸ್ ಟು ಕರ್ನಾಟಕ' ಅಪ್ರಕಟಿತ ಪ್ರೌಢಪ್ರಬಂಧ ಕರ್ನಾಟಕದ ವಿದೇಶೀವ್ಯಾಪಾರದ ಬಗ್ಗೆ ಮಹತ್ತರವಾದ ಮಾಹಿತಿ ನೀಡುವ ಕೃತಿಯಾಗಿದ್ದು ಇದು 1400ರವರೆಗಿನ ಕರ್ನಾಟಕದ ವ್ಯಾಪಾರವನ್ನು ಅದರಲ್ಲೂ ವಿದೇಶಿ ವ್ಯಾಪಾರವನ್ನು ದಾಖಲಿಸುವ ಮಹತ್ವದ ಕೃತಿ. ಜೊತೆಗೆ ಕರ್ನಾಟಕದ ಬಂದರುಗಳನ್ನು ಉಲ್ಲೇಖಿಸುತ್ತಾರೆ. ಇದು ಗುಜರಾತ್‌ನ ಬಂದರುಗಳನ್ನು ಹೊಂದಿಕೊಂಡಂತೆ ಮಲಬಾರ್ ತೀರದವರೆಗಿನ ಸಮಗ್ರ ಸಮೀಕ್ಷೆಯಾಗಿರುವುದರಿಂದ ತುಳುನಾಡಿನ ಪಕ್ಷಿನೋಟ ಮಾತ್ರ ದೊರೆಯುತ್ತದೆ. ಇವರ ಇತ್ತೀಚಿನ ಹಲವು ಲೇಖನಗಳು

ತುಳುನಾಡಿಗೆ ಮತ್ತು ತುಳುನಾಡಿನ ಆಂತರಿಕ ವ್ಯಾಪಾರಕ್ಕೆ ಒತ್ತು ನೀಡಿರುವುದು ಗಮನಾರ್ಹವಾದುದು. ತುಳುನಾಡಿಗೆ ಸೀಮಿತವಾಗಿ ದೇಶೀಯ ಮತ್ತು ಅಂತರ್ದೇಶೀಯ ವ್ಯಾಪಾರಕ್ಕೆ ನಿರ್ದೇಶಿತವಾದ ಯಾವುದೇ ಅಧ್ಯಯನವು ಈವರೆಗೆ ಕಂಡುಬಾರದ ಕಾರಣ ಆ ಲೋಪವನ್ನು ಸರಿಪಡಿಸಲು ಮತ್ತು ಆ ಬಗೆಗೆ ಹೆಚ್ಚಿನ ಮಾಹಿತಿಯನ್ನು ಕಲೆಹಾಕುವ ಸಲುವಾಗಿ ಪ್ರಸ್ತುತ ಶೀರ್ಷಿಕೆಯನ್ನು ಸಂಶೋಧನೆಯ ವ್ಯಾಪ್ತಿಯನ್ನಾಗಿ ಆಯ್ಕೆಮಾಡಿ ಕೊಳ್ಳಲಾಗಿದೆ. ಈ ವ್ಯಾಪ್ತಿಯೊಳಗೆ ಭೌಗೋಳಿಕ ಮತ್ತು ಕಾಲಮಿತಿಯ ವ್ಯಾಪ್ತಿಗಳು ಅಡಕವಾಗಿವೆ. ಮೊದಲ ಪುಟಗಳಲ್ಲಿ ದಾಖಲಿಸಿರುವಂತೆ ಪ್ರಸ್ತುತ ಅಧ್ಯಯನವು ತುಳುನಾಡಿನ ಎಲ್ಲೆಯೊಳಗಿನ ವ್ಯಾಪಾರಕ್ಕೆ ಮಾತ್ರ ಸೀಮಿತವಾದುದಾಗಿದೆ. ಅಂದರೆ ಉತ್ತರದಲ್ಲಿ ಭಟ್ಕಳದಿಂದ ಪ್ರಾರಂಭವಾಗಿ ದಕ್ಷಿಣದಲ್ಲಿ ನೀಲೇಶ್ವರದವರೆಗಿನ ಹಾಗೂ ಪೂರ್ವದಲ್ಲಿ ಘಟ್ಟಗಳ ಪ್ರದೇಶದವರೆಗಿನ ಸೀಮಿತ ಭೌಗೋಳಿಕ ಕ್ಷೇತ್ರವು ಕರ್ನಾಟಕದ ಇತರ ಕ್ಷೇತ್ರಗಳೊಂದಿಗೆ ಅಂದರೆ ದಕ್ಷಿಣದಲ್ಲಿ ಕಾಸರಗೋಡು, ಮಡಿಕೇರಿ, ಹಾಸನ, ಶಿವಮೊಗ್ಗ, ಚಿಕ್ಕಮಗಳೂರು, ಬೆಳಗಾವಿ, ಯಲ್ಲಾಪುರ, ಪ್ರದೇಶಗಳೊಂದಿಗೆ ಹೊಂದಿದ್ದ ಭೂಮಾರ್ಗದ ವ್ಯಾಪಾರ ಕರಾವಳಿಯ ಪ್ರದೇಶದಲ್ಲಿನ ನದಿಜಾಲಗಳ ಬಳಕೆ ಈ ನದಿಜಾಲಗಳ ಮುಖಜ ಭೂಮಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಬಂದರುಗಳು ಮತ್ತು ಅವುಗಳ ವಿದೇಶೀಯ ಸಂಪರ್ಕಗಳು ಮುಂತಾದುವನ್ನು ಇತಿಹಾಸ ಆರಂಭ ಕಾಲದಿಂದ ಆರಂಭಿಸಿ ಇಂಗ್ಲಿಷ್ ವ್ಯಾಪಾರದ ಆಗಮನದ ಕಾಲಮಿತಿಯೊಳಗೆ ಅಧ್ಯಯನ ಮಾಡುವ ವ್ಯಾಪ್ತಿಯನ್ನು ತನ್ನದಾಗಿಸಿಕೊಂಡಿದೆ.

## 1.5. ಅಧ್ಯಯನದ ಸಂಶೋಧನ ವಿಧಾನ

**ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ** ಅಧ್ಯಯನವು ಬಹುತೇಕವಾಗಿ ತುಳುನಾಡಿನ ಪ್ರದೇಶದಲ್ಲಿ ದೊರೆಯುವ ಶಾಸನಗಳು, ತುಳುನಾಡಿನ ಬಗೆಗಿನ ವಿದೇಶಿ ಬರಹಗಾರರ ಬರವಣಿಗೆಗಳು ಹಾಗೂ ತುಳುನಾಡಿನ ಪ್ರದೇಶದ ಬಗೆಗೆ ಈವರೆಗೆ ಪ್ರಕಟವಾಗಿರುವ ಸಂಶೋಧನ ಸಂಪ್ರಬಂಧಗಳು ಮತ್ತು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಗಳನ್ನು ಸಂಕಲಿಸಿ ಅವುಗಳನ್ನು ವಿಶ್ಲೇಷಿಸಿ ವರ್ಗೀಕರಿಸಿ ಸಂಶೋಧನ ಮಾರ್ಗದ ವಿಧಿವಿಧಾನಗಳಿಗನುಸಾರವಾಗಿ ಪ್ರೌಢಪ್ರಬಂಧದ ವಿವಿಧ ಅಧ್ಯಾಯಗಳಿಗೆ ಸೂಕ್ತವೆನಿಸಿದ ರೀತಿಯಲ್ಲಿ ಅವುಗಳನ್ನು ವಿಶ್ಲೇಷಿಸಿ ಬಳಸಿಕೊಳ್ಳಲಾಗಿದೆ. ಈ ಹಂತದಲ್ಲಿ

ವಿಶೇಷವಾಗಿ ವಿದೇಶೀಯ ಬರವಣಿಗೆಗಳು, ಶಾಸನಗಳು ಇವುಗಳನ್ನೇ ಮೂಲದಾಖಲೆಗಳಾಗಿ ಪ್ರಾಚೀನ ಕಾಲಘಟ್ಟಕ್ಕೂ ಆಧುನಿಕ ಕಾಲಘಟ್ಟಕ್ಕೆ ಸಂಬಂಧಿಸಿದಂತೆ ವಿವಿಧ ಪತ್ರಾಗಾರಗಳಲ್ಲಿ ಸಂರಕ್ಷಿಸಿರುವ ಆಧುನಿಕ ಪತ್ರಗಳು, ಕಡತಗಳು ಮುಂತಾದ ಮೂಲದಾಖಲಾತಿಗಳನ್ನು ಬಳಸಿಕೊಂಡು ಅವುಗಳಲ್ಲಿ ಲಭ್ಯವಾದ ಮಾಹಿತಿಯನ್ನು ಇತರ ಆಕರಗಳೊಂದಿಗೆ ಸಮೀಕರಿಸಿ ಪ್ರೌಢಪ್ರಬಂಧವನ್ನು ರಚಿಸುವ ಪ್ರಯತ್ನ ಮಾಡಲಾಗಿದೆ.

ಇಷ್ಟೇ ಅಲ್ಲದೆ ಭಂಡಸಾಲೆಗಳನ್ನು ನಡೆಸುತ್ತಿದ್ದ ಶ್ರೇಷ್ಠಿ ಮನೆತನದ ಕೆಲವರನ್ನು ಸಂದರ್ಶಿಸಿ ದೈವಗಳ ಬಗೆಗೆ ಪಾಡ್ದನಗಳನ್ನು ಹಾಡುವ ಪಾತ್ರಿಗಳನ್ನು ಸಂದರ್ಶಿಸಿ ಮೌಖಿಕ ಇತಿಹಾಸವನ್ನು ಸಂಗ್ರಹಿಸಿ ಈಗಾಗಲೇ ಪ್ರಕಟವಾಗಿರುವ ಮಾಹಿತಿಯನ್ನೂ ಆಧರಿಸಿ ಹಲವು ವಿದ್ವಾಂಸರೊಂದಿಗೆ ಚರ್ಚಿಸಿ ಅಭಿಪ್ರಾಯಗಳನ್ನು ಸಂಗ್ರಹಿಸಿ ಸಮಗ್ರ ದೃಷ್ಟಿಕೋನವನ್ನು ಹೊಂದಿ ಆಕರಗಳ ತೌಲನಿಕ ಅಧ್ಯಯನದ ನಂತರ ಈ ಪ್ರೌಢಪ್ರಬಂಧವನ್ನು ರಚಿಸಲಾಗಿದೆ.

## 1.6. ಅಧ್ಯಯನ ವಿಷಯದ ಮಹತ್ವ

ತುಳುನಾಡು ಕರಾವಳಿ ಕರ್ನಾಟಕದ ವಿದೇಶೀಯ ಮಹಾದ್ವಾರ. ಕರ್ನಾಟಕದ ಕಡಲಾಚೆಯ ಸಂಪರ್ಕಗಳೆಲ್ಲವೂ ತುಳುನಾಡ ಕರಾವಳಿಯ ಮೂಲಕವೇ ನೆರವೇರಿರುವುದು ಇತಿಹಾಸದ ಪುಟಗಳಲ್ಲಿ ದಾಖಲಾಗಿದ್ದರೂ ಸ್ಥಾನೀಯವಾದ ವ್ಯಾಪಾರ, ವಹಿವಾಟು, ವ್ಯಾಪಾರ ಮಾರ್ಗಗಳು ಮತ್ತು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ವ್ಯಾಪಾರಿ ಸಂಘಗಳು ಇವುಗಳ ಬಗೆಗೆ ಸಂಶೋಧಕರು ಈವರೆಗೆ ತೋರಿರುವ ದಿವ್ಯ ನಿರ್ಲಕ್ಷ್ಯ ಗಮನಾರ್ಹ.

ಆದರೆ ಕರಾವಳಿ ಕರ್ನಾಟಕದ ಆಂತರಿಕ ವ್ಯಾಪಾರ, ವ್ಯಾಪಾರಿ ಮಾರ್ಗಗಳು, ಘಟ್ಟದ ಕಣಿವೆಗಳು, ಬಯಲುಸೀಮೆಯನ್ನು ಬಂದರುಗಳೊಂದಿಗೆ, ಬೆಸೆಯುವಲ್ಲಿ ನಿರ್ವಹಿಸಿದ ಪಾತ್ರ ಮಹತ್ತರವಾಗಿದೆ. ಹಾಗಾಗಿ ಬಯಲುಸೀಮೆ ಮತ್ತು ಕಡಲಕಿನಾರೆಯ ತುಳುನಾಡಿನೊಂದಿಗೆ ಇಲ್ಲಿನ ಜನ ವ್ಯಾಪಾರಸ್ಥರು ಹೊಂದಿದ್ದ ಸಂಪರ್ಕ ವಿನಿಮಯವಾದ ವಸ್ತುಗಳು ಬಯಲುಸೀಮೆಯ ಉತ್ಪಾದನೆಗಳು ಮತ್ತು ಬೆಳೆಗಳು ಕರಾವಳಿಯನ್ನು ತಲುಪಿದ ಬಗೆ, ವಿದೇಶೀಯ ವಸ್ತುಗಳು ಕರಾವಳಿ ಬಂದರುಗಳ ಮೂಲಕ ಮಲೆನಾಡನ್ನು ದಾಟಿ ಬಯಲುಸೀಮೆಯನ್ನು ತಲುಪಿದ ಬಗೆ, ಬಯಲುಸೀಮೆ ಮತ್ತು ಕರಾವಳಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ವರ್ತಕ ಸಂಘಗಳು ಇವೆಲ್ಲವೂ ಒಂದೇ ತೆರನಾಗಿರುವಾಗ ಈ

ಎರಡು ಭೌಗೋಳಿಕ ವಿಭಿನ್ನಕ್ಷೇತ್ರಗಳ ನಡುವಿನ ವ್ಯಾಪಾರ ವಹಿವಾಟಿನ ಸಮನ್ವಯವನ್ನು ಅರ್ಥಮಾಡಿಕೊಳ್ಳುವ ಮತ್ತು ಅದನ್ನು ಪ್ರತಿನಿಧಿಸುವ ಸಂಶೋಧನೆಯನ್ನು ಪ್ರಸ್ತುತ ಪಡಿಸುವುದನ್ನು ಈ ಶೀರ್ಷಿಕೆಯು ತನ್ನ ಮಹತ್ವವನ್ನಾಗಿ ಹೊಂದಿದೆ.

## 1.7. ಅಧ್ಯಯನ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳ ಸಮೀಕ್ಷೆ

**ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ** ಅಧ್ಯಯನ ಮಾಡಲು ಅನೇಕ ಬಗೆಯ ಪ್ರಾಕ್ತನ ಮತ್ತು ಆನುಷಂಗಿಕ ಆಕರಗಳು ಲಭ್ಯವಿವೆ. ಇವು ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯವನ್ನು ಆಳುಪರ ಕಾಲದಿಂದ ಹೈದರಾಲಿಯ ಕಾಲಘಟ್ಟದವರೆಗೆ ಸಂಬಂಧಿಸಿದಂತೆ ನಡೆದಂತಹ ಅಧ್ಯಯನ ಸಮೀಕ್ಷೆಯನ್ನು ಮಂಡಿಸಲಾಗಿದೆ. ಕೆ. ವಿ. ರಮೇಶ್, ಪಿ. ಗುರುರಾಜ್ ಭಟ್. ಬಿ. ಎ. ಸಾಲೆತ್ತೂರು, ಶೀನಪ್ಪ ಹೆಗ್ಡೆ, ಬಿ. ಆರ್. ಹಿರೇಮಠ್, ಕೆ. ಜಿ. ವಸಂತ ಮಾಧವ, ಬಿ. ವಸಂತ ಶೆಟ್ಟಿ, ಗಣಪತಿ ರಾವ್ ಐಗಳ್, ಸೂರ್ಯನಾಥ ಕಾಮತ್, ಎ. ವಿ. ನರಸಿಂಹಮೂರ್ತಿ, ಎ. ಅಪ್ಪಾದೊರೈ ಬಿ. ಎಸ್. ಶಾಸ್ತ್ರಿ, ಇ. ನಾಗೇಂದ್ರ ರಾವ್, ಶ್ಯಾಮ್ ಭಟ್, ಆರ್. ಚಂಪಕಲಕ್ಷ್ಮೀ, ಸಂಜಯ್ ಸುಬ್ರಹ್ಮಣ್ಯ, ಜಾರ್ಜ್. ಎಮ್. ಮೊರಸ್, ಮಾಲತಿ ಕೃಷ್ಣಮೂರ್ತಿ, ಮೊಹನ್‌ಕೃಷ್ಣ ರೈ, ಇಂತಹ ಕೃತಿಗಳು ವಸಾಹತುಪೂರ್ವ ವರ್ತನೆಗಳು (ಪ್ರಾಚೀನ ಕಾಲದ ತುಳುನಾಡಿನ), ವ್ಯಾಪಾರ ಚಟುವಟಿಕೆಗಳನ್ನು ಅರ್ಥಮಾಡಿಕೊಳ್ಳಲು ಉಪಯುಕ್ತವಾಗಿವೆ. ಮುಖ್ಯವಾಗಿ ಕರಾವಳಿ ಕರ್ನಾಟಕದಲ್ಲಿ ಕೆಲವು ಆಯ್ದ ಉತ್ತಮ ಕೃತಿಗಳು ಇವೆ. ಈ ಕೃತಿಗಳ ಮೌಲ್ಯಮಾಪನವನ್ನು ಅಧ್ಯಯನದ ವಿಷಯವನ್ನು ಅರ್ಥಮಾಡಿಕೊಳ್ಳಲು ಉಲ್ಲೇಖಿಸಲಾಗಿದೆ.

ಮಾಲತಿ ಕೃಷ್ಣಮೂರ್ತಿಯವರ ಪಿಎಚ್.ಡಿ ಪ್ರಬಂಧವಾದ 'ಟ್ರೇಡ್ ಎಂಡ್ ಕಾಮರ್ಸ್ ಇನ್ ಕೊಲೋನಿಯಲ್ ಸೌತ್ ಕೆನರಾ 1799–1862' ಈ ಕೃತಿಯು ವಸಾಹತುಶಾಹಿ ಕಾಲಘಟ್ಟಕ್ಕೆ ಅನ್ವಯಿಸಿದರೂ ಕೂಡಾ ಕೆಲವೊಂದು ಮಾಹಿತಿಗಳು ಪ್ರಾಚೀನಕಾಲದ ಒಳನಾಡಿನ ವ್ಯಾಪಾರ ಪದ್ಧತಿ ನದಿಗಳ, ಭೂಮಾರ್ಗಗಳ ಬಗ್ಗೆ ತಿಳಿಯಲು ಸಹಕಾರಿಯಾಗಿದೆ. ಫ್ರಾನ್ಸಿಸ್ ಬುಕಾನನ್‌ರವರ ಸಂಪುಟಗಳನ್ನು ಅಳತೆ ಮಾಪನಗಳು ವ್ಯಾಪಾರ ಮತ್ತು ಕೃಷಿಯ ಬಗೆಗಿನ ವಿವರಗಳನ್ನು ತಿಳಿಯಲು ಬಳಸಿಕೊಳ್ಳಲಾಗಿದೆ.

ಈ ಕ್ಷೇತ್ರದಲ್ಲಿ ಅಧ್ಯಯನ ಮಾಡಿರುವ ಇತ್ತೀಚಿನ ವಿದ್ವಾಂಸರುಗಳಲ್ಲಿ ಲ. ನ. ಸ್ವಾಮಿಯವರ ಕೃತಿಗಳು ಮಹತ್ವ ಪಡೆದುಕೊಳ್ಳುತ್ತವೆ. ಇವರ ಪ್ರೌಢಪ್ರಬಂಧ 'ಮ್ಯಾರಿಟೈಮ್ ಕಾಂಟಾಕ್ಟ್ಸ್ ಅಲಾಂಗ್ ದಿ ವೆಸ್ಟ್ ಕೋಸ್ಟ್ ಇಂಡಿಯಾ ವಿತ್ ಸ್ಪೆಷಲ್ ರೆಫ಼್‌ರೆನ್ಸ್ ಟು ಕರ್ನಾಟಕ' (1993) ಕೃತಿಯು ಕರ್ನಾಟಕದ ಸಾಗರೋತ್ತರದ ವ್ಯಾಪಾರದ ಬಗೆಗೆ ಮತ್ತು ಈ ವ್ಯಾಪಾರ ಚಟುವಟಿಕೆಯಲ್ಲಿ ಬಳಸಲಾಗುತ್ತಿದ್ದ ವಿವಿಧ ನಾವೆಗಳ ಬಗೆಗೆ ಮಹತ್ವಪೂರ್ಣವಾದ ಅಧ್ಯಯನವಾಗಿದೆ.

ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಮೋಹನಕೃಷ್ಣ ರೈ ಅವರು ಸಾದರಪಡಿಸಿರುವ ಅಪ್ರಕಟಿತ ಪೌಢಪ್ರಬಂಧ 'ಎನ್ ಅರ್ಬನೈಸೇಷನ್ ಆಫ್ ಮಂಗಳೂರು ಎ ಕಲೋನಿಯಲ್ ಎಕ್ಸ್‌ಪೀರಿಯನ್ಸ್‌ಸ್' ಕೃತಿ ಮಂಗಳೂರಿನ ಬೆಳವಣಿಗೆ ಅದರಲ್ಲೂ ವಸಾಹತುಶಾಹಿ ಕಾಲಘಟ್ಟದಲ್ಲಿ ಮಂಗಳೂರು ಹೇಗೆ ಅಭಿವೃದ್ಧಿಯಾಯಿತು ಮತ್ತು ಅದರ ಬೆಳವಣಿಗೆಯ ಕ್ರಮ, ಅದಕ್ಕೆ ಹೊಂದಿಕೊಂಡಂತೆ ನಗರದ ಬೆಳವಣಿಗೆ ಮಂಗಳೂರು ಬಂದರಿನ ವ್ಯಾಪಾರ, ವಹಿವಾಟು ಮುಂತಾದ ವಿಚಾರಗಳನ್ನು ಈ ಪ್ರೌಢಪ್ರಬಂಧವು ಹೊಂದಿದ್ದು ಬಂದರುಗಳ ಮಹತ್ವವನ್ನು ಅಧ್ಯಯನ ಮಾಡುವ ಪ್ರಮುಖ ಆಕರದ ಕೃತಿಯಾಗುತ್ತದೆ. ಇವಲ್ಲದೆ ಇನ್ನೂ ಹಲವಾರು ಸಂಶೋಧನ ಗ್ರಂಥಗಳನ್ನು ಸಂಪ್ರಬಂಧಗಳನ್ನು ಸಂಶೋಧನೆಗೆ ಬಳಸಿಕೊಂಡಿದ್ದು ಅವನ್ನು ಸೂಕ್ತವೆನಿಸಿದೆಡೆ ವಿಮರ್ಶಿಸಿ ಆವಶ್ಯಕ ಮಾಹಿತಿ ಸಂಗ್ರಹಣೆಗೆ ಬಳಸಿಕೊಳ್ಳಲಾಗಿದೆ.

ಕೆ. ವಿ. ರಮೇಶ್ ಮತ್ತು ಜೆ. ಶರ್ಮಾರವರ 'ತುಳುನಾಡಿನ ಶಾಸನಗಳು'(1978) ಗ್ರಂಥದಲ್ಲಿ ಶಾಸನಗಳು ಇತಿಹಾಸ ರಚನೆಗೆ ಸಹಾಯಕವಾಗಿವೆ. ಈ ಶಿಲಾಶಾಸನಗಳು ಇಡೀ ಜಿಲ್ಲೆಯ ಮೇಲೆ ವ್ಯಾಪಿಸಿವೆಯಾದರೂ ಕೆಲವು ಪ್ರದೇಶಗಳಲ್ಲಿ ಶಾಸನದ ಸಾಂದ್ರತೆಯಿದೆ. ಇದು ಅಲ್ಲಿನ ರಾಜಕೀಯ ಮತ್ತು ಆರ್ಥಿಕ ಚಟುವಟಿಕೆಯನ್ನು ಸೂಚಿಸುತ್ತದೆ. ಇದು ಮಂಗಳೂರಿನ ಆರ್ಥಿಕ ಚಟುವಟಿಕೆಯ ಕೇಂದ್ರಗಳಲ್ಲಿ ಒಂದಾಗಿದೆ. ಸುಮಾರು ಮೂವತ್ತು ದಾಖಲೆಗಳು ಆಳುಪ ಮತ್ತು ವಿಜಯನಗರದ ಕಾಲಾವಧಿಗೆ ಸೇರಿದ ಇಲ್ಲಿ ಕೃಷಿ ಉತ್ಪನ್ನಗಳಲ್ಲಿ ನಮಗೆ ವ್ಯಾಪಾರದ ವಿವರವಾದ ವಿವರಣೆಯನ್ನು ನೀಡುತ್ತಾರೆ. ನಂತರದ ಆಳುಪ ಮತ್ತು ವಿಜಯನಗರ ಆಳ್ವಿಕೆಯಲ್ಲಿ ಕೋಟೇಶ್ವರ ಪ್ರಮುಖ ಕೇಂದ್ರಗಳಲ್ಲಿ ಒಂದಾಗಿ ಪ್ರಾಮುಖ್ಯತೆಯನ್ನು ಗಳಿಸಿತು. ಜಿಲ್ಲೆಯ ಉತ್ತರಭಾಗದ ಬಸ್ರೂರು ತನ್ನ ಶ್ರೀಮಂತ ಶಿಲಾಶಾಸನ ವಸ್ತುಗಳಿಗೆ ಹೆಸರು ವಾಸಿಯಗಿದೆ. ವಿಜಯನಗರ ಕಾಲಕ್ಕೆ ಸೇರಿದ ಈ

ಪ್ರದೇಶದ 35 ಶಾಸನಗಳಲ್ಲಿ ಒತ್ತಡದ ಆರ್ಥಿಕ ಚಟುವಟಿಕೆಯು ಪ್ರತಿಫಲಿಸುತ್ತದೆ. ಮೊದಲಿನ ಆಳುಪ ಶಾಸನಗಳು, ಕಡಿಮೆ ಸಂಖ್ಯೆಯಲ್ಲಿವೆ. ನಮ್ಮ ಅಧ್ಯಯನದ ಅಗತ್ಯವಾದ ಹಿನ್ನಲೆಗಳನ್ನು ರಚಿಸಲು ನಮಗೆ ಸಹಾಯ ಮಾಡುತ್ತವೆ. 7ರಿಂದ 10ನೇ ಶತಮಾನದ ವರೆಗಿನ ಈ ಶಾಸನಗಳಲ್ಲಿ ಸಂಕ್ಷಿಪ್ತತೆ, ಹಳೆಯ ಕನ್ನಡ ಲಿಪಿ ಮತ್ತು ಹಳೆಯ ಕನ್ನಡ ಮತ್ತು ಸಂಸ್ಕೃತ ಭಾಷೆಗಳ ಬಳಕೆಯಾಗಿದೆ ಅವುಗಳಲ್ಲಿ ಕೆಲವನ್ನು ಅನಿಯಮಿತವಾಗಿ ಕೆತ್ತಲಾಗಿದೆ. ತುಳುನಾಡಿನ ಇತಿಹಾಸವನ್ನು ಪುನರ್ನಿರ್ಮಿಸಲು ಇಂದಿನ ಶತಮಾನದ ಆರಂಭದಿಂದಲೂ ವಿದ್ವಾಂಸರು ಪ್ರಯತ್ನಗಳನ್ನು ಮಾಡಿದ್ದಾರೆ. ಇದು ಈ ಪ್ರದೇಶದ ಇತಿಹಾಸದ ಮೇಲೆ ಸಾಕಷ್ಟು ಉತ್ತಮವಾದ ಕೃತಿಗಳ ಉತ್ಪಾದನೆಗೆ ಕಾರಣವಾಗಿದೆ. ತುಳುನಾಡಿನ ಇತಿಹಾಸಶಾಸ್ತ್ರವು ವಸಾಹತು ಬರವಣಿಗೆಯೊಂದಿಗೆ ಪ್ರಾರಂಭವಾಗುತ್ತದೆ. ಆಡಳಿತಾತ್ಮಕ ಉದ್ದೇಶಗಳಿಗಾಗಿ ಕೈಪಿಡಿಗಳನ್ನು ಬ್ರಿಟಿಷ್ ವಿದ್ವಾಂಸರು ಸಂಕಲಿಸಿದ್ದಾರೆ. ಮತ್ತು ಈ ದಿಕ್ಕಿನಲ್ಲಿ ಮೊದಲು ಪ್ರಯತ್ನವು ಸ್ಟರಕ್‌ನದಾಗಿತ್ತು.

'The District Manual of South Canara' ಎರಡು ಸಂಪುಟಗಳಲ್ಲಿ ಈ ಪ್ರದೇಶದ ಇತಿಹಾಸವನ್ನು ವ್ಯವಸ್ಥಿತ ರೀತಿಯಲ್ಲಿ ಬರೆಯಲು ಮೊದಲ ಬಾರಿಗೆ ಮಾಡಿದ ಪ್ರಯತ್ನವಾಗಿದೆ. ಜೆ. ಸ್ಟರಕ್‌ರವರ ಮೊದಲ ಸಂಪುಟ 1894ರಲ್ಲಿ ಪ್ರಕಟಿತವಾಯಿತು. ವಿವಿಧ ಅಧ್ಯಾಯಗಳಲ್ಲಿ ಇತಿಹಾಸ ಮತ್ತು ಪುರಾತತ್ವಶಾಸ್ತ್ರ, ಕಂದಾಯದ ಇತಿಹಾಸ (Revenue) ಮತ್ತು ಆಡಳಿತ ಮತ್ತು ಕೃಷಿ ಹಾಗೂ ವ್ಯಾಪಾರದ ಬಗ್ಗೆ ಚರ್ಚಿಸಲಾಗಿದೆ. ಈ ಅಧ್ಯಯನದಲ್ಲಿ ಕಂದಾಯದ ಇತಿಹಾಸ ಮತ್ತು ಭೂಮಿ ಆಡಳಿತದಡಿಯಲ್ಲಿ ವಿಜಯನಗರ ಆದಾಯದ ಮೌಲ್ಯಮಾಪನದ ಬಗ್ಗೆ ಸಂಕ್ಷಿಪ್ತ ಉಲ್ಲೇಖವಿದೆ.

ಆದರೆ ಇದು ಮೂಲ ದಾಖಲೆಯಲ್ಲ. ಸರ್ ಥಾಮಸ್ ಮುನ್ರೋ ದಾಖಲಿಸಿದ ಮಾಹಿತಿ ಮೇಲೆ ಆಧಾರಿತವಾಗಿದೆ. ಮುನ್ರೋನಿಂದ ದಾಖಲಿಸಿದ ಮಾಹಿತಿಯು ಇನ್ನು ಮುಂದೆ ಅಸ್ತಿತ್ವದಲ್ಲಿಲ್ಲದಿರುವ ವಸ್ತುಗಳನ್ನು ಪರಿಶೀಲಿಸುವುದಿಲ್ಲ.

ಈ ಅಂಶದಲ್ಲಿ ಪ್ರವರ್ತಕ ಬಿ. ಎ. ಸಾಲೆತ್ತೂರ್‌ಗೆ ಹೋಗುತ್ತದೆ. ಅವರ ಕೃತಿಗಳು ಅಧ್ಯಯನ ವಿಷಯದ ಬಗ್ಗೆ ಸಾಕಷ್ಟು ಒಳನೋಟವನ್ನು ಬೀರಿದವು. ಅವರ ಕೃತಿಗಳಲ್ಲಿ ಒಂದಾದ, 1936ರಲ್ಲಿ ಪ್ರಕಟವಾದ 'Ancient Karnataka – History of Tuluvas' ಮೂಲಗಳ ಆಧಾರದ ಮೇಲೆ ವ್ಯವಹಾರ ಸಮುದಾಯಗಳ ಪಾತ್ರವನ್ನು ಗುರುತಿಸುತ್ತದೆ.

ಅವುಗಳೆಂದರೆ, ಶಾಸನಗಳು ಮತ್ತು ತುಳು ಜಾನಪದ ಹಾಡುಗಳು. ಇವುಗಳನ್ನು ಪಾಡ್ದನ ಎಂದು ಕರೆಯಲಾಗುತ್ತದೆ. ಪ್ರಾಚೀನ ಕರ್ನಾಟಕದ ಕಡಲಾಚೆಯ ಸಂಪರ್ಕಗಳ ಬಗೆಗೆ ರಚನೆಯಾಗಿರುವ ಗ್ರಂಥಗಳಲ್ಲಿ ಅತ್ಯಂತ ವಿಶೇಷವಾದ ಗ್ರಂಥ ಡಾ। ಬಿ. ಎ. ಸಾಲೆತ್ತೂರ್ ಅವರ –ಕರ್ನಾಟಕಾಸ್ ಟ್ರಾನ್ಸ್ ಓಷ್ಯಾನಿಕ್ ಕಾಂಟಾಕ್ಟ್ಸ್. ಈ ಗ್ರಂಥ ಅವರು ನೀಡಿದ ಮೂರು ವಿಶೇಷ ಉಪನ್ಯಾಸಗಳ ಸಂಕಲನ. ಈ ಮೂರು ವಿಶೇಷ ಉಪನ್ಯಾಸಗಳನ್ನು ಮುದ್ರಿಸುವ ಹಂತದಲ್ಲಿ ನಾಲ್ಕನೆಯ ಅಧ್ಯಾಯವನ್ನು ಸೇರಿಸಿರುವುದಾಗಿ ಮುನ್ನುಡಿಯಲ್ಲಿ ಹೇಳಲಾಗಿದೆ. ಈ ಗ್ರಂಥವನ್ನು ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯದ 1956ರಲ್ಲಿ ಪ್ರಕಟಿಸಿದೆ.

ಮೊದಲನೆಯ ಉಪನ್ಯಾಸ ಸುಮಾರು ಇಪ್ಪತ್ತೆರಡು ಪುಟಗಳ ಸುದೀರ್ಘ ಲೇಖನವಾಗಿದ್ದು ಇದು ಕರ್ನಾಟಕದ ಪ್ರಾಚೀನತೆಯಿಂದ ಪ್ರಾರಂಭವಾಗುತ್ತದೆ. ಅನಂತರ ಕರ್ನಾಟಕ ಪದದ ಪ್ರಾಚೀನತೆ ಮತ್ತು ಬಳಕೆ ಮತ್ತದರ ವಿಮರ್ಶೆಗಳು, ಕರ್ನಾಟಕ ಪ್ರದೇಶ ಐತಿಹಾಸಿಕ ಕಾಲದಲ್ಲಿ ಪಡೆದುಕೊಂಡ ತನ್ನ ವಿಶೇಷತೆ ಮತ್ತು ಕರ್ನಾಟಕ ಸಂಸ್ಕೃತಿಯ ಬಗೆಗಿನ ಮಹತ್ತರವಾದ ವಿವರಗಳನ್ನು ಒಳಗೊಂಡಿದೆ. ವಿಶೇಷವಾಗಿ ಪ್ರಾಚೀನ ಕಾಲವು ಇಂದಿನ ಭಾಷಾವಾರು ಪ್ರಾಂತ್ಯದ ಅಥವಾ ಭಾಷೆಯೇ ಪ್ರಧಾನವಾಗಿ ಆಡಳಿತಾತ್ಮಕ ಪ್ರದೇಶವನ್ನು ನಿರ್ಧರಿಸುತ್ತಿದ್ದ ಕಾಲವಲ್ಲದ ಒಂದು ವಿಶಾಲ ಮನೋಭಾವದ ಸಂಸ್ಕೃತಿಯ ಕಾಲವಾಗಿತ್ತು. ಕನ್ನಡ ಮಾತನಾಡುತ್ತಿದ್ದ ಕರ್ನಾಟಕದ ಅರಸುಮನೆತನಗಳು ತಾವು ವಿಶಾಲವಾದ ಭರತಖಂಡದ ಭೂಪ್ರದೇಶದ ಮೇಲೆ ಸಾಧಿಸಿದ್ದ ಆಡಳಿತಾತ್ಮಕ ಸಾರ್ವಭೌಮತ್ವವನ್ನು ಆಧರಿಸಿ ಕರ್ನಾಟಕದ ಶಾಸನಗಳು ದೊರೆಯುವ ಪ್ರದೇಶಗಳನ್ನು ಈ ಹಿನ್ನೆಲೆಯಲ್ಲಿ ಗುರುತಿಸಿ ಕನ್ನಡ ಸಂಸ್ಕೃತಿಯ ಪ್ರಭಾವವನ್ನು ಇವಕ್ಕೆ ಪೂರಕವಾಗಿ ಬಳಸಿಕೊಂಡು ಪ್ರಾಚೀನ ಕರ್ನಾಟಕದ ಎಲ್ಲೆಗಳನ್ನು ಗುರುತಿಸಿಕೊಡುವ ಸಾಲೆತ್ತೂರ್ ಅವರ ಈ ಪ್ರಯತ್ನ ಪ್ರಾಚೀನ ಕರ್ನಾಟಕದ ಬಗೆಗೆ ಅಧ್ಯಯನ ಮಾಡಲು ಇಚ್ಛಿಸುವ ಪ್ರತಿಯೊಬ್ಬ ಸಂಶೋಧಕನೂ ಓದಲೇಬೇಕಾದ ದಿಕ್ಸೂಚಿ ಉಪನ್ಯಾಸವೆಂದರೆ ಉತ್ಪ್ರೇಕ್ಷೆಯಲ್ಲ. ನನ್ನ ಅನುಭವವನ್ನು ಇಲ್ಲಿ ಹಂಚಿಕೊಳ್ಳುವುದಾದರೆ ನಾನು ಪ್ರಾಚೀನ ಕರ್ನಾಟಕದ ಪಶ್ಚಿಮದ ಕರಾವಳಿಯ ಕಡಲಾಚೆಯ ಸಂಪರ್ಕಗಳನ್ನು ಕುರಿತು ಅಧ್ಯಯನ ಮಾಡಲು ಪ್ರಾರಂಭಿಸಿದ ದಿನಗಳಲ್ಲಿ ಪ್ರಾಚೀನ ಕರ್ನಾಟಕದ ಎಲ್ಲೆಯನ್ನು ಗುರುತಿಸುವುದು ಅತ್ಯಂತ ಕ್ಲಿಷ್ಟಕರ ಸಮಸ್ಯೆಯಾಗಿ ಎದುರಾಯಿತು. ಕಾರಣ ಮೌರ್ಯರು, ಅನಂತರ ಶಾತವಾಹನರು,

ಶಾತವಾಹನರ ಸಮಕಾಲೀನರಾದ ತುಳುವ, ಗಂಗ, ನೊಳಂಬ ಮುಂತಾದ ಹಲವಾರು ಸಣ್ಣಪುಟ್ಟ ಮನೆತನಗಳು ಇಂದಿನ ಕರ್ನಾಟಕದ ಸವಿಸ್ತಾರ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದು ಅನಂತರದ ದಿನಗಳಲ್ಲಿ ಗಂಗ, ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರ, ಬಹಮನಿ ಸಾಮ್ರಾಜ್ಯ ಇವು ಕರ್ನಾಟಕವನ್ನು ಆಳಿದ್ದರಿಂದ ಯಾವ ಭೂಪ್ರದೇಶವನ್ನು ಪ್ರಾಚೀನ ಕರ್ನಾಟಕವೆಂದು ಗುರುತಿಸಿಕೊಳ್ಳಲು ಹೆಣಗಾಡುತ್ತಿದ್ದ ನನಗೆ ನಿಖರ ದೃಷ್ಟಿಕೋನವನ್ನು ನೀಡಿದ್ದುದೇ ಈ ಲೇಖನ. ಇದನ್ನಾಧರಿಸಿ ನನ್ನ ಪಿಎಚ್.ಡಿ. ಪ್ರೌಢಪ್ರಬಂಧದಲ್ಲಿ ಪ್ರಾಚೀನ ಕರ್ನಾಟಕದ ಎಲ್ಲೆಯನ್ನು ನಿರ್ಧರಿಸಿಕೊಂಡೆ.

ಎರಡನೆಯ ಉಪನ್ಯಾಸದಲ್ಲಿ ಕರ್ನಾಟಕದ ಅರಸುಮನೆತನಗಳು ವಿದೇಶೀಯ ಅರಸುಮನೆತನಗಳೊಂದಿಗೆ ಹೊಂದಿದ್ದ ಸಂಪರ್ಕಗಳನ್ನು, ಅವುಗಳಿಗೆ ಪೂರಕವಾಗುವ ಸಾಹಿತ್ಯರಾಶಿಯನ್ನು, ಆಂತರಿಕ ವ್ಯಾಪಾರದಲ್ಲಿ ತೊಡಗಿದ್ದ ವೀರಬಣಜಿಗ ಸಮುದಾಯವನ್ನು, ಬ್ಯಾಬಿಲೋನಿಯನ್ ಸಾಮ್ರಾಜ್ಯದೊಂದಿಗೆ ವೀರಬಣಜಿಗರು ಹೊಂದಿದ್ದ ಸಂಬಂಧವನ್ನು, ಅಲ್ಲದೆ ಕನ್ನಡಿಗರು ಮತ್ತು ಬ್ಯಾಬಿಲೋನಿಯನ್ ಸಂಸ್ಕೃತಿಯೊಂದಿಗೆ ಇದ್ದ ಸಂಪರ್ಕವನ್ನು ಅತ್ಯಂತ ವಿಶದವಾಗಿ ದಾಖಲಿಸುತ್ತಾರೆ.

ಮೂರನೆಯ ಉಪನ್ಯಾಸದಲ್ಲಿ ಕರ್ನಾಟಕದ ವಿಸ್ತಾರವಾದ ಭೂಪ್ರದೇಶ, ಈ ಭೂಪ್ರದೇಶವನ್ನಾಳಿದ ಮಹಾನ್ ಅರಸುಮನೆತನಗಳು, ಶ್ರೇಷ್ಠ ಹೋರಾಟಗಾರರು, ಬ್ಯಾಬಿಲೋನಿಯಾ ಮತ್ತು ಕರ್ನಾಟಕದ ಸಂಬಂಧ, ಭಾರತೀಯರ ಮತ್ತು ಬ್ಯಾಬಿಲೋನಿಯನ್ ಸಂಸ್ಕೃತಿಯ ವಿವಿಧ ಆಯಾಮಗಳು, ಭಾರತೀಯರು ಮತ್ತು ಬ್ಯಾಬಿಲೋನಿಯನ್ ಸಂಸ್ಕೃತಿಯ ನಡುವೆ ಕಂಡುಬರುವ ಅಪಾರ ಸಾಮ್ಯಗಳು ಇತ್ಯಾದಿಗಳನ್ನು ಚರ್ಚಿಸುತ್ತಾರೆ.

ನಾಲ್ಕನೆಯ ಉಪನ್ಯಾಸವಾಗಿ ಕರ್ನಾಟಕ ಪ್ರದೇಶವು ಇಂಡೋನೇಶಿಯಾ ಮತ್ತು ಚೀನಾಗಳ ನಡುವೆ ಹೊಂದಿದ್ದ ಸಂಬಂಧಗಳನ್ನು ವಿಶೇಷವಾಗಿ ಚರ್ಚಿಸುತ್ತಾರೆ. ಇಷ್ಟೇ ಅಲ್ಲದೆ ಈ ಕಿರುಹೊತ್ತಿಗೆಯ ಕೊನೆಗೆ ಮೂರು ಅಡಕಗಳನ್ನು ಕೊಟ್ಟಿದ್ದು ಅವು ಬಳ್ಳಾರಿಯನ್ನು ಕರ್ನಾಟಕ ಸಂಸ್ಕೃತಿಯ ಕೇಂದ್ರವಾಗಿ ರೂಪಿಸಿ, ಅದಕ್ಕೆ ಆವಶ್ಯಕ ದಾಖಲೆಗಳನ್ನೊದಗಿಸುವುದು ಮೊದಲ ಅಡಕ. ಬಾದಾಮಿಯ ಚಾಲುಕ್ಯ ವಂಶವು ಬಳ್ಳಾರಿಯ ಪ್ರದೇಶದ ಮೇಲೆ ಹೊಂದಿದ್ದ ಪರಮಾಧಿಕಾರದ ಬಗೆಗೆ ವಿವರ ನೀಡುವುದು

ಎರಡನೆಯ ಅಡಕ. ಮೂರನೆಯ ಅಡಕವು ಮಡಕಶಿರಾದ ಪ್ರಾಚೀನತೆ ಮತ್ತು ಅದರ ಇತಿಹಾಸವನ್ನು ಕುರಿತಂತೆ ಬರೆದುದಾಗಿದೆ. ಸುಮಾರು ನೂರು ಪುಟಗಳಲ್ಲಿ ಅಡಕವಾಗಿರುವ ನಾಲ್ಕು ಉಪನ್ಯಾಸಗಳು ಮತ್ತು ಮೂರು ಅಡಕಗಳು ಕರ್ನಾಟಕದ, ಅದರಲ್ಲೂ ವಿಶೇಷವಾಗಿ ಪ್ರಾಚೀನ ಕಾಲಘಟ್ಟದ ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳಲು ಅಥವಾ ಅಧ್ಯಯನ ಮಾಡಲು ಬಯಸುವ ಯಾವುದೇ ವ್ಯಕ್ತಿ ಪ್ರಥಮವಾಗಿ ಗ್ರಹಿಸಲೇಬೇಕಾದ ಗ್ರಂಥವಿದಾಗಿದೆ. ವಿಶೇಷವಾಗಿ ಕರ್ನಾಟಕದ ಕಡಲಾಚೆಯ ಸಂಪರ್ಕಗಳ ಬಗೆಗೆ ಇವರು ರಚಿಸಿರುವ ಎರಡು ಬೃಹತ್ ಗ್ರಂಥಗಳಾದ 'ಇಂಡಿಯಾಸ್ ಡಿಪ್ಲಮ್ಯಾಟಿಕ್ ರಿಲೇಶನ್ಸ್ ವಿತ್ ವೆಸ್ಟ್' ಮತ್ತು 'ಇಂಡಿಯಾಸ್ ಡಿಪ್ಲಮ್ಯಾಟಿಕ್ ರಿಲೇಶನ್ಸ್ ವಿತ್ ಈಸ್ಟ್' ಕೃತಿಗಳು ಮಹತ್ವಪೂರ್ಣವಾದ ಕೃತಿಗಳಾಗಿವೆ. ಇವು ಬೃಹತ್ ಗ್ರಂಥಗಳಾಗಿದ್ದರೂ ಅತಿ ಸುಲಭವಾಗಿ ಓದಿಸಿಕೊಳ್ಳುವ ಸುಂದರ ಭಾಷೆಯಲ್ಲಿರುವುದರಿಂದ ಕ್ಲಿಷ್ಟವಾಗುವುದಿಲ್ಲ.

ಈ ಪ್ರದೇಶದ ಸಾಮಾಜಿಕ – ಧಾರ್ಮಿಕ ಇತಿಹಾಸದಲ್ಲಿ ವ್ಯವಹಾರ ಸಮುದಾಯಗಳ ಸ್ಪಷ್ಟವಾದ ವಿವರಗಳನ್ನು ಈ ಕೆಲಸವು ನೀಡುತ್ತದೆ. 1955ರಲ್ಲಿ ಪ್ರಕಟವಾದ 'ಟ್ರಾನ್ಸ್ ಓಷಾನಿಕ್ ಕಾನ್ಟ್ರಕ್ಟ್ಸ್' ಸಾಗರೋತ್ತರ ವ್ಯಾಪಾರವನ್ನು ಮತ್ತು ವ್ಯಾಪಾರ ಸಮುದಾಯಗಳ ಪಾತ್ರವನ್ನು ತಿಳಿಯಲು ಉಪಯುಕ್ತವಾಗಿದೆ ಹಾಗೂ ಅಭಿವೃದ್ಧಿಶೀಲ ಬಂದರುಗಳು ಮತ್ತು ವ್ಯಾಪಾರದ ಸರಕುಗಳನ್ನು ತಿಳಿಸುತ್ತದೆ. ಈ ಎಲ್ಲಾ ಖಾತೆಗಳನ್ನು ಆರಂಭಿಕ ವಿದೇಶಿ ಪ್ರವಾಸೋದ್ಯಮಗಳು, ವಿದೇಶಿ ಇತಿಹಾಸ ಮತ್ತು ಶಾಸನಗಳ ಆಧಾರದ ಮೇಲೆ ನೀಡಲಾಗಿದೆ. ನಂತರದ ವಿದ್ವಾಂಸರು ರಾಜಕೀಯ ಘಟನೆಗಳನ್ನು ಕಾಲಾನುಕ್ರಮದಲ್ಲಿ ಪುನರ್ನಿರ್ಮಿಸಲು ಶ್ರಮಿಸಿದ್ದಾರೆ. ಮುಂಚಿನ ಕೃತಿಗಳು– ಶೀನಪ್ಪ ಹೆಗ್ಡೆಯವರ 'ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳಪಾಂಡ್ಯರಾಯನ ಅಳಿಯ ಕಟ್ಟು' (1919). ಇವರ ಕೆಲಸದಲ್ಲಿ ರಾಜಕೀಯ ಚರಿತ್ರೆಯ ಪ್ರಮುಖವಾದ ಪ್ರಭಾವವಿದೆ. ಪ್ರವರ್ತಕ ಕೃತಿಯಾಗಿ ಪುಸ್ತಕವು ತನ್ನದೇ ಆದ ಪ್ರಾಮುಖ್ಯವನ್ನು ಹೊಂದಿದ್ದರೂ, ಇದು ಕಾಲಾನುಕ್ರಮದ ವ್ಯತ್ಯಾಸಗಳನ್ನು ಹೊಂದಿದೆ. ಲೇಖಕರು ನಿರ್ಣಾಯಕ ಮೂಲ ವಸ್ತುವಿನ ಬಳಕೆಯನ್ನು ತಲುಪುವಲ್ಲಿ ವಿಫಲರಾಗಿದ್ದಾರೆ.

ಕೆ. ಎಮ್. ಗುಪ್ತಾರವರ 'ಲ್ಯಾಂಡ್ ಸಿಸ್ಟಮ್ ಇನ್ ಸೌತ್ ಇಂಡಿಯಾ'ದಲ್ಲಿ (1933) ದಕ್ಷಿಣ ಭಾರತದ ಕೃಷಿಯ ಆರ್ಥಿಕತೆಯ ಪ್ರಮುಖ ಅಂಶಗಳೊಂದಿಗೆ ವ್ಯವಹರಿಸುತ್ತದೆ.

ಆದರೆ ದಕ್ಷಿಣ ಕನ್ನಡದಲ್ಲಿ ಉಂಟಾದ ಪರಿಸ್ಥಿತಿಗಳ ನೇರ ಚರ್ಚೆಯಿಲ್ಲ. ಅ. ಅಪ್ಪಾ ದೊರೈಯವರ 'ಎಕೊನಾಮಿಕ್ ಕಂಡಿಷನ್ಸ್ ಸದರನ್ ಇಂಡಿಯಾ' ಸಂಪುಟ-2 (ಕ್ರಿ.ಶ.1000-1500) ರಲ್ಲಿ ಇವರು ಆರ್ಥಿಕ ಇತಿಹಾಸದ ಕ್ಷೇತ್ರದಲ್ಲಿ ಒಂದು ಆರಂಭಿಕ ಕೆಲಸ ಮಾಡಿದ್ದಾರೆ. ಆದರೆ ಇದು ದಕ್ಷಿಣ ಕನ್ನಡದ ಕೃಷಿ ಇತಿಹಾಸದ ಮೇಲೆ ಯಾವುದೇ ನೇರವಾದ (ಕೊರತೆಯನ್ನು) ಸಂಬಂಧವನ್ನು ಹೊಂದಿಲ್ಲ. ಕೆ. ಎಸ್. ಶಿವಣ್ಣ ಅವರ 'ಅಗ್ರೇರಿಯನ್ ಸಿಸ್ಟಮ್ ಆಫ್ ಕರ್ನಾಟಕ' (1336-1761), ಇದರಲ್ಲಿ ಕರ್ನಾಟಕದ ಕೃಷಿ ವ್ಯವಸ್ಥೆಯನ್ನು ವಿಶೇಷ ಅಧ್ಯಯನ ಮಾಡಿದ್ದಾರೆ. ಅವರು ಮಧ್ಯಕಾಲೀನ ಕೃಷಿಯ ಆರ್ಥಿಕತೆ, ಭೂಮಿ ಮತ್ತು ಮಾಲಿಕತ್ವ ಮೌಲ್ಯಮಾಪನ ಮತ್ತು ಭೂ ಆದಾಯದ ಸಂಗ್ರಹ ಕೃಷಿ ಉತ್ಪನ್ನ ಮತ್ತು ವ್ಯಾಪಾರ ಮತ್ತು ರೈತರ ಪರಿಸ್ಥಿತಿಗಳ ವ್ಯಾಪಾರದ ಕೆಲವು ವೈಶಿಷ್ಟಗಳನ್ನು ಚರ್ಚಿಸಿದ್ದಾರೆ. ಆದಾಗ್ಯೂ ವಿಜಯನಗರದ ಪೂರ್ವದ ಅವಧಿಯು ಈ ಕೃತಿಯಲ್ಲಿ ಹೊರಗುಳಿದಿದೆ. ಕೆಲವು ಮೂಲಗಳು ದಕ್ಷಿಣ ಕನ್ನಡವನ್ನು ಸೂಚಿಸುತ್ತದೆಯಾದರೂ, ಈ ಪ್ರದೇಶದ ಯವುದೇ ವಿಶೇಷ ಅಧ್ಯಯನಗಳಿಲ್ಲ.

ಗಣಪತಿ ರಾವ್ ಐಗಳ್ ಅವರ 'ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ'ವು ಜಿಲ್ಲೆಯ ಇತಿಹಾಸ ಮತ್ತು ಸಂಸ್ಕೃತಿಯ ಸಮಗ್ರ ಸಮೀಕ್ಷೆಯಾಗಿದೆ. ಆದರೆ ರಾಜಕೀಯ ಇತಿಹಾಸದ ಮೇಲೆ ವಿಶೇಷ ಒತ್ತು ಇದೆ. ಅವರು ಸಾಮ್ರಾಜ್ಯಶಾಹಿ ಅಧಿಕಾರಿಗಳ ಆಳ್ವಿಕೆಯಲ್ಲಿ ಮತ್ತು ಆಳುಪ ಮತ್ತು ವಿಜಯನಗರ ಆಡಳಿತಗಾರರ ಅಡಿಯಲ್ಲಿ ಜಿಲ್ಲೆಯ ಆಡಳಿತಕ್ಕೆ ಸಾಕಷ್ಟು ಸ್ಥಳವನ್ನು ಅರ್ಪಿಸಿದ್ದಾರೆ. ದಕ್ಷಿಣ ಕನ್ನಡದಲ್ಲಿ ಆಳಿದ ರಾಜವಂಶಗಳ ಬಗ್ಗೆ ಚರ್ಚೆಯೂ ಆಗಿದೆ. ಆದಾಗ್ಯೂ, ಈ ಕೆಲಸದಲ್ಲಿ ಪ್ರಸ್ತುತಪಡಿಸಲಾದ ಹಲವು ವಿವರಗಳಿಗೆ ವಸ್ತುನಿಷ್ಠತೆ ಅಗತ್ಯವಿರುತ್ತದೆ.

ಆರ್. ಕೆ. ಮುಖರ್ಜಿಯವರ 'ಇಂಡಿಯನ್ ಶಿಪ್ಪಿಂಗ್' ಮಾದರಿಯಲ್ಲಿ ಸಾಗುವ ಮತ್ತೊಂದು ಪ್ರಮುಖ ಕೃತಿ 1977ರಲ್ಲಿ ಪ್ರಕಟವಾದ ಮೋತಿ ಚಂದ್ರರವರ 'ಟ್ರೇಡ್ ಅಂಡ್ ಟ್ರೇಡ್ಸ್ ರೂಟ್ಸ್ ಇನ್ ಏನ್ಸಿಯಂಟ್ ಇಂಡಿಯಾ'. ಹಿಂದಿ ಭಾಷೆಯಲ್ಲಿ ರಚನೆಯಾದ ಸಾರ್ಥವಾದ ಗ್ರಂಥದ ಇಂಗ್ಲಿಷ್ ಭಾಷಾಂತರ ಕೃತಿ. ಈ ಕೃತಿ ನಂತರ ಭಾರತೀಯ ಇತರ ಭಾಷೆಗಳಿಗೆ ವಿಶೇಷವಾಗಿ ಕನ್ನಡ ಭಾಷೆಗೂ ಇದೇ ಹೆಸರಿನಲ್ಲಿ ಭಾಷಾಂತರಗೊಂಡಿದೆ. ಈ ಗ್ರಂಥವು ಹದಿಮೂರು ಅಧ್ಯಾಯಗಳನ್ನು ಹೊಂದಿದ್ದು 260 ಪುಟಗಳನ್ನು ಹೊಂದಿದೆ.

ಅಲ್ಲದೆ 24 ಛಾಯಾಚಿತ್ರಗಳನ್ನು ಒಳಗೊಂಡಿದೆ. ಮೊದಲ ಅಧ್ಯಾಯವು ಪ್ರಾಚೀನ ಕಾಲದ ವ್ಯಾಪಾರೀ ಮಾರ್ಗಗಳನ್ನು ಕುರಿತು ಮಹತ್ವದ ಮಾಹಿತಿಯನ್ನು ಹೊರಹಾಕುತ್ತದೆ. ಇದು ಭಾರತದಲ್ಲಿ ಇದ್ದ ಆಂತರಿಕ ವ್ಯಾಪಾರ ಮತ್ತು ಸಾಗರೋತ್ತರ ಮಾರ್ಗಗಳನ್ನು ಕುರಿತು ಮಾಹಿತಿಯನ್ನು ದಾಖಲಿಸುತ್ತದೆ. ಎರಡನೆಯ ಅಧ್ಯಾಯವು ಭಾರತವು ಪ್ರಾಗಿತಿಹಾಸ ಮತ್ತು ವೇದಯುಗದಲ್ಲಿನ ಯಾತ್ರಾರ್ಥಿಗಳ ಹಾಗೂ ವ್ಯಾಪಾರಿಗಳ ಬಗೆಗೆ, ವ್ಯಾಪಾರ ಮಾರ್ಗಗಳ ಬಗೆಗೆ ಮಾಹಿತಿಗಳನ್ನು ಒಳಗೊಂಡಿದೆ. ಮೂರನೆಯ ಅಧ್ಯಾಯವು ಮಹಾಜನಪದಗಳ ಕಾಲದಲ್ಲಿನ ವ್ಯಾಪಾರ, ವ್ಯಾಪಾರಿಗಳು ಮತ್ತು ಯಾತ್ರಾರ್ಥಿಗಳನ್ನು ಮತ್ತು ತತ್ಸಂಬಂಧಿ ವಿವರಗಳನ್ನು ದಾಖಲಿಸುತ್ತದೆ. ನಾಲ್ಕನೆಯ ಅಧ್ಯಾಯವು ಮೌರ್ಯ ಯುಗದಲ್ಲಿ ಭಾರತದ ರಾಷ್ಟ್ರೀಯ ಪಥಗಳಲ್ಲಿ ಸಂಚರಿಸಿದ ಪ್ರವಾಸಿಗರು ಮತ್ತು ಅದನ್ನು ಆಕ್ರಮಿಸಿಕೊಂಡ ಜನಾಂಗಗಳ ಬಗೆಗೆ, ಅವರ ದಾಳಿಗಳು, ವ್ಯಾಪಾರಸ್ಥರು ಇತ್ಯಾದಿ ಮಾಹಿತಿಯನ್ನು ಹೊಂದಿದೆ. ಐದನೆಯ ಅಧ್ಯಾಯದಲ್ಲಿ ಭಾರತವನ್ನು ಸಂಪರ್ಕಿಸುತ್ತಿದ್ದ ವಿದೇಶೀಯ ಸಂಪರ್ಕದ ಜಾಲದ ಮೇಲೆ ನಡೆದ ಕಾಡುಜನಾಂಗದ ದಾಳಿ, ಆ ಮಾರ್ಗಗಳಲ್ಲಿ ಸಂಚರಿಸುತ್ತಿದ್ದ ವರ್ತಕರು ಮತ್ತು ಆ ಕಾಲದ ವ್ಯಾಪಾರದ ಮಾರ್ಗಗಳು ಇತ್ಯಾದಿಗಳ ಬಗೆಗೆ ಮಹತ್ವಪೂರ್ಣವಾದ ಮಾಹಿತಿಯನ್ನು ದಾಖಲಿಸುತ್ತಾರೆ. ಆರನೆಯ ಅಧ್ಯಾಯವು ಭಾರತವು ರೋಮನ್ ಸಾಮ್ರಾಜ್ಯದೊಂದಿಗೆ ಹೊಂದಿದ್ದ ವ್ಯಾಪಾರವನ್ನು ದಾಖಲಿಸಲು ಮೀಸಲಾಗಿದೆ. ಏಳನೆಯ ಅಧ್ಯಾಯದಲ್ಲಿ ಬೌದ್ಧ ಗ್ರಂಥಗಳು; ಸಂಸ್ಕೃತ, ಪಾಳಿ, ಪ್ರಾಕೃತ ಭಾಷೆಗಳ ಸಾಹಿತ್ಯರಾಶಿಗಳಲ್ಲಿ ಉಲ್ಲೇಖವಾಗಿರುವ ವ್ಯಾಪಾರಿಗಳು; ವ್ಯಾಪಾರ ಮಾರ್ಗಗಳು; ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು; ಸಂಪರ್ಕಸಾಧನಗಳು ಇತ್ಯಾದಿ ವಿವರಗಳನ್ನು ದಾಖಲಿಸುತ್ತಾರೆ. ಎಂಟನೆಯ ಅಧ್ಯಾಯವು ದಕ್ಷಿಣ ಭಾರತದ ವ್ಯಾಪಾರೀ ಮಾರ್ಗಗಳನ್ನು ಮತ್ತು ವ್ಯಾಪಾರಿಗಳನ್ನು ಕುರಿತು ವಿವರ ನೀಡುತ್ತದೆ. ಒಂಬತ್ತನೆಯ ಅಧ್ಯಾಯವು ಜೈನ ಸಾಹಿತ್ಯರಾಶಿಯಲ್ಲಿ ಕಂಡುಬರುವ ವ್ಯಾಪಾರಿಗಳು, ವ್ಯಾಪಾರೀ ಮಾರ್ಗಗಳು, ವ್ಯಾಪಾರದ ವಿಧಿವಿಧಾನಗಳು ಮುಂತಾದವುಗಳನ್ನು ದಾಖಲಿಸಿದ್ದಾರೆ. ಹತ್ತನೆಯ ಅಧ್ಯಾಯವು ಗುಪ್ತಯುಗದಲ್ಲಿ ಕಂಡುಬಂದ ವ್ಯಾಪಾರ ವಾಣಿಜ್ಯ, ವ್ಯಾಪಾರ ಮಾರ್ಗಗಳು, ವ್ಯಾಪಾರಿ ಸಂಘಗಳು ಮುಂತಾದ ವಿವರಗಳನ್ನು ಒಳಗೊಂಡಿದೆ. ಹನ್ನೊಂದನೆಯ ಅಧ್ಯಾಯದಲ್ಲಿ ಮೆಡಿಟರೇನಿಯನ್ ಸಾಗರ ಪ್ರದೇಶಗಳಲ್ಲಿ ವ್ಯಾಪಾರ ನಡೆಸಿದ ಭಾರತೀಯ ವ್ಯಾಪಾರಿಗಳ ಬಗೆಗೆ ಕ್ರಿ.ಶ. ಏಳನೆಯ ಶತಮಾನದಿಂದ ಹನ್ನೊಂದನೇ ಶತಮಾನದವರೆಗಿನ ಕಾಲಘಟ್ಟದ

ಮಾಹಿತಿಗಳನ್ನು ಒಂದೆಡೆ ಕಲೆಹಾಕುತ್ತಾರೆ. ಹನ್ನೆರಡನೇ ಅಧ್ಯಾಯದಲ್ಲಿ ಇಡೀ ಸಾಗರೋತ್ತರ ಸಂಪರ್ಕದ ಬಗೆಗಿನ ಸಾಹಿತ್ಯ ರಾಶಿಯಲ್ಲಿ ಕಂಡುಬಂದ ಹಡಗುಗಳ ಬಗೆಗಿನ ಮಾಹಿತಿ, ಅದರಲ್ಲೂ ಭಾರತೀಯ ಹಡಗುಗಳ ಮಾಹಿತಿಯನ್ನು ನೀಡಲಾಗಿದೆ. ಹದಿಮೂರನೇ ಅಧ್ಯಾಯದಲ್ಲಿ ಭಾರತೀಯ ಕಲೆಗಳಲ್ಲಿ ಕಂಡುಬಂದ ವ್ಯಾಪಾರಕ್ಕೆ ಸಂಬಂಧಿಸಿದ ಕಲೆಯಲ್ಲಿನ ಉಲ್ಲೇಖಗಳನ್ನು ಸಮಗ್ರವಾಗಿ ಅಧ್ಯಯನ ಮಾಡಲಾಗಿದೆ. ಶಬ್ದಸೂಚಿಯನ್ನು ಮತ್ತು ಛಾಯಾಚಿತ್ರಗಳನ್ನು ಅಡಕ ಮಾಡಲಾಗಿದೆ. ಪ್ರತಿ ಅಧ್ಯಾಯದ ಕೊನೆಯಲ್ಲಿಯೂ ವಿವರವಾದ ಆಕರ ಗ್ರಂಥಗಳನ್ನು ದಾಖಲಿಸಿರುವುದರಿಂದ ಪುಸ್ತಕದ ಅಂತ್ಯದಲ್ಲಿ ಆಯ್ದ ಆಕರ ಪಟ್ಟಿಯನ್ನು ನೀಡುವ ಪುನರಾವರ್ತನೆಯನ್ನು ಕೈಬಿಡಲಾಗಿದೆ. ಈ ಗ್ರಂಥಕ್ಕೆ ಸುದೀರ್ಘವಾದ ಹದಿನೆಂಟು ಪುಟಗಳ ಪೀಠಿಕೆ ಅಥವಾ ಪ್ರವೇಶಿಕೆಯನ್ನು ಖ್ಯಾತ ವಿದ್ವಾಂಸ ವಿ. ಎಸ್. ಅಗರವಾಲ್ ಬರೆದಿದ್ದಾರೆ. ಇದು ಇಡೀ ಗ್ರಂಥದ ಸಾರವೆಂದರೂ ತಪ್ಪಾಗಲಾರದು.

ಕೆ. ವಿ. ರಮೇಶ್‌ರವರ 'ಹಿಸ್ಟರಿ ಆಫ್ ಸೌತ್ ಕೆನರಾ'ದಲ್ಲಿ ಸಮಸ್ತ ತುಳುನಾಡನ್ನು ಪುರಾತನ, ಪ್ರಾಚೀನ, ಮಧ್ಯಯುಗೀನ ಮತ್ತು ವಿಜಯನಗರ ಕಾಲವೆಂದು ವಿಂಗಡನೆ ಮಾಡಿಕೊಂಡು ಆಡಳಿತದ ವಿವರ, ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಪರಿಸ್ಥಿಯ ವಿವರಣೆ ವ್ಯಾಪಾರಿಗಳ ಮತ್ತು ವ್ಯಾಪಾರ ಸಂಘಗಳು ಮತ್ತು ಅವುಗಳ ಕಾರ್ಯಗಳ ಬಗ್ಗೆ ಉಲ್ಲೇಖಿಸಲಾಗಿದೆ. ಅವರ ಕೆಲಸದ ಮುಖ್ಯ ಮೂಲವೆಂದರೆ ಶಾಸನಗಳು. ಪಿ. ಗುರುರಾಜ್ ಭಟ್‌ರು 1975ರಲ್ಲಿ ನಡೆಸಿದ ಸಂಶೋಧನೆ 'ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್' ನಲ್ಲಿ ಅದೇ ಅಂಶಗಳನ್ನು ಕಂಡುಕೊಂಡಿದ್ದಾರೆ.

ರಮೇಶ್ ಅವರ ಖಾತೆಗಳು, ಗಣನೀಯವಾಗಿ ಪರಿಗಣಿಸಲ್ಪಟ್ಟಿರುವ ಮತ್ತೊಂದು ಪ್ರಮುಖ ಕೆಲಸವೆಂದರೆ ಬಿ. ಆರ್. ಹಿರೇಮಠ್‌ರವರ 1986ರಲ್ಲಿ ಧಾರವಾಡ ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಅವರ ಕೆಲಸವು ಶಾಸನಗಳಲ್ಲಿ ಅವಲಂಬಿತವಾಗಿದ್ದರೂ ಸಹ, ಹಿರೇಮಠ್ ಅನೇಕ ವೇಳೆ ವ್ಯಾಪಾರಿಗಳ ಮೇಲೆ ತನ್ನ ದೃಷ್ಟಿಕೋನವನ್ನು ವ್ಯಕ್ತಪಡಿಸುವ ಸಾಹಿತ್ಯ ಕೃತಿಗಳನ್ನು ಉಲ್ಲೇಖಿಸಿರುತ್ತಾರೆ. ಈ ಗ್ರಂಥವು ವ್ಯಾಪಾರ ಕ್ಷೇತ್ರಗಳ ಸ್ವಭಾವದ ಬಗ್ಗೆ ಮತ್ತು ಪ್ರಬಲ ಗುಂಪುಗಳನ್ನು ರೂಪಿಸುವಲ್ಲಿನ ಅವರ ಪಾತ್ರವೂ ಅಲ್ಲದೆ, ಅಧ್ಯಯನದಲ್ಲಿ ಈ ಪ್ರದೇಶದ ಧಾರ್ಮಿಕ ಮತ್ತು ವೀರೋಚಿತ ಚಟುವಟಿಕೆಗಳಲ್ಲಿ ಅವರ ಪಾತ್ರವೂ ಸಹ ಆಗಿದೆ. ಇತ್ತೀಚಿನ ಕೃತಿಗಳೆಂದರೆ, ಮೀರಾ ಅಬ್ರಹಾಂರವರ 'ಟು ಮಿಡಿವಲ್ ಮರ್ಚೆಂಟ್ಸ್ ಗಿಲ್ಡ್ಸ್ ಇನ್

ಸೌತ್ ಇಂಡಿಯಾ' ಮತ್ತು ಇ. ನಾಗೇಂದ್ರ ರಾವ್ ಲೇಖನಗಳು ನಮ್ಮ ಅಧ್ಯಯನದ ವಿಷಯಕ್ಕೆ ಕೆಲವು ಒಳನೋಟಗಳನ್ನು ನೀಡುತ್ತವೆ. ಬಿ. ವಸಂತ ಶೆಟ್ಟಿಯವರ ಅಪ್ರಕಟಿತ ಪ್ರಬಂಧ 'ಬಾರಕೂರು– ಅ ಮೆಟ್ರೋಪಾಲಿಟನ್ ಸಿಟಿ–ಇಟ್ಸ್ ಹಿಸ್ಟರಿ ಅಂಡ್ ಕಲ್ಚರ್' ನಮ್ಮ ಅಧ್ಯಯನಕ್ಕೆ ಉಪಯುಕ್ತವಾಗಿದೆ. ಏಕೆಂದರೆ, ಇದು ನಮ್ಮ ವಿಷಯದ ಬಗ್ಗೆ ಹೊಸ ಮಾಹಿತಿಯನ್ನು ನೀಡುತ್ತದೆ. ಕೆಲವು ಅಪ್ರಕಟಿತ ಶಾಸನಗಳ ಅಧ್ಯಯನ ಆಧಾರದಲ್ಲಿ ಈ ಶಾಸನಗಳನ್ನು ಸಂಗ್ರಹಿಸಿದ್ದು ಮತ್ತು ಸಂಪಾದಿಸಿದ್ದು ಇದರ ಲೇಖಕ ವಸಂತ ಶೆಟ್ಟಿಯವರು. ಇವು ವಿಶ್ವಾಸಾರ್ಹ ದಂತಕಥೆಗಳು ಮತ್ತು ಇತಿಹಾಸದ ಹೆಚ್ಚು ವಿಶ್ವಾಸಾರ್ಹ ಮೂಲಗಳಿಗೆ ಹೋಗಲು ಪ್ರಯತ್ನಿಸುತ್ತವೆ.

ಗಣಪತಿ ರಾವ್ ಐಗಳ್‌ರವರು ದಕ್ಷಿಣ ಕನ್ನಡದ ರಾಜವಂಶದ ವಂಶಾವಳಿಯನ್ನು ಪುನರ್ನಿರ್ಮಿಸಲು ಪ್ರಯತ್ನಿಸುತ್ತಿದ್ದರು. ಮುಂದಿನ ಪ್ರಮುಖ ವಿದ್ವಾಂಸರಾದ ಬಿ. ಎ. ಸಾಲೆತ್ತೂರು ಅವರು ಆಳುಪರ ರಾಜಕೀಯ ಇತಿಹಾಸದ ಮರುನಿರ್ಮಾಣದ ಬಗ್ಗೆ ಹೆಚ್ಚಿನ ಗಮನವನ್ನು ಕೇಂದ್ರೀಕರಿಸಿದ್ದಾರೆ. ಅವರ ಗ್ರಂಥ 'ಏನ್ಸಿಯಂಟ್ ಕರ್ನಾಟಕ' ಸಂಪುಟ–1, 'ಹಿಸ್ಟರಿ ಆಫ್ ತುಳುವ' (1936). ಈ ಗ್ರಂಥದಲ್ಲಿ ತುಳುವರ ಜೀವನದ ಮೇಲೆ ಪ್ರತ್ಯೇಕ ಅಧ್ಯಾಯವಿದೆ. ಇದು ಕೃಷಿಯ ಮೇಲೆ ಒಂದು ವಿಷಯವನ್ನು ಒಳಗೊಂಡಿದೆ. ಇಲ್ಲಿ ಲೇಖಕರು ಕೃತಿ ಆರ್ಥಿಕತೆಯ ಬಗ್ಗೆ ಶಿಲಾಶಾಸನ ಮೂಲಗಳಲ್ಲಿ ಒಳಗೊಂಡಿರುವ ಶ್ರಿಮಂತ ಮಾಹಿತಿಯನ್ನು ಬಳಸಿಕೊಳ್ಳಲಿಲ್ಲ. ಆದರೆ ಇವರು ಸಂಪೂರ್ಣವಾಗಿ ಪಾಡ್ದನಗಳ ಮೇಲೆ ಅವಲಂಬಿತರಾಗಿದ್ದರು, ಆದಾಗ್ಯೂ ಅವರು ಕೃಷಿ ಆರ್ಥಿಕತೆಯ ಯಾವುದೇ ಇತರ ಸಮಸ್ಯೆಗಳನ್ನೂ ಎದುರಿಸಲಿಲ್ಲ. ಸೂರ್ಯನಾಥ ಯು. ಕಾಮತ್‌ರವರ 'ತುಳುವ ಇನ್ ವಿಜಯನಗರ ಟೈಮ್ಸ್' ಪ್ರಬಂಧದಲ್ಲಿ ವಿಜಯನಗರ ಅಡಿಯಲ್ಲಿರುವ ಜಿಲ್ಲೆಯ ರಾಜಕೀಯ ಇತಿಹಾಸದ ಬಗ್ಗೆ ವಿವರಗಳನ್ನು ತಿಳಿಸಿದ್ದಾರೆ. ಈ ಪ್ರದೇಶದ ಆರ್ಥಿಕ ಇತಿಹಾಸದ ಕೆಲವು ಅಂಶಗಳನ್ನು ಗಮನ ಹರಿಸಲು ಪ್ರಯತ್ನಿಸಿದ್ದಾರೆ ಆದರೆ ಕೃಷಿ ಆರ್ಥಿಕತೆಯು ಅವರ ಅಲ್ಪ ಕಾಳಜಿಗಳಲ್ಲಿ ಒಂದಾಗಿದೆ.

ಕೆ. ವಿ. ರಮೇಶ್ ಅವರು ದಕ್ಷಿಣ ಕನ್ನಡದ ಇತಿಹಾಸದ ಬಗ್ಗೆ ಆರಂಭಿಕ ಕಾಲದಿಂದ ವಿಜಯನಗರ ಪತನದವರೆಗೂ ಬರೆದಿದ್ದಾರೆ. ಆಳುಪರು, ಹೊಯ್ಸಳರು ಮತ್ತು ವಿಜಯನಗರಗಳ ರಾಜಕೀಯ ಇತಿಹಾಸದ ಬಗ್ಗೆ ವಿವರವಾದ ಅಧ್ಯಯನ ಮಾಡಿದ್ದಾರೆ,

ಅವರ 'ತುಳುನಾಡಿನ ಇತಿಹಾಸ' (1969) ಮತ್ತು 'ಎ ಹಿಸ್ಟರಿ ಆಫ್ ಸೌತ್ ಕೆನರಾ' (1970). ಆದರೆ ಅಲ್ಲಿ ಆರ್ಥಿಕ ಸ್ಥಿತಿಗಳ ಬೇರೆ ಬಾಹ್ಯರೇಖೆಗಳು ಇವೆ. ಅವರು ತೂಕ ಮತ್ತು ಅಳತೆಗಳನ್ನು, ತೆರಿಗೆಗಳು, ವ್ಯಾಪಾರ ಮತ್ತು ಭೂಮಿ ಪ್ರಕಾರಗಳ ಬಗೆಗಿನ ವಿವರಣೆಗಳನ್ನು ನಿರ್ವಹಿಸಿದ್ದಾರೆ. ಆದರೆ ಅವರ ಬಗ್ಗೆ ಒಂದು ವಿಸ್ತೃತವಾದ ಅಧ್ಯಯನವು ಅವರ ಕೆಲಸದ ವ್ಯಾಪ್ತಿಯ ಹೊರಗೆ ಇದೆ. ಆದಾಗ್ಯೂ ಅವರು ದಕ್ಷಿಣ ಕನ್ನಡದಲ್ಲಿ ಕೃಷಿ ತಂತ್ರಜ್ಞಾನಗಳನ್ನು ಅರ್ಥಮಾಡಿಕೊಳ್ಳಲು ಅಮೂಲ್ಯ ಕೊಡುಗೆ ನೀಡಿದ್ದಾರೆ.

ಪಿ. ಗುರುರಾಜ್ ಭಟ್ ಅವರ ಪಿಎಚ್.ಡಿ ಪ್ರಬಂಧವಾದ 'ಎ ಪೊಲಿಟಿಕಲ್ ಅಂಡ್ ಕಲ್ಚರಲ್ ಆಫ್ ಹಿಸ್ಟರಿ ಆಫ್ ತುಳುನಾಡು' (1967) ಮತ್ತು ಪ್ರಕಟವಾದ ಕೃತಿ 'ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್' (1975). ಈ ಕೃತಿಗಳ ಪ್ರಮುಖ ಭಾಗವನ್ನು ಶಿಲ್ಪಗಳು ಮತ್ತು ದೇವಾಲಯಗಳು ಮತ್ತು ವಿವಿಧ ಧಾರ್ಮಿಕ ಪಂಗಡಗಳ ಅಧ್ಯಯನಕ್ಕೆ ಮೀಸಲಿಟ್ಟಿದೆ. ಅವರ 'ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್'ನಲ್ಲಿ ಆರ್ಥಿಕ ಜೀವನದ ಮೇಲೆ ಪ್ರತ್ಯೇಕ ಅಧ್ಯಾಯವನ್ನು ಮೀಸಲಿರಿಸಿದೆ. ಆದರೆ ಇಲ್ಲಿ ಅವರು ಕೃಷಿ ಆರ್ಥಿಕತೆಯ ಕೆಲವೊಂದು ಅಂಶಗಳನ್ನು ಮಾತ್ರ ಸ್ಪರ್ಶಿಸುತ್ತಾರೆ. ಕೃಷಿ ಪ್ರಯತ್ನಗಳ ಇತಿಹಾಸವನ್ನು ಪತ್ತೆಹಚ್ಚಲು ಮತ್ತು ಕೃಷಿ ಆರ್ಥಿಕತೆಯ ಸಂಕೀರ್ಣ ಸಮಸ್ಯೆಗಳನ್ನು ಚರ್ಚಿಸಲು ಯವುದೇ ಪ್ರಯತ್ನ ಮಾಡಲಾಗಿಲ್ಲ. ತೆರಿಗೆ, ಒಳನಾಡಿನ ಮತ್ತು ವಿದೇಶಿ ವ್ಯಾಪಾರ, ಉದ್ಯಮ, ನಾಣ್ಯಗಳ ತೂಕ ಮತ್ತು ಕ್ರಮಗಳು ಮತ್ತು ಕೃಷಿ ಈ ಕೆಲಸದಲ್ಲಿ ಒಂದು ಸ್ಥಳವನ್ನು ಕಂಡುಕೊಳ್ಳುತ್ತದೆ. ಸಂಕ್ಷಿಪ್ತವಾಗಿ ಕೃಷಿಯ ಪರಿಸ್ಥಿತಿಗಳನ್ನು ವ್ಯವಹರಿಸುವಾಗ, ಲೇಖಕರು ಭೂಮಿಯನ್ನು ಭತ್ತದ ಪ್ರದೇಶಗಳ ಮತ್ತು ಮಾಲೀಕತ್ವವನ್ನು ವರ್ಗೀಕರಿಸಿದ್ದಾರೆ. ಶಿಲಾರೂಪದ ಮೂಲಗಳನ್ನು ಸಂಪೂರ್ಣವಾಗಿ ಬಳಸಿದ ಮತ್ತು ಅವರ ವ್ಯಾಪ್ತಿಯ ಹೊರಗೆ ಬೀಳುವಂತೆ ಕೃಷಿ ಅರ್ಥವ್ಯವಸ್ಥೆಯ ವಿವಿಧ ಅಂಶಗಳ ಬಗ್ಗೆ ಯಾವುದೇ ಚರ್ಚೆ ಇಲ್ಲ.

ಕೆ. ಜಿ. ವಸಂತಮಾಧವರ 'ವೆಸ್ಟರ್ನ್ ಕರ್ನಾಟಕ– ಇಟ್ಸ್ ಅಗ್ರೇರಿಯನ್ ರಿಲೇಶನ್ಸ್' 1500–1800. ಇದು ನಂತರದ ಅವಧಿಯೊಂದಿಗೆ ವ್ಯವಹರಿಸುತ್ತದೆ ಇವರ ಮತ್ತೊಂದು ಕೃತಿ 'ರಿಲಿಜಿಯನ್ಸ್ ಇನ್ ಕೋಸ್ಟಲ್ ಕರ್ನಾಟಕ' ಇವೆಲ್ಲಾ ಬಂದರು, ಸಾಗರೋತ್ತರ ವ್ಯಾಪಾರ ಮತ್ತು ಆರ್ಥಿಕತೆಯ ಬಗ್ಗೆ ಮಾಹಿತಿಯನ್ನು ದೊರಕಿಸಿಕೊಡುತ್ತವೆ. ಮತ್ತು ಪಿ. ಎನ್.

ನರಸಿಂಹಮೂರ್ತಿ ಅವರ ಪ್ರಬಂಧ 'ಜೈನಿಸಂ ಆನ್ ದ ಕೆನರಾ ಕೋಸ್ಟ್'ನಲ್ಲಿ ದಕ್ಷಿಣ ಕನ್ನಡದ ಧಾರ್ಮಿಕ ಪರಿಸ್ಥಿಯನ್ನು ಅಧ್ಯಯನ ಮಾಡಿದ್ದಾರೆ. ಕೆ. ಜಿ. ವಸಂತ ಮಾಧವ ಅವರು ತಮ್ಮ ಅಧ್ಯಯನವನ್ನು ಧಾರ್ಮಿಕ ಸಂಸ್ಥೆಗಳಿಗೆ ಸಂಬಂಧಿಸಿದ ಭೂಮಿ, ಭೂಮಿ ಅನುದಾನ ಮತ್ತು ವಹಿವಾಟುಗಳಿಗೆ ಸೀಮಿತಗೊಳಿಸಿದ್ದಾರೆ. ಬಿ. ವಸಂತ ಶೆಟ್ಟಿ ಅವರ ಪ್ರಮುಖ ಗಮನವು ವ್ಯಾಪಾರಿ ವರ್ತಕರ ಬಗ್ಗೆ ಹಾಗೂ ವಹಿವಾಟುಗಳನ್ನು ಒಳಗೊಂಡಂತೆ ತುಳುನಾಡಿನ ರಾಜಧಾನಿ ಅಂದರೆ ಬಾರ್ಕೂರಿನಲ್ಲಿ ಅವರು ನಾಯರ್ಮ್ರಲ ಅಧಿಕಾರಾವಧಿಯ ಸ್ವಭಾವದ ಬಗ್ಗೆ ಚರ್ಚಿಸಿದ್ದಾರೆ.

ಬಿ. ಎಸ್. ಶಾಸ್ತ್ರೀಯವರ 'ಕರಾವಳಿ ಕರ್ನಾಟಕ ಮತ್ತು ಪೋರ್ಚುಗೀಸ್ ರಿಲೆಷನ್ಸ್' 1498–1763 ಎಂಬ ಕೃತಿಯು ಈ ಅಧ್ಯಯನದಲ್ಲಿ ಮಹತ್ವಪೂರ್ಣ ದಾಖಲೆಯಾಗಿದೆ. ಇವರು ಪೋರ್ಚುಗೀಸರ ಮೂಲ ದಾಖಲೆಯನ್ನು ಅಧ್ಯಯನ ನಡೆಸಿದ್ದಾರೆ. ತುಳುನಾಡಿನ ಸಾಮಂತ ರಾಜರುಗಳು ಪೋರ್ಚುಗೀಸರೊಂದಿಗಿನ ಸಂಬಂಧದ ಬಗ್ಗೆ ವಿವರಿಸಿದ್ದಾರೆ. ಹೊನ್ನಾವರ, ಭಟ್ಕಳ, ಗಂಗೊಳ್ಳಿ, ಬಸರೂರಿನಲ್ಲಿ ಸ್ಥಳೀಯ ವ್ಯಾಪಾರಿ ಸಂಘಗಳ ವಿರೋಧವನ್ನು ಕಾಣಬಹುದು. ಇಲ್ಲಿ ಪೋರ್ಚುಗೀಸರು ಮತ್ತು ಕೆಳದಿ ಅರಸರ ಯುದ್ಧ ಒಪ್ಪಂದ ನೀತಿಯನ್ನು ತಿಳಿಸುತ್ತಾರೆ. ಇವೆಲ್ಲದರ ಮೂಲ ಕಾಳುಮೆಣಸಿನ ವ್ಯಾಪಾರದ ಏಕಸ್ವಾಮ್ಯದ ಕುರಿತಾಗಿದೆ. ಜೊತೆಗೆ ಬಂದರುಗಳನ್ನು ತಮ್ಮ ನಿಯಂತ್ರಣಕ್ಕೆ ಪಡೆಯಲು ಯುದ್ಧಕ್ಕಿಳಿಯುತ್ತಿದ್ದರು. ಸಂಜಯ್ ಸುಬ್ರಹ್ಮಣ್ಯಂರವರ 'ದಿ ಪೊಲಿಟಿಕಲ್ ಇಕಾನಮಿ ಆಫ್ ಕಾಮರ್ಸ್ –ಸದರನ್ ಇಂಡಿಯಾ 1500–1650' ಕೃತಿಯು ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿದೆ. ತುಳುನಾಡಿನ ಬಂದರುಗಳಲ್ಲಿ ಸ್ಥಳೀಯ ವ್ಯಾಪಾರಿಗಳಿಂದ ಮತ್ತು ಸ್ಥಳಿಯ ಜನರಿಂದ ಪೋರ್ಚುಗೀಸರಿಗೆ ಎದುರಾದ ವಿರೋಧಗಳನ್ನು ವಿಶ್ಲೇಷಿಸಿದ್ದಾರೆ.

ಒಟ್ಟಿನಲ್ಲಿ ಪ್ರಸ್ತುತ ಸಂಶೋಧನೆಗೆ ಸಂಬಂಧಿಸಿದಂತೆ ವ್ಯಾಪಕ ಅಧ್ಯಯನ ಮಾಡಲಾಗಿದೆ. ಇಲ್ಲಿಯ ತನಕ ಪ್ರಕಟಿತ ಗ್ರಂಥಗಳಾಗಲಿ, ಪಿಎಚ್.ಡಿ ಪ್ರಬಂಧಗಳಾಗಲಿ ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯದ ಹಿನ್ನೆಲೆಯಲ್ಲಿ ವಿಸ್ತಾರಗೊಂಡಿಲ್ಲ. ಈ ಅಧ್ಯಯನದಲ್ಲಿ ಪೋರ್ಚುಗೀಸರಿಗೆ ಸಂಬಂಧಪಟ್ಟಂತೆ ಅನೇಕ ವಿಧದಲ್ಲಿ ನಮ್ಮ ದೇಶದ ಇತಿಹಾಸಕಾರರು ಅಧ್ಯಯನ ನಡೆಸಿದ್ದಾರೆ.

ಲ. ನ. ಸ್ವಾಮಿಯವರು ತಮ್ಮ ಪ್ರೌಢಪ್ರಬಂಧವನ್ನು ಪರಿಷ್ಕರಿಸಿ ಪರಿಷ್ಕೃತ ಆವೃತ್ತಿಯಾಗಿ 'ಮ್ಯಾರಿಟೈಮ್ ಕಾಂಟಾಕ್ಟ್ಸ್ ಆಫ್ ಏನ್ಶಿಯಂಟ್ ಇಂಡಿಯಾ ವಿತ್ ಸ್ಪೆಷಲ್ ರೆಫ್‌ರೆನ್ಸ್ ಟು ವೆಸ್ಟ್ ಕೋಸ್ಟ್' ಕೃತಿಯಾಗಿ 2000ದಲ್ಲಿ ಹೊರತಂದಿದ್ದಾರೆ. ಇದಲ್ಲದೆ ಇವರ ಅನೇಕ ಲೇಖನಗಳು ವಿವಿಧ ನಿಯತಕಾಲಿಕಗಳಲ್ಲಿ ವಿಚಾರಸಂಕಿರಣಗಳ ಹೊತ್ತಿಗೆಗಳಲ್ಲಿ ಪ್ರಕಟವಾಗಿದ್ದು ಅವೆಲ್ಲವೂ ಕರಾವಳಿ ಕರ್ನಾಟಕ ಮತ್ತು ಬಯಲುಸೀಮೆಯ ಸಂಪರ್ಕವನ್ನು ಪ್ರಾಗಿತಿಹಾಸ ಕಾಲದಿಂದ ಆಧುನಿಕ ಕಾಲದವರೆಗೆ ಗುರುತಿಸುವ ಪ್ರಯತ್ನಗಳಾಗಿವೆ. ಈ ಎಲ್ಲ ಆಕರಗಳನ್ನು ಸಂಶೋಧನೆಯ ಇತಿಮಿತಿಯಲ್ಲಿ ಆವಶ್ಯಕವೆನಿಸಿದ ಕಡೆ ಬಳಸಿಕೊಳ್ಳಲಾಗಿದೆ. ಬಹುತೇಕವಾಗಿ ಲ. ನ. ಸ್ವಾಮಿಯವರ ಸಂಶೋಧನಮಾರ್ಗವನ್ನೇ ನನ್ನ ಪ್ರೌಢಪ್ರಬಂಧದ ಸಂಶೋಧನ ವಿಧಾನವಾಗಿ ಕೂಡ ಬಳಸಿಕೊಂಡಿರುತ್ತೇನೆ.

ಒಟ್ಟಾರೆ ಈ ಸಂಶೋಧನೆಯಲ್ಲಿ ಅನೇಕ ಮಾರ್ಗದರ್ಶಿ ಪ್ರೇರಕ ಗ್ರಂಥಗಳು ದೊರೆತು ಅವುಗಳ ಅಭ್ಯಾಸದ ಹಿನ್ನೆಲೆಯಲ್ಲಿ ಈ ಪ್ರೌಢಪ್ರಬಂಧವನ್ನು ರಚಿಸುವ ಪ್ರಯತ್ನ ಮಾಡಲಾಗಿದೆ.

## 1. 8. ಅಧ್ಯಯನದ ಯೋಜನೆ

ಪ್ರಸ್ತುತ ಪ್ರೌಢಪ್ರಬಂಧವನ್ನು ಐದು ಅಧ್ಯಾಯಗಳಾಗಿ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ. ಅವುಗಳನ್ನು ಈ ಕೆಳಗಿನಂತೆ ದಾಖಲಿಸಬಹುದು.

**ಅಧ್ಯಾಯ 1 : ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ– ಪ್ರಸ್ತಾವನೆ**

ಈ ಅಧ್ಯಾಯದಲ್ಲಿ ತುಳುನಾಡು ಪ್ರಾಚೀನ ಕಾಲಘಟ್ಟದಿಂದ ವಸಾಹತು ಕಾಲಘಟ್ಟದವರೆಗೆ ಹೇಗೆ ತನ್ನ ಮಹತ್ವವನ್ನು ಉಳಿಸಿಕೊಂಡಿದ್ದಿತೆಂಬುದನ್ನು ಪಕ್ಷಿನೋಟವಾಗಿ ಅಧ್ಯಯನ ಮಾಡಿರುವುದಲ್ಲದೆ ತುಳುನಾಡಿನ ಭೌಗೋಳಿಕ ವಿಸ್ತಾರವನ್ನು ಗುರುತಿಸಿ ಅದರ ಇತಿಮಿತಿಯಲ್ಲಿ ತುಳುನಾಡಿನ ಆಂತರಿಕ ಮತ್ತು ವಿದೇಶೀಯ ವ್ಯಾಪಾರದ ಮಜಲುಗಳನ್ನು ಹೇಗೆ ಅಧ್ಯಯನ ಮಾಡಲಾಗುವುದೆಂಬ ವಿಚಾರಗಳನ್ನು ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ಆರು ಉಪವಿಭಾಗಗಳಿದ್ದು ಇವುಗಳು ಅಧ್ಯಯನದ ಉದ್ದೇಶ, ವ್ಯಾಪ್ತಿ, ಪ್ರಾಮುಖ್ಯ, ಸಾಹಿತ್ಯ ಸಮೀಕ್ಷೆ, ಸಂಶೋಧನೆಯ ವಿಧಿವಿಧಾನಗಳು ಮತ್ತು ಸಂಶೋಧನೆಯ ಕ್ರಮವನ್ನು ಒಳಗೊಂಡಿರುತ್ತದೆ.

**ಅಧ್ಯಾಯ 2 : ತುಳುನಾಡಿನಲ್ಲಿ ವಿಜಯನಗರಾಂತ್ಯದವರೆಗಿನ ವ್ಯಾಪಾರ ಮತ್ತು ವಾಣಿಜ್ಯ**

ಈ ಅಧ್ಯಾಯದಲ್ಲಿ ತುಳುನಾಡಿನಲ್ಲಿ ವಿಜಯನಗರಾಂತ್ಯದವರೆಗಿನ ತುಳುನಾಡಿನ ವ್ಯಾಪಾರವನ್ನು ವಿಶೇಷವಾಗಿ ಅಧ್ಯಯನ ಮಾಡಲು ಉದ್ದೇಶಿಸಿದ್ದು ಇದು ತುಳುನಾಡಿನ ಆಂತರಿಕ ವ್ಯಾಪಾರ, ತುಳುನಾಡಿನ ಆಂತರಿಕ ವ್ಯಾಪಾರ ಮಾರ್ಗಗಳು, ವಿದೇಶೀಯ ವ್ಯಾಪಾರ ಅಥವಾ ಸಾಗರೋತ್ತರ ವ್ಯಾಪಾರ ಮತ್ತು ವಿದೇಶೀಯ ವ್ಯಾಪಾರಕ್ಕೆ ಅನುವಾದ ಸಾಗರೋತ್ತರ ವ್ಯಾಪಾರದ ಕೇಂದ್ರಗಳಾದ ಬಂದರುಗಳ ಮಹತ್ವವನ್ನು ಅಧ್ಯಯನ ಮಾಡುವ ಉದ್ದೇಶ ಉಳ್ಳದ್ದಾಗಿದ್ದು ಅದನ್ನು ಅಧ್ಯಯನದ ಇತಿಮಿತಿಯಲ್ಲಿ ನಿರ್ವಹಿಸಲಾಗಿದೆ.

**ಅಧ್ಯಾಯ 3 : ತುಳುನಾಡಿನಲ್ಲಿ ವಿಜಯನಗರೋತ್ತರ ಕಾಲದ ವ್ಯಾಪಾರ ಮತ್ತು ವಾಣಿಜ್ಯ**

ಈ ಅಧ್ಯಾಯದಲ್ಲಿ ವಿಜಯನಗರ ಸಾಮ್ರಾಜ್ಯೋತ್ತರ ಕಾಲಘಟ್ಟದಲ್ಲಿ ತುಳುನಾಡು ಕೂಡ ರಾಜಕೀಯ ಶಕ್ತಿಯ ಬದಲಾವಣೆಯಿಂದ ವ್ಯಾಪಾರಕ್ಷೇತ್ರದ ಮೇಲೆ ತನ್ನದೇ ಆದ ಪ್ರಭಾವವನ್ನು ಕಳೆದುಕೊಳ್ಳಲಾರಂಭಿಸಿತು. ಪೋರ್ಚುಗೀಸರು ಅರಬ್ಬರನ್ನು ತಳ್ಳಿ, ಆಂತರಿಕ ಮತ್ತು ವಿದೇಶಿ ವ್ಯಾಪಾರದಲ್ಲಿ ಮೇಲ್ಮೈಯನ್ನು ಸಾಧಿಸಿದರೂ ಅವರ ದುಷ್ಟ ಧಾರ್ಮಿಕ ನೀತಿಯಿಂದಾಗಿ ಕೆಳದಿ ಅರಸರ ಕೆಂಗಣ್ಣಿಗೆ ಗುರಿಯಾಗಿದ್ದು ಕರ್ನಾಟಕದ ಕಡಲ ತೀರವನ್ನು ಪೋರ್ಚುಗೀಸರು ತೊರೆಯಬೇಕಾಯಿತು. ಇದರಿಂದಾಗಿ ವ್ಯಾಪಾರ ಗೋವಾ ಕರಾವಳಿಗೆ ಸ್ಥಳಾಂತರಗೊಂಡಿತು. ಇದೂ ಸಹ ತುಳುನಾಡಿನ ಆಂತರಿಕ ಮತ್ತು ವಿದೇಶಿ ವ್ಯಾಪಾರದ ಮೇಲೆ ಪ್ರಭಾವ ಬೀರಿತು. ಹೈದರಾಲಿ ಮತ್ತು ಟಿಪ್ಪು ಕಾಲದ ನಿರಂತರ ಯುದ್ಧಗಳು ಕರಾವಳಿ ಕರ್ನಾಟಕದ ವ್ಯಾಪಾರವನ್ನು ತಮ್ಮ ಜೀವಿತಾವಧಿಯ ಕೆಳಮಟ್ಟಕ್ಕೆ ಕೊಂಡೊಯ್ದವು. ಈ ಎಲ್ಲ ಅಂಶಗಳನ್ನು ಈ ಅಧ್ಯಾಯವು ಅಧ್ಯಯನ ಮಾಡುವ ಮಹತ್ವದ ಉದ್ದೇಶವನ್ನು ತನ್ನದಾಗಿಸಿಕೊಂಡಿದೆ.

**ಅಧ್ಯಾಯ 4 : ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ**

ಈ ಅಧ್ಯಾಯದಲ್ಲಿ ತುಳುನಾಡಿನಲ್ಲಿ ಕಂಡುಬಂದ ವ್ಯಾಪಾರ ಕೇಂದ್ರಗಳು, ಅವುಗಳ ಬೆಳವಣಿಗೆಯ ಬಗೆ, ಇತಿಹಾಸ ಕಾಲಘಟ್ಟಗಳಲ್ಲಿ ಈ ವ್ಯಾಪಾರ ಕೇಂದ್ರಗಳ ಏಳುಬೀಳುಗಳನ್ನು ಈ ಅಧ್ಯಾಯವು ಒಳಗೊಂಡಿರುತ್ತದೆ. ತುಳುನಾಡಿನ ಬಹುತೇಕ ವ್ಯಾಪಾರ

ಕೇಂದ್ರಗಳು ಧಾರ್ಮಿಕ ಕೇಂದ್ರಗಳಾಗಿ ಆಡಳಿತ ಕೇಂದ್ರಗಳಾಗಿ ಕಾರ್ಯನಿರ್ವಹಿಸಿ, ಸಮಾಜದ ಸಮಗ್ರ ಬೆಳವಣಿಗೆಗೂ ಪರಸ್ಪರ ಪೂರಕ, ಪ್ರೇರಕವಾಗಿ ಕಾರ್ಯ ನಿರ್ವಹಿಸಿರುವುದನ್ನು ತನ್ನ ವಸ್ತುವಿಷಯವನ್ನಾಗಿ ಅಡಕಮಾಡಿಕೊಂಡಿದೆ.

**ಅಧ್ಯಾಯ 5 : ಉಪಸಂಹಾರ ಮತ್ತು ಫಲಿತಗಳು**

ಅಧ್ಯಯನದ ವ್ಯಾಪ್ತಿಯ ಇತಿಮಿತಿಯಲ್ಲಿ ಸಂಶೋಧನೆ ಕೈಗೊಂಡು ಅದರಿಂದ ಉಂಟಾದ ಜ್ಞಾನದ ಮತ್ತು ಮಾಹಿತಿಯ ಕ್ರೋಢೀಕರಣದಿಂದ ಸಂಗ್ರಹಿತವಾದ ಮಾಹಿತಿಯನ್ನು ಅನುಸರಿಸಿ, ಕಂಡುಕೊಂಡ ಮಹತ್ವಪೂರ್ಣವಾದ ಅಂಶಗಳನ್ನು ಇದರಲ್ಲಿ ಸಂಗ್ರಹ ರೂಪವಾಗಿ ಮತ್ತು ಫಲಿತಗಳ ರೂಪದಲ್ಲಿ ದಾಖಲಿಸಲಾಗಿದೆ.

## ಅಧ್ಯಾಯ ಎರಡು

# ತುಳುನಾಡಿನಲ್ಲಿ ವಿಜಯನಗರಾಂತ್ಯದವರೆಗಿನ ವ್ಯಾಪಾರ ಮತ್ತು ವಾಣಿಜ್ಯ

### 2.1. ಪೀಠಿಕೆ

ತುಳುನಾಡಿನ ಆಂತರಿಕ ಮತ್ತು ವಿದೇಶಿ ವ್ಯಾಪಾರವನ್ನು ಅರ್ಥೈಸಲು ಹಲವಾರು ಬಗೆಯ ಆಕರಗಳು ದೊರೆಯುತ್ತವೆ. ಅವುಗಳೆಂದರೆ ಶಾಸನಗಳು, ದೇಶೀಯ ಜಾನಪದ ಸಾಹಿತ್ಯ, ಮೌಖಿಕ ಸಾಹಿತ್ಯ ಮಾಧ್ಯಮಗಳು, ಇವು ವಿವಿಧ ವ್ಯಾಪಾರದ ಬಗ್ಗೆ ಆಸಕ್ತಿದಾಯಕ ಅಂಶಗಳನ್ನು ಹೊರಹಾಕುತ್ತವೆ. ಇತ್ತೀಚಿನವರೆಗೆ ಇತಿಹಾಸಕಾರರಲ್ಲಿ ಕರ್ನಾಟಕದ ಕರಾವಳಿ ಮತ್ತು ಬಯಲುಸೀಮೆ ಸಂಪರ್ಕದಲ್ಲಿ ಇರಲಿಲ್ಲವೆಂದೂ, ಕರಾವಳಿತೀರ ಸಾಂಸ್ಕೃತಿಕ ಮತ್ತು ಸಾಮಾಜಿಕ ಪರ್ಯಾಯವನ್ನು ನಿರ್ಮಿಸಿಕೊಂಡು ದ್ವೀಪದಂತಿತ್ತೆಂದು ಭಾವಿಸಲಾಗಿತ್ತು. ಇದನ್ನು ಇತ್ತೀಚಿನ ಸಂಶೋಧನೆಗಳು ಅಲ್ಲಗಳೆದಿವೆ.[1] ಭೌಗೋಳಿಕವಾಗಿ ತುಳುನಾಡು ಕರ್ನಾಟಕದ ಕರಾವಳಿ ತೀರ ಮತ್ತು ಅದಕ್ಕೆ ಹೊಂದಿಕೊಂಡ ಪಶ್ಚಿಮ ಘಟ್ಟಗಳನ್ನು ಆವರಿಸಿದ್ದಿತು. ಆದರೆ ಇಲ್ಲಿ ಸಂವಹನ ಸುಲಭಸಾಧ್ಯವಾಗಿರಲಿಲ್ಲ. ಮಳೆಗಾಲದ ದಿನಗಳಂತೂ ಅತ್ಯಂತ ದುರ್ಭರ ದಿನಗಳಾಗಿದ್ದವು. ಅದ್ದರಿಂದ ಮಳೆಗಾಲವನ್ನು ಹೊರತುಪಡಿಸಿ ಉಳಿದ ದಿನಗಳಲ್ಲಿ ಕರ್ನಾಟಕದ ಕಡಲತೀರದ ನಗರಗಳು ಬಯಲುಸೀಮೆಯ ವ್ಯಾಪಾರ ಕೇಂದ್ರಗಳೊಂದಿಗೆ ವ್ಯಾಪಾರ ವಹಿವಾಟನ್ನು ಹೊಂದಿದ್ದವು. ಬಯಲುಸೀಮೆ ಮತ್ತು ಕರಾವಳಿಗೆ ಇರುವ ನಂಟೆಂದರೆ, ಬಯಲುಸೀಮೆಯಲ್ಲಿ ಬೆಳೆಯುತ್ತಿದ್ದ ಉತ್ಕೃಷ್ಟವಾದ ಅಕ್ಕಿಯನ್ನು ಬಂದರುಗಳ ಮುಖಾಂತರ ವಿದೇಶಗಳಿಗೆ ರಫ್ತುಮಾಡುತ್ತಿದ್ದರು. ಬಯಲು ಸೀಮೆಯಲ್ಲಿ ಉತ್ಪಾದನೆಯಾಗುತ್ತಿದ್ದ ಶ್ರೇಷ್ಠ ದರ್ಜೆಯ ಹತ್ತಿಬಟ್ಟೆಯನ್ನು ಕರ್ನಾಟಕದ ಬಂದರುಗಳಿಗೆ ಕಳುಹಿಸಿ, ಕರ್ನಾಟಕದ ಬಂದರುಗಳಿಂದ ಅದು ಅರೇಬಿಯಾ, ಪರ್ಷಿಯಾ, ಆಫ್ರಿಕಾ ಮತ್ತು ಯೂರೋಪ್ ಖಂಡಗಳಿಗೆ ಹೋಗುತ್ತಿತ್ತು. ಹತ್ತಿ ಬಟ್ಟೆ, ಉಣ್ಣೆ ಬಟ್ಟೆ, ರೇಷ್ಮೆ ಬಟ್ಟೆ ವಿದೇಶಗಳಿಗೆ ರಫ್ತಾಗುತ್ತಿತ್ತು. ಬಯಲುಸೀಮೆಯಲ್ಲಿ ರೇಷ್ಮೆಬಟ್ಟೆಯನ್ನು ನೇಯುತ್ತಿದ್ದರು. ಉದಾ; ಮೇಲುಕೋಟೆಯಲ್ಲಿ ಪಿತಾಂಬರವನ್ನು ನೇಯುತ್ತಿದ್ದರು. ಅದನ್ನು ತುಳುನಾಡಿನ ಬಂದರುಗಳಿಗೆ ಹೊತ್ತು ತರುತ್ತಿದ್ದರು. ಹೆಗ್ಗಡದೇವನಕೋಟೆ (ಮೈಸೂರು ಜಿಲ್ಲೆ) ಕೆಂಪು ಹರಳಿಗೆ ಹೆಸರುವಾಸಿ. ಕಬ್ಬಿಣ ಭಾರತದಿಂದ ಡೆಮಾಸ್ಕ್‌ಸ್‌ಗೆ ಹೋಗುತ್ತಿತ್ತು.[2] ಹಾಗೂ

ಬಯಲುಸೀಮೆಗೆ ಕುದುರೆಗಳ ಆವಶ್ಯಕತೆ ಅಧಿಕವಾಗಿತ್ತು. ಕುದುರೆಗಳನ್ನು ತುಳುನಾಡಿನ ಬಂದರುಗಳ ಮುಖಾಂತರ ವಿದೇಶಗಳಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು. ಕುದುರೆಗಳನ್ನು ಕರಾವಳಿಯ ವರ್ತಕರು ಬಯಲುಸೀಮೆಗೆ ತಲುಪಿಸುತ್ತಿದ್ದರು. ಜೊತೆಗೆ ಔಷಧಿ, ತಾಮ್ರ, ಬೆಳ್ಳಿ ಹಾಗೂ ಉಪ್ಪನ್ನು ಬಯಲುಸೀಮೆಯ ಪಟ್ಟಣಗಳಿಗೆ ತಲುಪಿಸುವ ಕೆಲಸವನ್ನು ತುಳುನಾಡಿನ ವರ್ತಕರು ಮಾಡುತ್ತಿದ್ದರು.

ತುಳುನಾಡಿನಲ್ಲಿ ಕಂಡುಬರುವ ಧಾರ್ಮಿಕ ಸಾಂಸ್ಕೃತಿಕ ಕೇಂದ್ರಗಳು ಪ್ರಾಚೀನ ಕಾಲದ ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ಅವುಗಳಲ್ಲಿ ಗೇರುಸೊಪ್ಪೆ, ಭಟ್ಕಳ, ಕಾಯ್ಕಿಣಿ, ಹಾಡುವಳ್ಳಿ, ಕುಂದಾಪುರ, ಶಂಕರನಾರಾಯಣ, ಸಾಲಿಗ್ರಾಮ, ಉಡುಪಿ, ಕಾರ್ಕಳ, ಮೂಡಬಿದರೆ, ವೇಣೂರು, ಬೆಳ್ತಂಗಡಿ, ಮಂಗಳೂರು, ಉಪ್ಪಿನಂಗಡಿ, ಸುಬ್ರಮಣ್ಯ, ನಗರಗಳು ಪ್ರಮುಖವಾದವು. ಇವುಗಳಲ್ಲಿ ಕೆಲವು ಸ್ಥಳಗಳು ಜೈನವ್ಯಾಪಾರ ಕೇಂದ್ರಗಳಾಗಿ ಬೆಳವಣಿಗೆಯಾದವು.[3] ಜೈನಧರ್ಮಿಯರು ತುಳುನಾಡಿನಲ್ಲಿ ವ್ಯಾಪಾರಿಗಳಾಗಿ 10ನೇ ಶತಮಾನದಿಂದ ಪ್ರವರ್ಧಮಾನಕ್ಕೆ ಬಂದರು ಹಾಗಾಗಿ ಎಲ್ಲಾ ಜೈನಬಸದಿ ಕೇಂದ್ರಗಳು ಅಂದಿನ ಆಂತರಿಕ ವ್ಯಾಪಾರ, ಧಾರ್ಮಿಕ ಕೇಂದ್ರಗಳನ್ನು ಅವಲಂಬಿತ್ತೆಂಬುದನ್ನು ಗಮನದಲ್ಲಿರಿಸಿಕೊಂಡು ಪ್ರಾಚೀನ ಕಾಲದಲ್ಲಿ ವ್ಯಾಪಾರಿಗಳಿಗೆ ಹಾಗೂ ವ್ಯಾಪಾರಿ ಸಂಘಟನೆಗಳಿಗೆ ಹಣವನ್ನು ಸಾಲದ ರೂಪದಲ್ಲಿ ಕೊಡುತ್ತಿದ್ದರು. ಎಲ್ಲಾ ದೇವಾಲಯಗಳು ಬ್ಯಾಂಕುಗಳ ಹಾಗೆ ಕಾರ್ಯನಿರ್ವಹಿಸುತ್ತಿದ್ದವು. ದೇವಾಲಯಗಳು ತಮ್ಮಲ್ಲಿ ಇದ್ದ ದೇಣಿಗೆಯನ್ನು (ಎಂಡೊಮೆಂಟ್) ವೃದ್ಧಿ ಮಾಡಿಕೊಳ್ಳಲು ವ್ಯಾಪಾರಿ ಸಂಘಗಳಲ್ಲಿ, ಪ್ರತಿಷ್ಠಿತ ವ್ಯಾಪಾರಿಗಳಲ್ಲಿ ಹೂಡಿಕೆ ಮಾಡುತ್ತಿದ್ದವು, ವ್ಯಾಪಾರಿ ಸಂಘಟನೆಗಳು ಈ ಬಗೆಯ ಹೂಡಿಕೆಯಿಂದ ತಮಗೆ ಬಂದ ಲಾಭವನ್ನು ದೇವಸ್ಥಾನದ ಕಾರ್ಯಗಳಿಗೆ ಬಳಸುತ್ತಿದ್ದರು. ಇವೆಲ್ಲಾ ಧಾರ್ಮಿಕ ಕೇಂದ್ರಗಳಲ್ಲಿ ನಡೆಯುತ್ತಿದ್ದವು.[4] ಶಿಷ್ಟಸಂಪ್ರದಾಯದೊಂದಿಗೆ ಹೊಂದಿಕೊಂಡಿರುವ ಜನಸಾಮಾನ್ಯರ ಭೂತಾರಾಧನೆ, ಅದರ ಸಂಬಂಧದ ಪಾಡ್ದನಗಳು ಸಹ ಆಂತರಿಕ ಮತ್ತು ವಿದೇಶಿವ್ಯಾಪಾರದ ಬಗ್ಗೆ ದಾಖಲಿಸುತ್ತವೆಯಾದರೂ ಅವುಗಳ ಕಾಲನಿರ್ಣಯ ಅತಿ ಕಠಿಣ ಕಾರ್ಯ. ಆದರೂ ಅವುಗಳಲ್ಲಿ ಲಭ್ಯವಿರುವ ಮಾಹಿತಿಯನ್ನು ಆಧರಿಸಿ ಸಮಗ್ರ ವಿಷಯ ಸಂಗ್ರಹಣೆಯೊಂದಿಗೆ ತುಳುನಾಡಿನ ಆಂತರಿಕ ಮತ್ತು ವಿದೇಶಿ ವ್ಯಾಪಾರವನ್ನು ಈ ಅಧ್ಯಯನದಲ್ಲಿ ಸಮೀಕ್ಷಿಸಲಾಗಿದೆ. ಜೊತೆಗೆ ಶಾಸನಗಳು, ನಾಣ್ಯಗಳು, ದಾಖಲೆಪತ್ರಗಳು, ಕಡತಗಳು, ಪ್ರವಾಸಿಗರ ಬರಹಗಳು, ಹಾಗೂ ಸಮಕಾಲೀನ

ಬರವಣಿಗೆಗಳನ್ನು ಪರಿಶೀಲಿಸಿ ಸಮಗ್ರವಾಗಿ ವಿಷಯ ಸಂಗ್ರಹಿಸಿ ತುಳುನಾಡಿನ ಆಂತರಿಕ ಮತ್ತು ವಿದೇಶಿ ವ್ಯಾಪಾರವನ್ನು ಹಾಗೂ ಬಂದರುಗಳ ಮಹತ್ವವನ್ನು ಈ ಅಧ್ಯಾಯದಲ್ಲಿ ಸಮೀಕ್ಷಿಸಲಾಗಿದೆ.

### 2.2 ಪ್ರಾಗೈತಿಹಾಸಿಕ ಕಾಲ

ತುಳುನಾಡು ಮತ್ತು ಹೊರದೇಶದೊಡನಿರುವ ಸಂಪರ್ಕವನ್ನು ಗುರುತಿಸುವ ಪ್ರಯತ್ನದಲ್ಲಿರುವ ಹಲವಾರು ಅಧ್ಯಯನಕಾರರು ಹಲವು ಸಂಶೋಧನೆಗಳನ್ನು ಮಾಡಿದ್ದಾರೆ. ದಕ್ಷಿಣ ಕನ್ನಡ ನಾಡಿನಾದ್ಯಂತ ಪ್ರಾಚೀನ ಶಿಲಾಯುಗದ ಉಪಕರಣಗಳು ಅಥವಾ ಆಯುಧಗಳು ಅಲ್ಲಲ್ಲಿ ದೊರೆತಿರುವ ಬಗೆಗೆ ವರದಿಗಳಿವೆಯಾದರೂ ಪೂರ್ಣ ಪ್ರಮಾಣದ ಪ್ರಾಚೀನ ಶಿಲಾಯುಗದ ನೆಲೆಗಳನ್ನು ಈವರೆಗೆ ಈ ಜಿಲ್ಲೆಯಲ್ಲಿ ಗುರುತಿಸಿಲ್ಲವೆಂದೇ ಹೇಳಬಹುದು. ಅಲ್ಲದೆ ದೊರೆತಿರುವ ಕೆಲವೊಂದು ಆಯುಧಗಳ ಸಹಾಯದಿಂದ ಪ್ರಾಚೀನ ತುಳುನಾಡು ಮತ್ತು ಹೊರದೇಶದೊಡನಿರುವ ಸಂಪರ್ಕವನ್ನು ನಿಖರವಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ. ಆದರೆ ಈ ನಿಟ್ಟಿನಲ್ಲಿ ಹರಪ್ಪ ಸಂಸ್ಕೃತಿಯ ಕಾಲಘಟ್ಟದಲ್ಲಿ ತುಳುನಾಡು ಹೊರಬಂದಿರಬಹುದಾದ ಸಮುದ್ರ ವ್ಯಾಪಾರದ ಬಗ್ಗೆ ಮಹತ್ವದ ಸಾಂದರ್ಭಿಕ ಪುಷ್ಟಿಯನ್ನು ಒದಗಿಸಬಹುದಾಗಿದೆ. ಎಸ್. ಆರ್. ರಾವ್‌ರವರು ಲೇಖನವೊಂದರಲ್ಲಿ ಹರಪ್ಪ ಸಂಸ್ಕೃತಿಯ ನೆಲೆ ಲೋಥಾಲ್‌ನಲ್ಲಿ ಕಂಡುಬಂದ ಚಿನ್ನದ ಆಭರಣಗಳು ಕರ್ನಾಟಕ ಚಿನ್ನದ ಗಣಿಗಳಿಂದ ತಯಾರಿಸಿದವುಗಳೆಂದು ನಿಖರವಾಗಿ ಹೇಳಿದ್ದಾರೆ.[5] ಹರಪ್ಪ ಸಂಸ್ಕೃತಿಯ ನೆಲೆಯಲ್ಲಿ ದೊರೆತ ಸ್ಟಿಯಟೈಟ್ ಮಣ್ಣು ಮತ್ತು ಅದರಿಂದ ಮಾಡಿದ ಮಣಿಗಳ ಮೂಲವನ್ನು ದಕ್ಷಿಣದ ಅದರಲ್ಲೂ ಕರ್ನಾಟಕದ ನೂತನ ಶಿಲಾಯುಗದ ನೆಲೆಗಳಾದ ತೆಕ್ಕಲಕೋಟ, ಉತ್ತನೂರು, ಮಸ್ಕಿ ಮುಂತಾದ ನೆಲೆಗಳಿಂದ ಪಡೆದುಕೊಂಡಿದ್ದಾರೆಂದು ಗುರುತಿಸುತ್ತಾರೆ. ಮಸ್ಕಿಯಲ್ಲಿ ದೊರೆತ ಸುಮೇರಿಯನ್ ಮುದ್ರೆ ಮತ್ತು ಇತರ ಆಕರಗಳನ್ನು ಮುಂದಿಟ್ಟುಕೊಂಡು ಮಸ್ಕಿ ಮತ್ತು ಸುಮೇರಿಯಾ ಜನರ ನಡುವೆ ಹರಪ್ಪ ಸಂಸ್ಕೃತಿಯ ಮೂಲಕ ಸಂಪರ್ಕವಿತ್ತೆಂದು ರೋಮಿಲಾ ಥಾಪರ್ ಕೂಡ ಅಭಿಪ್ರಾಯಪಡುತ್ತಾರೆ. ಹೊನ್ನಾವರದ ಬಳಿ ದೊರೆತ ನೂತನ ಶಿಲಾಯುಗದ ಕೊಡಲಿಗಳು ಇದಕ್ಕೆ ಮತ್ತಷ್ಟು ಪುಷ್ಟಿಯನ್ನು ಕೊಟ್ಟಿವೆ.[6] ಬ್ರಹ್ಮಗಿರಿಯಲ್ಲಿ ದೊರೆತ ಇಂಡಸ್ ಮಾದರಿಯ ಮಡಕೆಗಳು ಈ ಎರಡೂ ಪ್ರದೇಶಗಳ ನಡುವಿನ ಸಂಪರ್ಕಕ್ಕೆ ನಿಖರ ಆಕರವನ್ನೊದಗಿಸುತ್ತವೆ. ಹರಪ್ಪ ಸಂಸ್ಕೃತಿಯ ಜನ ಸುಮೇರ್ ಮತ್ತು

ಮೆಸೊಪೊಟೇಮಿಯಾ ನಾಗರಿಕತೆಗಳ ಜನರ ಜೊತೆ ಸಂಪರ್ಕ ನಿರ್ವಿವಾದವಾದದ್ದು. ಕರ್ನಾಟಕದ ನೂತನ ಶಿಲಾಯುಗದ ಜನರೊಂದಿಗೆ ಹರಪ್ಪ ಸಂಸ್ಕೃತಿಯ ಜನ ಸಂಪರ್ಕ ಸಾಧಿಸಿದ್ದರೆಂದು ಎಸ್. ಆರ್. ರಾವ್ ಅಭಿಪ್ರಾಯಪಡುತ್ತಾರೆ. ಅನಂತರದ ದಿನಗಳಲ್ಲಿ ಕರ್ನಾಟಕದ ಕಡಲತೀರ ಇತರ ಪ್ರದೇಶದೊಂದಿಗೆ ಹೊಂದಿದ ಸಂಪರ್ಕಗಳನ್ನು ನಿಖರವಾಗಿ ಗುರುತಿಸಲು ಸಾಧ್ಯವಾಗುವ ಆಕರಗಳು ಹೊರಬರಬೇಕಾಗಿವೆ. ಆದರೆ ದಕ್ಷಿಣ ಭಾರತದ ನೂತನ ಶಿಲಾಯುಗದ ನೆಲೆಯಾದ ಟಿ. ನರಸೀಪುರ ಮತ್ತು ಇತರ ನೆಲೆಗಳಲ್ಲಿ ದೊರೆತ ತಲೆಯಾಧಾರಗಳು ಮತ್ತು ಟುಟುನ್‌ಕಮನ್ ಗೋರಿಯಲ್ಲಿ ದೊರೆತ ತಲೆಯಾಧಾರಗಳ ಸಾಮ್ಯವನ್ನು ಆಧಾರವಾಗಿಟ್ಟುಕೊಂಡು ಎರಡು ಪ್ರದೇಶಗಳ ನಡುವೆ ಸಂಬಂಧವನ್ನು ಗುರುತಿಸುವ ಪ್ರಯತ್ನಗಳು ನಡೆದಿವೆ. ಮುಂದುವರಿದ ಕಬ್ಬಿಣ ಯುಗದ ನಾಗರಿಕತೆಯ ಕಾಲದಲ್ಲಿ ಕರ್ನಾಟಕದ ಮತ್ತು ಹೊರದೇಶದೊಂದಿಗೆ ಸಂಪರ್ಕವಿದ್ದುದನ್ನು, ಅ. ಸುಂದರ ಮತ್ತು ಬಿ. ಕೆ. ಗುರುರಾಜ ರಾವ್ ಗುರುತಿಸುತ್ತಾರಾದರೂ ಅವರು ಹೇಳುವ ಮಾರ್ಗಗಳು ಮಾತ್ರ ಭಿನ್ನವಾಗಿವೆ. ಆದರೆ ಇತ್ತೀಚಿನ ಲೇಖನವೊಂದರಲ್ಲಿ ಗುರುರಾಜ್ ರಾವ್ ಮೆಡಿಟರೇನಿಯನ್ ಸಮುದಾಯದೊಂದಿಗೆ ಕರ್ನಾಟಕದ ಬೃಹತ್ ಶಿಲಾಯುಗದ ಜನ ಸಮುದ್ರಮಾರ್ಗದ ಮೂಲಕ ಸಂಪರ್ಕ ಸಾಧಿಸಿದ್ದರೆಂದು ಅಭಿಪ್ರಾಯಪಡುತ್ತಾರೆ. ಹೀಗಾಗಿ ನೂತನ ಶಿಲಾಯುಗ ಮತ್ತು ಅದರ ಮುಂದುವರಿದ ಕಾಲವಾದ ಕಬ್ಬಿಣ ಯುಗದಲ್ಲಿ ಕರ್ನಾಟಕದ ಜನ ಈಜಿಪ್ಟ್ ಮತ್ತು ಮೆಡಿಟರೇನಿಯನ್ ಜನರೊಂದಿಗೆ ಸಂಪರ್ಕ ಸಾಧಿಸಿದ್ದುದನ್ನು ಗುರುತಿಸಲಾಗಿದೆ.[7]

### 2.3 ಪ್ರಾಚೀನ ಕಾಲ

ಪ್ರಾಚೀನ ಲಿಖಿತ ಆಧಾರಗಳು ಸಹ ಕ್ರಿಸ್ತಪೂರ್ವ ಅಂತ್ಯ ಮತ್ತು ಕ್ರಿಸ್ತಶಕದ ಪ್ರಾರಂಭದ ಕಾಲದಿಂದಲೇ ಕರ್ನಾಟಕದ ಕಡಲತೀರ ಹೊರದೇಶಗಳೊಂದಿಗೆ ಸಂಪರ್ಕ ಸಾಧಿಸಿದ್ದನ್ನು ನಿಖರವಾಗಿ ಗುರುತಿಸುತ್ತವೆ. ಕರ್ನಾಟಕದ ಕಡಲತೀರದ ಬಗೆಗೆ ಪ್ರಥಮ ಉಲ್ಲೇಖ ಗ್ರೀಕ್ ದೇಶದ ಪ್ಲಿನಿಯ 'ಪ್ರಾಗೈತಿಕ ಚರಿತ್ರೆ'ಯಲ್ಲಿ ದೊರೆಯುತ್ತದೆ. ಈತನು ತನ್ನ ಗ್ರಂಥದಲ್ಲಿ 'ಮುಜೈರಿಸ್' ಎಂಬ ಬಂದರನ್ನು ಉಲ್ಲೇಖಿಸುತ್ತಾನೆ. ಅದು ಕರ್ನಾಟಕದ ಮಂಗಳೂರೆಂದು ಹಲವರು ಅಭಿಪ್ರಾಯಪಟ್ಟಿದ್ದಾರೆ. 'ಟಾಲೆಮಿ' 2ನೇ ಶತಮಾನ ಸಹ ಉಲ್ಲೇಖಿಸಿರುವ 'ನಿತ್ರೆಸ'ನ್ನು ನೇತ್ರಾವತಿಯ ಮುಖಜ ಭೂಮಿಯಲ್ಲಿರುವ ಮಂಗಳೂರೆಂದು

ಗುರುತಿಸಲಾಗಿದೆ. ಪ್ಲಿನಿ ಸಹ ಇದನ್ನು 'ನಿತ್ರಾಸ್' ಎಂದು ಗುರುತಿಸುತ್ತಾನೆ. 'ಕಾಸ್‌ಮಾಸ್' ಈ ಬಂದರನ್ನು 'ಮ್ಯಾಂಗರೋಥ್' ಎಂದು ಗುರುತಿಸುತ್ತಾನೆ. ಟಾಲೆಮಿಯ ಪ್ರಕಾರ ಈ ಪ್ರದೇಶದಲ್ಲಿ ಕಡಲ್ಗಳ್ಳರ ಹಾವಳಿ ಅಧಿಕವಾಗಿತ್ತೆಂದು ತಿಳಿದುಬರುತ್ತದೆ. 'ಪೆರಿಪ್ಲಸ್ ಆಫ್ ಎರಿಥ್ರಿಯನ್ ಸೀ' ಗ್ರಂಥಕರ್ತೃ ಕರ್ನಾಟಕದ ಬಂದರುಗಳಾದ ಕಾರವಾರ, ಹೊನ್ನಾವರ ಗಳನ್ನು ಗುರುತಿಸುತ್ತಾನೆ. ಈ ಎಲ್ಲ ದಾಖಲೆಗಳು ಪ್ರಾರಂಭಿಕ ದಿನಗಳಲ್ಲಿ ಕರ್ನಾಟಕದ ಕಡಲತೀರ ಸಮುದ್ರಮಾರ್ಗದ ವ್ಯಾಪಾರವನ್ನು ಹೊರದೇಶಗಳೊಂದಿಗೆ ನಡೆಸುತ್ತಿದ್ದಿತಂದು ನಿಖರವಾಗಿ ತಿಳಿಸುತ್ತವೆ. 1899ರಲ್ಲಿ ಈಜಿಪ್ಟಿನ ಭೂ ಉತ್ಖನನದಲ್ಲಿ ದೊರೆತ ಗ್ರೀಕ್ ಪ್ರಹಸನವೊಂದರಲ್ಲಿ ಕೆಲವು ಕನ್ನಡ ಶಬ್ದಗಳು ಉಲ್ಲೇಖವಾಗಿರುವುದನ್ನು ಪ್ರಥಮ ಬಾರಿಗೆ ಶ್ಯಾಮಶಾಸ್ತ್ರಿಯವರು 1927ರಲ್ಲಿ ಪ್ರಕಟಿಸಿದರು. ಪ್ರಹಸನದ ವಿಷಯ ಇಂತಿದೆ. ಗ್ರೀಸಿನ ಸ್ತ್ರೀಯೋರ್ವಳು ಕರ್ನಾಟಕದ ಕಡಲ ತೀರದಲ್ಲಿನ ಅರಸನ ಬಂಧಿಯಾಗುತ್ತಾಳೆ. ಆಕೆಯ ಸಂಬಂಧಿಗಳು ಬಂಧಿಸಿದ ವ್ಯಕ್ತಿಗಳಿಗೆ ಮಾದಕ ದ್ರವ್ಯ (ವೈನ್) ಕುಡಿಸಿ ಆಕೆಯನ್ನು ಬಿಡಿಸಿಕೊಂಡು ಹೋಗುತ್ತಾರೆ. ಪ್ರಹಸನದಲ್ಲಿ ಕಂಡುಬರುವ ಮಲ್ಪಿ ನಯಕ್, ಮಲ್ಪೆ ಮುಂತಾದ ಪದಗಳು ಕನ್ನಡವೆಂದು ಗುರುತಿಸಲಾಗಿದೆ. ಹುಲ್ಷ್ ಪ್ರಥಮ ಬಾರಿಗೆ ಗ್ರೀಕ್ ಪ್ರಹಸನದಲ್ಲಿ ಗ್ರೀಕೇತರ ಪದಗಳು ಕನ್ನಡದವೆಂದು ಗುರುತಿಸಿದರು. ನಂತರ ಶ್ಯಾಮಶಾಸ್ತ್ರಿ, ಗೋವಿಂದ ಪೈ, ಎಸ್. ಶ್ರೀಕಂಠಯ್ಯ ಮುಂತಾದವರು ಗ್ರೀಕ್ ಪ್ರಹಸನದಲ್ಲಿ ಕಂಡುಬರುವ ಗ್ರೀಕೇತರ ಪದಗಳು ಕನ್ನಡವೆಂದು ಗುರುತಿಸಿದರು. ಅದು ತುಳುನಾಡಿನ ಕನ್ನಡದವೆಂದು ಪೈಗಳು ನಿಖರವಾಗಿ ತಿಳಿಸುತ್ತಾರೆ. ಪೈ ಮತ್ತು ಇತರ ವಿದ್ವಾಂಸರ ಲೇಖನಗಳಲ್ಲಿ ಒಂದು ಸಣ್ಣ ವ್ಯತ್ಯಯವನ್ನು ಕಾಣುತ್ತೇವೆ. ಅದೇನೆಂದರೆ ಕನ್ನಡ ಪದಗಳನ್ನು ಗುರುತಿಸುವ ವೈಖರಿ.[8]

ಮೋತಿಚಂದ್ರ ತಮ್ಮ ಸಾರ್ಥವಾಹ ಪುಸ್ತಕದಲ್ಲಿ ಸ್ಟ್ರಾಬೋ ಉಲ್ಲೇಖಿಸುವ ನಾವಿಕನ ಕಥೆಯನ್ನು ಕೂಡ ಉಲ್ಲೇಖಿಸಿದ್ದಾರೆ. ಅದರ ಪ್ರಕಾರ ನೈಲ್ ಮುಖಭೂಮಿಯ ಬಂದರೊಂದರಲ್ಲಿ ಎರಡನೆಯ ಟಾಲೆಮಿಯ ಸೈನಿಕರು ಪೂರ್ಣ ಪ್ರಜ್ಞಾಹೀನರಾಗಿದ್ದ ನಾವಿಕನನ್ನು ಕಂಡುಹಿಡಿದು ಅವನಿಗೆ ಶುಶ್ರೂಷೆ ಮಾಡಿ ಎಚ್ಚರಗೊಳಿಸಿ ವಿಚಾರಿಸುತ್ತಾರೆ. ಆತ ತಮ್ಮ ಭಾಷೆಯನ್ನು ಆಡದಿದ್ದುದನ್ನು ಅರಿತು ಅವನಿಗೆ ಗ್ರೀಕ್ ಭಾಷೆಯನ್ನು ಕಲಿಸಿ ಆತನಿಂದ ಆತನ ದೇಶ ಮತ್ತು ಇತರ ವಿಷಯಗಳನ್ನು ತಿಳಿದುಕೊಂಡನೆಂತಲೂ, ಆತನ ಸಹಾಯದಿಂದ ಎರಡನೆಯ ಟಾಲೆಮಿಯ ಭಾರತೀಯ ಕಡಲತೀರಕ್ಕೆ ಗ್ರೀಕ್ ನಾವಿಕರನ್ನು ವ್ಯಾಪಾರಕ್ಕಾಗಿ ಕಳುಹಿಸಿದನೆಂದೂ ತಿಳಿದುಬರುತ್ತದೆ. ಹೀಗಾಗಿ ಗ್ರೀಕ್ ಪ್ರಹಸನ ಮತ್ತು ಟಾಲೆಮಿಯ

ಕಥನಗಳು ಒಂದೇ ಆಗಿರಬಹುದೇ? ಎಂಬ ಸಂಶಯ ಮೂಡುತ್ತದೆ. ಅಲ್ಲದೆ ಕರ್ನಾಟಕದಾದ್ಯಂತ ದೊರೆತಿರುವ ರೋಮನ್ ನಾಣ್ಯಗಳು ಇದಕ್ಕೆ ಪುಷ್ಟಿ ಕೊಡುತ್ತವೆ. ಈ ಎಲ್ಲ ವಿಷಯಗಳ ಬಗ್ಗೆ ಏನೇ ಹೇಳಿದರೂ ಪ್ರವಾಸ ಕಥನಗಳಲ್ಲಿ ಕರ್ನಾಟಕದ ಬಂದರುಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರಕುವುದು ಆ ಮೇಲಿನ ದಿನಗಳಲ್ಲಿ. ಗೋವಿಂದ ಪೈಯವರು ಗ್ರೀಕ್ ಪ್ರಹಸನ ಕರ್ನಾಟಕದಲ್ಲಿ ನಡೆಯಿತೆಂದು ಗುರುತಿಸುತ್ತಾರಾದರೂ ಸ್ಥಳವನ್ನು ನಿಖರವಾಗಿ ಗುರುತಿಸುವುದಿಲ್ಲ.[9] ಹಾಗಾಗಿ ಶ್ಯಾಮಶಾಸ್ತ್ರಿಯವರ ಆಯ್ಕೆಯನ್ನೇ ಎಸ್. ಆರ್. ರಾವ್‌ರವರ ಆಕರಗಳ ಹಿನ್ನೆಲೆಯಲ್ಲಿ ಒಪ್ಪಿಕೊಳ್ಳಬೇಕಾಗುತ್ತದೆ.

ಆಮೇಲೆ ಕರ್ನಾಟಕದ ಬಂದರುಗಳು ವಿಶೇಷವಾಗಿ ಪ್ರವಾಸಿ ಕಥನಗಳಲ್ಲಿ ಕಂಡುಬರುವುದು 6ನೇ ಶತಮಾನದ ಬಳಿಕ. ಕಾಸ್‌ಮಾಸ್ ಗುರುತಿಸುವ ಕಲಿಯಾಣವನ್ನು ಉಡುಪಿಯ ಸಮೀಪದ ಕಲ್ಯಾಣಪುರವೇ ಎಂದು ಕೆಲ ವಿದ್ವಾಂಸರು ಸಂದೇಹಪಡುತ್ತಾರೆ. ಕಾಸ್‌ಮಾಸ್ ಹೇಳುವ ಕಲಿಯಾಣವನ್ನು ಕಲ್ಯಾಣಪುರವೆಂದು ಒಪ್ಪಿಕೊಂಡಲ್ಲಿ ಈ ಹಿಂದಿನ ಗ್ರೀಕ್ ಪ್ರಹಸನಕ್ಕೆ ಮತ್ತು ಕರ್ನಾಟಕದ ಹೊರದೇಶದ ಸಂಪರ್ಕಕ್ಕೆ ಹೆಚ್ಚಿನ ಅರ್ಥ ಕಲ್ಪಿಸಬಹುದು. ಕಾಸ್‌ಮಾಸ್ ಉಲ್ಲೇಖದ ಮಲಬಾರ್ ತೀರದ ಮಂಗತಾಯ್ ಮಂಗಳೂರೆಂದು ಅಭಿಪ್ರಾಯಪಟ್ಟಿದ್ದಾರೆ. ಏಳನೆಯ ಶತಮಾನದ ಚೀನಾದ ಯಾತ್ರಿಕ ಕನ್ನಡದ ಕಡಲ ತೀರವನ್ನು, ಈ ಪ್ರದೇಶದಲ್ಲಿ ಭಿಕ್ಷೆ ಬೇಡಿದ್ದನ್ನು, ಅನಂತರ ಕೊಂಕಣ ಪುರವನ್ನು ಸಂದರ್ಶಿಸಿದ್ದನ್ನು ಉಲ್ಲೇಖಿಸುತ್ತಾನೆ. ಇದು ಕೊಂಕಣಪುರದ ಕೊಂಕಣಿ ಮಾತನಾಡುವ ಉತ್ತರ ಕರ್ನಾಟಕದ ಪ್ರದೇಶವೇ ಅಥವಾ ಬನವಾಸಿ ಸುತ್ತಮುತ್ತಲಿನ ಪ್ರದೇಶವೇ ಎಂಬುದು ನಿಖರವಾಗಿ ತಿಳಿಯುವುದಿಲ್ಲ. ಆದರೆ ಕೆಲವು ವಿದ್ವಾಂಸರು ಈ ಪ್ರದೇಶವನ್ನು ಬನವಾಸಿಯೆಂದು ಗುರುತಿಸುವ ಪ್ರಯತ್ನ ಮಾಡುತ್ತಾರೆ. ಬಾದಾಮಿ ಚಾಲುಕ್ಯರ ಪೂರ್ವದ ಕಾಲದಲ್ಲಿನ ಕರ್ನಾಟಕದ ಕಡಲತೀರದ ಸಂಪರ್ಕಗಳ ಬಗೆಗೆ ಹೆಚ್ಚಾಗಿ ಏನೂ ಹೇಳಲು ಸಾಧ್ಯವಿಲ್ಲ. ಆದರೆ ಕಾರವಾರ, ಹೊನ್ನಾವರ, ಮಲ್ಪೆ ಮತ್ತು ಮಂಗಳೂರು ಬಂದರುಗಳು ಸಾಕಷ್ಟು ಪ್ರಮಾಣದಲ್ಲಿ ಹೊರದೇಶದ ಸಂಪರ್ಕವನ್ನು ಸಾಧಿಸಿದ್ದಂತೆ ತಿಳಿದುಬರುತ್ತದೆ. ಕಾಸ್‌ಮಾಸ್ ಹೇಳುವಂತೆ ಮಂಗಳೂರು ಬಾದಾಮಿ ಚಾಲುಕ್ಯರ ಕಾಲದಲ್ಲಿ ಪ್ರಮುಖ ಬಂದರಾಗಿತ್ತು. ಇದೇ ಕಾಲದಲ್ಲಿ ಭಟ್ಕಳ ಸಹ ಒಂದು ಪ್ರಮುಖ ಬಂದರಾಗಿತ್ತು ಎಂದು ಕೆ. ಎ. ನೀಲಕಂಠ ಶಾಸ್ತ್ರಿ ಗುರುತಿಸುತ್ತಾರೆ. ಕಾಸ್‌ಮಾಸ್‌ನ ಪರ್ತಿಯನ್ನು ನೀಲಕಂಠ ಶಾಸ್ತ್ರಿ ಮತ್ತು ಡೀಕೋಸ್ಟ್ ಭಟ್ಕಳವೆಂದು ಗುರುತಿಸುತ್ತಾರೆ. ಆದರೆ ಎಚ್. ಎಲ್. ನಾಗೇ

ಗೌಡರು ಗುರುತಿಸುವಂತೆ ಕಾಸ್‌ಮಾಸ್‌ನ ಕಲಿಯಾಣವನ್ನು ಇವರಾರೂ ದಕ್ಷಿಣ ಕನ್ನಡದಲ್ಲಿ ಗುರುತಿಸುವುದಿಲ್ಲ. ರಾಷ್ಟ್ರಕೂಟರ ಕಾಲದಲ್ಲಿ ಸಿಂಧನೂರು ಅಂದರೆ ಇಂದಿನ ಸದಾಶಿವಘಡ, ಸೈಮೂರು (ಇಂದಿನ ಭಟ್ಕಳ) ಮುಂತಾದ ಬಂದರುಗಳು ಕಾರ್ಯನಿರ್ವಹಿಸುತ್ತಿದ್ದವೆಂದು ಗುರುತಿಸಲಾಗಿದೆ. ಈ ಕಾಲದಲ್ಲಿ ದಕ್ಷಿಣ ಕನ್ನಡದ ವ್ಯಾಪಾರದ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಾಗುವುದಿಲ್ಲ. ಆದರೆ ಸಾಂದರ್ಭಿಕ ದಾಖಲೆಗಳ ಸಹಾಯದಿಂದ ಕರ್ನಾಟಕ ಮತ್ತು ಗೋವೆಯ ಬಂದರುಗಳಿಂದ ಸಾಕಷ್ಟು ವ್ಯಾಪಾರ ವಹಿವಾಟು ನಡೆಯುತ್ತಿತ್ತೆಂದು ತಿಳಿಯಬಹುದು. ಕಲ್ಯಾಣಿ ಚಾಲುಕ್ಯರು ಮತ್ತು ಹೊಯ್ಸಳರ ಕಾಲದಲ್ಲಿ ಕರ್ನಾಟಕ ಸಾಕಷ್ಟು ಪ್ರಮಾಣದಲ್ಲಿ ಹೊರದೇಶದ ವ್ಯಾಪಾರವನ್ನು ಹೊಂದಿತ್ತೆಂದು ತಿಳಿಸುತ್ತದೆ. ಕಾ–ಕೂ–ಜ ಮಂಗಳೂರನ್ನು ಗುರುತಿಸುತ್ತಾರೆ. ಮಾರ್ಕೋಪೋಲೋ ಮತ್ತು ಇಬನ್ ಬತೂತ ಆನಂತರದಲ್ಲಿ ದಕ್ಷಿಣ ಕನ್ನಡವನ್ನು ಗುರುತಿಸುತ್ತಾರೆ. ಇಬನ್ ಬತೂತ ಹೊನ್ನಾವರ, ಬಸ್ರೂರು, ಬಾರ್ಕೂರು ಮತ್ತು ಮಂಗಳೂರನ್ನು ಗುರುತಿಸುತ್ತಾರೆ. ಈ ಎಲ್ಲ ಆಕರಗಳ ಸಹಾಯದಿಂದ ದಕ್ಷಿಣ ಕನ್ನಡ ಪ್ರಾಚೀನ ಕಾಲದಿಂದಲೂ ವ್ಯಾಪಾರ ಕ್ಷೇತ್ರದಲ್ಲಿ ಮುಂದಿತ್ತೆಂದು ಹೇಳಬಹುದು. ಈ ಲೇಖನದಲ್ಲಿ ತಿಳಿಸಿದಂತೆ ತುಳುನಾಡಿನ ಕೇಂದ್ರವನ್ನು ಗೇರುಸೊಪ್ಪೆಯ ಸುತ್ತಮುತ್ತಲಿನ ಪ್ರದೇಶವೆಂದು ಒಪ್ಪಿಕೊಂಡಲ್ಲಿ ಹೊನ್ನಾವರವನ್ನೂ ಸಹ ಈ ಅಧ್ಯಯನದ ಎಲ್ಲೆಯೊಳಗೆ ತರಬೇಕಾಗುತ್ತದೆ. ಹಾಗಾಗಿ ಒಂದು ವಿಸ್ತಾರವಾದ ನೋಟವನ್ನು ನಿರ್ದೇಶಿಸುವ ಸಲುವಾಗಿ ಕೆಲವು ಬಂದರುಗಳ ಬಗೆಗಿನ ವಿವರಗಳನ್ನು ಸಹ ಇಲ್ಲಿ ನೀಡಲು ಪ್ರಯತ್ನಿಸಲಾಗಿದೆ.

## 2.4 ಬಾದಾಮಿ ಚಾಲುಕ್ಯರ ಕಾಲದಿಂದ ವಿಜಯನಗರ ಕಾಲದವರೆಗೆ

ಬಾದಾಮಿ ಚಾಲುಕ್ಯರ ಕಾಲದಲ್ಲಿ ಕರ್ನಾಟಕದ ಕಡಲ ತೀರ ಸಾಕಷ್ಟು ಪ್ರಭಾವಶಾಲಿಯಾಗಿತ್ತು. ಐಹೊಳೆ ಐನ್ನೂರರ ವರ್ತಕ ಸಮುದಾಯವನ್ನು ಹೆಸರಿಸುವ ಶಾಸನಗಳು, ಅವರು ಸಾಗರ ತೀರಗಳನ್ನು ದಾಟಿ ವ್ಯಾಪಾರ ಮತ್ತು ವಹಿವಾಟನ್ನು ನಡೆಸುತ್ತಿದ್ದರೆಂದು ಉಲ್ಲೇಖಿಸುತ್ತದೆ. ಇದೇ ಕಾಲದಲ್ಲಿ ಅವರು ಸಶಕ್ತ ನೌಕಾದಳವನ್ನು ಹೊಂದಿದ್ದರು. ಈ ಕಾಲದಲ್ಲಿದ್ದ ಸಾಮಂತ ಅರಸು ಮನೆತನಗಳಾದ ಕದಂಬರು ಮತ್ತಿತರರು ಸಮುದ್ರದ ಆಚೆಗಿನ ವ್ಯಾಪಾರಕ್ಕೆ ಹೆಚ್ಚು ಮಹತ್ವ ಕೊಡದಿದ್ದುದರಿಂದ ಅತೀ ಹೆಚ್ಚಿನ ಮಟ್ಟದ ಅಂತಾರಾಷ್ಟ್ರೀಯ ವ್ಯಾಪಾರ ದಕ್ಷಿಣ ಕನ್ನಡದ ರೇವುಗಳಿಂದ ನಡೆದಿರುವುದು ವಿರಳ. ಆದರೆ

ಅಲ್ಲಲ್ಲಿ ವಿದೇಶೀ ಯಾತ್ರಿಕರ ಉಲ್ಲೇಖಗಳು ಕಂಡುಬರುವ ಹಿನ್ನೆಲೆಯಲ್ಲಿ ಮಂಗಳೂರು, ಹೊನ್ನಾವರ, ಬಾರಕನೂರು, ಗೋವಾ, ರೇವತೀದ್ವಿಪ ಮುಂತಾದ ಬಂದರುಗಳು ಸಾಕಷ್ಟು ವಿದೇಶೀ ವ್ಯಾಪಾರವನ್ನು ನಡೆಸುತ್ತಿದ್ದಂತೆ ತಿಳಿದುಬರುತ್ತದೆ. ಎ. ಎಸ್. ಅತ್ತಿಕರ್‌ರವರು ಚಾಲುಕ್ಯ ಚಕ್ರವರ್ತಿ ಇಮ್ಮಡಿ ಪುಲಕೇಶಿಯ ಪರ್ಶಿಯಾದೊಂದಿಗೆ ಹೊಂದಿದ್ದ ರಾಯಭಾರ ಸಂಬಂಧವನ್ನು ಉಲ್ಲೇಖಿಸುತ್ತಾರೆ. ಆತನು ಸಮುದ್ರ ಮಾರ್ಗವಾಗಿಯೇ ತನ್ನ ನಿಯೋಗವನ್ನು ಕಳುಹಿಸಿದ್ದಾನೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಕ್ವಾಸ್‌ಮಾಸ್‌ನು ತನ್ನ ಗ್ರಂಥ ಕ್ರಿಶ್ಚಿಯನ್ ಟೋಪೋಗ್ರಫಿಯಲ್ಲಿ ಮಂಗಳೂರನ್ನು ಮ್ಯಾಂಗರೋಲಿಸ್ ಎಂದು ಉಲ್ಲೇಖಿಸುತ್ತಾನೆ.[10] ಇದೇ ಕಾಲದಲ್ಲಿ ಭಟ್ಕಳ ಸಹ ಒಂದು ಪ್ರಮುಖ ವ್ಯಾಪಾರ ಕೇಂದ್ರವಾಗಿದ್ದಂತೆ ತಿಳಿದುಬರುತ್ತದೆ. ಕ್ವಾಸ್‌ಮಾಸ್ ಹೇಳುವಂತೆ ಪರ್ಶಿಯಾ, ಗ್ರೀಕ್, ರೋಂ ಮತ್ತು ಆಫ್ರಿಕಾ ದೇಶಗಳೊಂದಿಗೆ ಭಾರತದ ಪಶ್ಚಿಮ ಕಡಲತೀರ ಸಂಪರ್ಕವನ್ನು ಹೊಂದಿತ್ತು ಎಂದು ಹೇಳಬಹುದಾಗಿದೆ. ಅದರಲ್ಲದೇ ಆಗ್ನೇಯ ಏಷ್ಯಾ ರಾಷ್ಟ್ರಗಳಾದ ಕಾಂಬೋಡಿಯಾ, ಸಯಾಮ್, ಬರ್ಮಾ ಮತ್ತು ಚೀನಾಗಳೊಂದಿಗೂ ಈ ಬಂದರುಗಳು ವ್ಯಾಪಾರ ವಹಿವಾಟುಗಳನ್ನು ನಡೆಸಿವೆ.

ರಾಷ್ಟ್ರಕೂಟರ ಕಾಲದಲ್ಲಿ ಸಹ ಕರ್ನಾಟಕದ ಕಡಲ ತೀರ ಸಾಕಷ್ಟು ವ್ಯಾಪಾರ ವಹಿವಾಟುಗಳನ್ನು ನಡೆಸಿರುವ ಬಗ್ಗೆ ಉಲ್ಲೇಖಗಳು ಬರುತ್ತವೆ. ಈ ಎಲ್ಲ ಉಲ್ಲೇಖಗಳನ್ನು ಅರಬ್ ಯಾತ್ರಿಕರಿಂದ ತಿಳಿಯಬೇಕಾಗಿದೆ. ಈ ಕಾಲದಲ್ಲಿ ಸಹ ಭಟ್ಕಳ, ಹೊನ್ನಾವರ, ಮಂಗಳೂರು, ಬಾರಕೂರು, ಬಸ್ರೂರು ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು ಎಂದು ತಿಳಿಯಬಹುದಾಗಿದೆ. ಬಸ್ರೂರು ಕ್ರಿ.ಶ. 10ನೇ ಶತಮಾನದಲ್ಲಿಯೇ ಹೊಸಪಟ್ಟಣವೆಂದು ಹೆಸರು ಪಡೆದು ವಿದೇಶಿ ವ್ಯಾಪಾರದಲ್ಲಿ ತೊಡಗಿತ್ತು ಎಂದು ತಿಳಿದುಬರುತ್ತದೆ. ಆದರೆ ಐಗಳ ಪ್ರಕಾರ ಮಂಗಳೂರು ಬಂದರು ಹೊಯ್ಸಳರ ಎಲ್ಲೆಯನ್ನು ಗುರುತಿಸುವ ಕಾಲದಲ್ಲಿ ಬಾರಕನ್ಯಾಪುರ ಅಥವಾ ಆಳುಪ ರಾಜ್ಯ ಸಾಮ್ರಾಜ್ಯದ ಎಲ್ಲೆಯಾಗಿತ್ತೆಂದು ತಿಳಿದುಬರುತ್ತದೆ. ಚಿಕ್ಕಾಯಿ ತಾಯಿಯನ್ನು ಹೊಯ್ಸಳ ಅರಸ ಮೂರನೇ ಬಲ್ಲಾಳ ವಿವಾಹದ ಅನಂತರ ತುಳುನಾಡು ಅವರ ಅಧೀನದಲ್ಲಿತ್ತೆಂದು ತಿಳಿದುಬರುತ್ತದೆ. ಹಾಗಾಗಿ ರಾಷ್ಟ್ರಕೂಟರ ಅನಂತರ ಹೊಯ್ಸಳರ ಪ್ರಾರಂಭ ಕಾಲಗಳ ಬಗೆಗೆ ಮಾಹಿತಿ ಸಂಗ್ರಹಿಸುವುದು ಆವಶ್ಯಕವೆನಿಸುತ್ತದೆ. ಐಗಳ ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ ಗ್ರಂಥದಲ್ಲಿ ವೀರನರಸಿಂಹ ಬಲ್ಲಾಳನು ದಕ್ಷಿಣ ಕನ್ನಡ ಜಿಲ್ಲೆಯ ಪ್ರದೇಶವನ್ನು ಸಂದರ್ಶಿಸಿ ಬಂಗ ರಾಜನನ್ನು ಹರಸಿದ್ದನ್ನು ಉಲ್ಲೇಖಿಸುತ್ತಾರೆ. ಅಲ್ಲದೆ ಎಸ್. ಗುರುರಾಜಾಚಾರ್ಯರು ತಮ್ಮ ಗ್ರಂಥದಲ್ಲಿ ದೋಣಿ

ಮಾಲೀಕರ ಸಂಘವನ್ನು ಹೆಸರಿಸಿ ದೋಣಿ, ತೆಪ್ಪ ಸುಂಕಗಳನ್ನು ಶಾಸನಗಳು ಉಲ್ಲೇಖಿಸುವುದಾಗಿ ಹೇಳುತ್ತಾರೆ.

ಎಸ್. ನಾಗರಾಜು ಕರ್ನಾಟಕದ ನಾವಿಕರು ಸಿಲೋನ್ ಮತ್ತು ಇತರ ರಾಷ್ಟ್ರಗಳೊಂದಿಗೆ ಸಂಪರ್ಕ ಹೊಂದಿದ್ದುದನ್ನು ಉಲ್ಲೇಖಿಸುತ್ತಾರೆ. ವಿಜ್ಞಾನೇಶ್ವರ ತನ್ನ ಮಿತಾಕ್ಷರದಲ್ಲಿ ಹೊರದೇಶದೊಡಗಿನ ವ್ಯಾಪಾರ ಸಂಪರ್ಕವನ್ನು ಮತ್ತು ಸಮುದ್ರದ ಮೇಲೆ ನಡೆಯುವ ವ್ಯಾಪಾರದ ಸುಂಕವನ್ನು ವಸೂಲು ಮಾಡುವ ಅಧಿಕಾರಿಯನ್ನು ಹೆಸರಿಸುತ್ತಾನೆ. ಈತ ಹಡಗುಗಳು ಬಂದು ನಿಲ್ಲುವ ಸ್ಥಳದಲ್ಲಿ ಸುಂಕವನ್ನು ಪಡೆಯುತ್ತಿದ್ದಂತೆ ತಿಳಿಸುತ್ತಾನೆ. ಕರ್ನಾಟಕದ ಶಾಸನಗಳಲ್ಲಿ ಹಲವಾರು ಹೊರದೇಶಗಳ ಹೆಸರು ನಮೂದಿತವಾಗಿರುವುದಲ್ಲದೆ ಅವುಗಳೊಂದಿಗೆ ಕರ್ನಾಟಕದ ವರ್ತಕರು ವ್ಯಾಪಾರ ಸಂಪರ್ಕವನ್ನು ಹೊಂದಿರುವುದನ್ನು ನಿಖರವಾಗಿ ತಿಳಿಸುತ್ತದೆ. ಕರ್ನಾಟಕದೊಂದಿಗೆ ಸಂಪರ್ಕ ಹೊಂದಿದ್ದ ರಾಷ್ಟ್ರಗಳೆಂದರೆ ಪಾರಸ (ಪರ್ಶಿಯ) (ಎ.ಕ. 7 ಎಸ್.ಕೆ. 118), ತುರುಷ್ಕ (ಟರ್ಕಿ) (ಎ.ಕ.7 ಎಸ್.ಕೆ. 197), ಕಮೇರ (ಕಾಂಬೋಡಿಯಾ) (ಎ.ಇ. 33, 311–314), ಮಲಯ. ಕವಡಿ ದ್ವೀಪ (ಶ್ರೀಲಂಕಾ) (ಎ.ಇ. 13, 298). ಚಾಲುಕ್ಯ ಚಕ್ರವರ್ತಿಯ ಸತ್ಯಾಶ್ರಯ ಶಾಸನವೊಂದು ಪಶ್ಚಿಮ ತೀರದ ಸಮುದ್ರ ಭಾಗವಾದ ಚಮೂಲ್ಯ ಮತ್ತು ಚಂದ್ರಪುರ ಹೊರತುಪಡಿಸಿ ಮಿಕ್ಕೆಲ್ಲಾ ದ್ವೀಪಾಂತರ ಬಹರನದಿಂದ ಬರುವ ಪ್ರತಿಯೊಂದು ಹಡಗು ಒಂದೊಂದು ಚಿನ್ನದ ಗದ್ಯಾಣವನ್ನು ಅವ್ವೆಶ್ವರ ದೇವಾಲಯಕ್ಕೆ ದಾನವಾಗಿ ಕೊಡಬೇಕೆಂದು ಉಲ್ಲೇಖಿಸುತ್ತದೆ. ಶಾಸನದ ಬಹರನವನ್ನು ಬಹರೈನ್ ದ್ವೀಪ ಸಮೂಹವೆಂದು ಗುರುತಿಸಬಹುದು. ದ್ವಾರಸಮುದ್ರದ ಶಾಸನವೊಂದು ಅಕ್ಕಸಾಲಿಗ ವ್ಯಾಪಾರಿಯೊಬ್ಬ ಹೊರದೇಶದೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿರುವುದನ್ನು ಉಲ್ಲೇಖಿಸುತ್ತದೆ. ತೇರದಾಳದ ವರ್ತಕರು ಸಮುದ್ರದ ಮಾರ್ಗದಲ್ಲಿ ವ್ಯಾಪಾರ ನಡೆಸುತ್ತಿದ್ದರೆಂದು ಶಾಸನ ಉಲ್ಲೇಖಿಸುತ್ತದೆ. ಕ್ರಿ. ಶ. 1188ರ ಶಾಸನವೊಂದು ಕಮ್ಮಟ ಚಟ್ಟಿ ಎಂಬ ವರ್ತಕನು ಆನೆ, ಮುತ್ತು ಮುಂತಾದ ವಸ್ತುಗಳನ್ನು ಸಮುದ್ರದ ಮಾರ್ಗವಾಗಿ ಆಮದು ಮಾಡಿಕೊಂಡಿದ್ದನ್ನು ಉಲ್ಲೇಖಿಸುತ್ತದೆ. ಇಷ್ಟೆಲ್ಲಾ ಉಲ್ಲೇಖಗಳು ಒಳನಾಡಿನಲ್ಲಿ ದೊರೆತರೂ ಕಡಲ ಕಿನಾರೆಯಲ್ಲಿ ದೊರೆತ ಶಾಸನಗಳು ಈ ಬಗ್ಗೆ ಮೌನವಾಗಿವೆ. ಆದರೆ ಬಸ್ರೂರು, ಬಾರಕೂರು ಮತ್ತು ಮಂಗಳೂರು ಬಂದರುಗಳು ಈ ವಹಿವಾಟಿನಲ್ಲಿ ಪ್ರಮುಖ ಪಾತ್ರ ವಹಿಸಿದ್ದುದನ್ನು ಅಲ್ಲಗಳೆಯಲಾಗುವುದಿಲ್ಲ. ಹಾಗಾಗಿ ಈ ಬಂದರುಗಳು ಪ್ರಾರಂಭ ಕಾಲದಿಂದಲೂ ಹೊರದೇಶಗಳೊಂದಿಗೆ ವ್ಯಾಪಾರ ಸಂಪರ್ಕವನ್ನು

ಹೊಂದಿದ್ದವೆಂದು ನಿಸ್ಸಂಶಯವಾಗಿ ಹೇಳಬಹುದು. ಇಬನ್ ಬತೂತ, ಚ-ಜಾ-ಕೌ ಈ ಬಂದರುಗಳನ್ನು ಉಲ್ಲೇಖಿಸುತ್ತಾರೆ. ಹೀಗಾಗಿ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರ ಅನಂತರದ ಹೊಯ್ಸಳರ ಕಾಲದಲ್ಲಿಯೂ ದಕ್ಷಿಣ ಕನ್ನಡ ಅಥವಾ ತುಳುನಾಡು ವಿದೇಶೀ ವ್ಯಾಪಾರವನ್ನು ನಡೆಸುತ್ತಿದ್ದ ಸಾಂದರ್ಭಿಕ ಪುರಾವೆಗಳು ಸಾಕಷ್ಟು ದೊರೆಯುತ್ತವೆ.[11]

ವಿಜಯನಗರ ಕಾಲಕ್ಕೆ ಮಂಗಳೂರು ಬಂದರು ಒಂದು ಪ್ರಮುಖ ವ್ಯಾಪಾರ ಕೇಂದ್ರವಾಯಿತಲ್ಲದೆ ಇದರ ಜೊತೆಯಲ್ಲಿ ಬಾರಕೂರು, ಬಸ್ರೂರು, ಕೂಡ ಪ್ರಮುಖ ಕೇಂದ್ರಗಳಾಗಿ ಬೆಳೆದವು. ವಿಜಯನಗರ ಸಾಮ್ರಾಜ್ಯದಲ್ಲಿ ಮಂಗಳೂರು ಮತ್ತು ಬಸ್ರೂರು ಪ್ರಾಂತೀಯ ರಾಜಧಾನಿಗಳಾಗಿ ಕಾರ್ಯನಿರ್ವಹಿಸಿರುವ ಉಲ್ಲೇಖಗಳಿವೆ. ಹೀಗಾಗಿ ವಿಜಯನಗರ ಅರಸರ ಕಾಲದಲ್ಲಿ ಈ ಬಂದರುಗಳು ಪ್ರಾಮುಖ್ಯವನ್ನು ಪಡೆದವು. ಕರ್ನಾಟಕದ ಕರಾವಳಿಯಲ್ಲಿ ದೊರೆತಿರುವ ವಿಜಯನಗರದ ಶಾಸನಗಳು ಈ ಪ್ರದೇಶದಲ್ಲಿ ಸಾಕಷ್ಟು ವಿದೇಶೀ ವ್ಯಾಪಾರ ನಡೆಯುತ್ತಿದ್ದುದರ ಬಗ್ಗೆ ವಿಶದವಾಗಿ ಉಲ್ಲೇಖಿಸುತ್ತವೆ. ಕೃಷ್ಣದೇವರಾಯನಿಂದ ರಚಿತವಾದ ಅಮುಕ್ತ ಮೌಲ್ಯದಲ್ಲಿ ಸಾಗರೋತ್ತರ ಸಂಪರ್ಕದ ರೀತಿ ನೀತಿಗಳು ಮತ್ತು ಆ ವ್ಯಾಪಾರದಲ್ಲಿ ಆಮದಾಗುತ್ತಿದ್ದ ಸರಕುಗಳ ಬಗ್ಗೆ ಮತ್ತು ನಾವಿಕರನ್ನು ನೋಡಿಕೊಳ್ಳುವ ಬಗ್ಗೆ ಹೆಚ್ಚಿನ ಉಲ್ಲೇಖ ದೊರಕುತ್ತದೆ. ಕರ್ನಾಟಕದ ಬಂದರುಗಳಿಗಿಂತ ಹೆಚ್ಚಾಗಿ ಕಲ್ಲಿಕೋಟೆ ರಾಜ್ಯ ವಿಜಯನಗರ ಮತ್ತು ವಿದೇಶೀ ವ್ಯಾಪಾರಗಾರರ ನಡುವೆ ಮಧ್ಯವರ್ತಿಯಾಗಿ ಕಾರ್ಯನಿರ್ವಹಿಸುವುದರ ಬಗ್ಗೆ ತಿಳಿದುಬರುತ್ತದೆ. 1390ರ ಕುಂಚಮಠದ ಶಾಸನ, ಮಲಯ, ಕಾಂಬೋಜ, ಸಿಂಹಳ ದೇಶಗಳೊಂದಿಗೆ ಬಾರಕೂರು ಸಂಪರ್ಕ ಹೊಂದಿದ್ದನ್ನು ಉಲ್ಲೇಖಿಸುತ್ತದೆ.[12] ಇದಲ್ಲದೆ ಚೀನೀ ದಾಖಲೆಗಳು ಪಶ್ಚಿಮದ ಕರಾವಳಿಯನ್ನು ಉಲ್ಲೇಖಿಸಿ ಇಲ್ಲಿನ ಬಂದರುಗಳೊಂದಿಗೆ ಸಂಪರ್ಕ ಹೊಂದಿದ್ದನ್ನು ಖಚಿತಪಡಿಸುತ್ತವೆ. ಮಂಗಳೂರು, ಬಾರಕೂರು, ಬಸ್ರೂರು, ತುಳುನಾಡಿನ ಪ್ರಮುಖ ಬಂದರುಗಳಾಗಿದ್ದವು. ಕರ್ನಾಟಕದ ರೇವು ಪಟ್ಟಣದ ವರ್ತಕರು ಗೋವಾದ ವರ್ತಕರೊಂದಿಗೆ ಸಂಪರ್ಕ ಹೊಂದಿದ್ದನ್ನು ಕೆಲವು ಆಕರಗಳು ಖಚಿತಪಡಿಸುತ್ತವೆ. 15ನೇ ಶತಮಾನದಲ್ಲಿ ಬೈಂದೂರು, ಬಸ್ರೂರು, ಬಾರಕೂರು, ಮಂಗಳೂರು ತುಳುನಾಡಿನ ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ಶುಂಠಿ, ತೆಂಗಿನಕಾಯಿ, ಕರಿಮೆಣಸು, ಅಕ್ಕಿ ಮುಂತಾದವುಗಳನ್ನು ಈ ರೇವುಗಳು ಹಲವಾರು ದೇಶಗಳಿಗೆ ರಫ್ತು ಮಾಡುತ್ತಿದ್ದವು.

ವಿಜಯನಗರ ಪೂರ್ವಕಾಲದಲ್ಲಿ ತುಳುನಾಡಿನ ಬಂದರುಗಳು ನಿರ್ಲಕ್ಷ್ಯಕ್ಕೆ ಒಳಗಾದುದಕ್ಕೆ ಈ ಬಂದರುಗಳು ಸಂಪರ್ಕಿಸುವ ಒಳನಾಡಿಗೆ ಸುಗಮ ಸಾರಿಗೆ ಸಂಪರ್ಕ ಇಲ್ಲದಿದ್ದುದು ಮತ್ತು ಕೊಂಕಣ ತೀರದ ರೇವು ಪಟ್ಟಣಗಳು ಹೆಚ್ಚು ವ್ಯವಸ್ಥಿತವೂ ಆಗಿದ್ದುದು ಇದಕ್ಕೆ ಕಾರಣವಾಗಿರಬಹುದು. ಚೀನೀ ಬೌದ್ಧ ಯಾತ್ರಿಕನ ಉಲ್ಲೇಖದಂತೆ ಬನವಾಸಿಯ ಸುತ್ತಮುತ್ತಲಿನ ಪ್ರದೇಶಗಳು ಕಳ್ಳ ಕಾಕರ ಬೀಡಾಗಿದ್ದುದನ್ನು ಗಮನದಲ್ಲಿಟ್ಟುಕೊಂಡು ಬಹುಶಃ ವರ್ತಕರು ಸುರಕ್ಷಿತ ಕೊಂಕಣದ ಬಂದರುಗಳಿಂದ ವ್ಯಾಪಾರ ನಡೆಸುತ್ತಿದ್ದರೆಂದು ಊಹಿಸಬಹುದಾಗಿದೆ.

## 2.5 ಆಂತರಿಕ ವ್ಯಾಪಾರ

ತುಳುನಾಡು ಕೃಷಿ ಪ್ರಧಾನವಾದ ಪ್ರದೇಶವಾಗಿತ್ತು. ಅದರಿಂದಾಗಿ ಇಲ್ಲಿ ವ್ಯಾಪಾರ ವಹಿವಾಟು ಬಿಡುವಿಲ್ಲದೆ ನಡೆಯುತ್ತಿತ್ತು. ಕರಾವಳಿ ತೀರ ಎಲ್ಲಾ ರೀತಿಯ ವ್ಯಾಪಾರ ಮತ್ತು ವಾಣಿಜ್ಯ ವ್ಯವಹಾರಗಳ ಬೆಳವಣಿಗೆ ಸಾಧ್ಯವಾಗಿದ್ದು, ಆಂತರಿಕ ಶಾಂತಿ ಮತ್ತು ಭದ್ರತೆಗೆ ಈ ಪ್ರದೇಶವನ್ನಾಳಿದ ಅರಸರು ನೀಡಿದ ಮಹತ್ವದಿಂದ ವ್ಯಾಪಾರಿ ಮಾರ್ಗಗಳು, ವ್ಯಾಪಾರಿ ವಸ್ತುಗಳ ಲಭ್ಯತೆ, ಸಂಘಟಿತ ವ್ಯಾಪಾರಿ ಸಮುದಾಯ, ಸುಲಭ ಹಾಗೂ ಸುಲಲಿತ ವಿನಿಮಯ ಮತ್ತು ರಾಜಾಶ್ರಯಗಳು ಇದಕ್ಕೆ ಪೂರಕವಾಗಿದ್ದವು.

ಒಳನಾಡಿನ ವ್ಯಾಪಾರವು ಕರಾವಳಿಯ ವಿದೇಶಿಯ ವ್ಯಾಪಾರಕ್ಕೆ ಪೂರಕವಾಗಿ ಪರಿಣಮಿಸಿತು. ಒಳನಾಡಿನ ವ್ಯಾಪಾರದ ಸ್ಥಿತಿಗತಿಗಳ ಬಗೆಗಿನ ಆರಂಭಿಕ ವರದಿಗಳು ಅನೇಕ ದುರ್ಬಲವಾದ ಹೇಳಿಕೆಗಳ ಮೂಲಕ ಮುಚ್ಚಿ ಹೋಗಿವೆ ಎಂದು ತಿಳಿಸುತ್ತವೆ. ಕೃಷಿಪ್ರಧಾನ ಕೇಂದ್ರಗಳಲ್ಲಿ ಗ್ರಾಮಸ್ಥರ ಉತ್ಪನ್ನವನ್ನು ಸ್ಥಳಿಯ ಬಳಕೆಗಾಗಿ ಇನ್ನಿತರ ಬಳಕೆ ಅಗತ್ಯ ವಸ್ತುಗಳನ್ನು ಮಾರಲಾಗುತ್ತಿತ್ತು. ಹೆಚ್ಚುವರಿ ಉತ್ಪನ್ನಗಳನ್ನು ನಗರಗಳಲ್ಲಿನ ವ್ಯಾಪಾರಿಗಳಿಗೆ ವರ್ಗಾಯಿಸಲಾಯಿತು ಮತ್ತು ಅಲ್ಲಿಂದ ಕರ್ನಾಟಕದ ಇತರ ಭಾಗಗಳಲ್ಲಿ ವ್ಯಾಪಾರ ಕೇಂದ್ರಗಳಿಗೆ ರವಾನಿಸಲಾಯಿತು. ತುಳುನಾಡಿನ ಆರ್ಥಿಕ ಇತಿಹಾಸದ ಒಂದು ಅಧ್ಯಯನವು ಈ ವ್ಯಾಪಾರವನ್ನು ಬಹಿರಂಗಪಡಿಸುತ್ತವೆ. ಆಂತರಿಕ ಮತ್ತು ಬಾಹ್ಯ ಸ್ವರೂಪದ ಎರಡೂ ಬಗೆಯ ಆರ್ಥಿಕ ಚಟುವಟಿಕೆಗಳು ಇಲ್ಲಿ ಕೆಲವು ಸಮುದಾಯದ ಪ್ರಮುಖ ಗುರಿಯಾಗಿದ್ದುವು. ಆರಂಭಿಕ ವರದಿಗಳು ಒಳನಾಡಿನ ವಹಿವಾಟನ್ನು ಸೂಚಿಸುತ್ತದೆ.[13] ಪಶ್ಚಿಮ ಘಟ್ಟಗಳ ಅಡಚಣೆಯು ಒಳನಾಡಿನ ವ್ಯಾಪಾರವನ್ನು ಕಷ್ಟವಾಗಿಸಿತು. ಮಂಗಳೂರು

ಮೈಸೂರು ಮತ್ತು ಕೊಡಗಿನ ಸಂಪರ್ಕವಿರುವ ಮುಖ್ಯ ಹಾದಿಗಳು ಪೂರ್ವದಲ್ಲಿ- ಸಂಪಾಜೆ, ಬಿಸ್ಲೆ, ಸಂಸೆ, ಶಿರಾಡಿ, ಆಗುಂಬೆ, ಚಾರ್ಮಡಿ, ಹೊಸಂಗಡಿ, ಮಂಜರಬಾದ್ ಮತ್ತು ಉತ್ತರದಲ್ಲಿ- ಕೊಲ್ಲೂರು[14] ಶಂಕರನಾರಾಯಣ, ಹಾಲಾಡಿ, ಬಜೆ, ದಕ್ಷಿಣದಲ್ಲಿ- ಬೆಳ್ತಂಗಡಿ, ಬಂಟ್ವಾಳ, ಕಾರ್ಕಳ, ಮೂಡಬಿದರೆ, ವೇಣೂರು, ಉದ್ಯಾವರ, ಹೀಗೆ ಅನೇಕ ಒಳನಾಡಿನ ವ್ಯಾಪಾರ ಕೇಂದ್ರಗಳು ವ್ಯಾಪಾರ ಮಾರ್ಗಗಳ ಅಭಿವೃದ್ಧಿಗೆ ಮುಖ್ಯ ಉತ್ತೇಜಕ ಅಂಶವಾಗಿವೆ.

ಮಧ್ಯಕಾಲೀನ ಕರ್ನಾಟಕ ಪ್ರದೇಶದ ವ್ಯಾಪಾರ-ವಾಣಿಜ್ಯ ವಲಯಗಳ ಸ್ಥಿತ್ಯಂತರಗಳನ್ನು ಆ ಕಾಲದ ದಕ್ಷಿಣ ಭಾರತದ ಇತರ ಪ್ರಮುಖ ವ್ಯಾಪಾರಿ ಕೇಂದ್ರಗಳು ಹಾಗೂ ಸಾಗರೋತ್ತರ ರಾಷ್ಟ್ರಗಳೊಂದಿಗೆ, ಏಷ್ಯಾ ವ್ಯಾಪಾರಿ ಸಂಪರ್ಕದೊಂದಿಗೆ ಮಾತ್ರ ಕೂಲಂಕಷವಾಗಿ ಅರ್ಥೈಸಲು ಪ್ರಯತ್ನಿಸಲಾಗಿದೆ. ಉತ್ತರದ ಮಿರ್ಜಾನ್‌ನಿಂದ ಹಿಡಿದು ದಕ್ಷಿಣಾಭಿಮುಖವಾಗಿ ಹೊನ್ನಾವರ, ಭಟ್ಕಳ, ಬಾರಕೂರು, ಬಸ್ರೂರು, ಮಂಗಳೂರು ಮತ್ತು ಕುಂಬ್ಳಾಗಳು ಪ್ರಮುಖ ಬಂದರುಗಳಾಗಿ ಬೆಳವಣಿಗೆಗೊಂಡಿದ್ದವು. ಈ ಬಂದರುಗಳಲೆಲ್ಲಾ ಭಟ್ಕಳ ನಂತರ ಬಸ್ರೂರು, ಬಾರಕೂರು ಮತ್ತು ಮಂಗಳೂರು ಬಂದರುಗಳು ಪಶ್ಚಿಮ ತೀರದಾದ್ಯಂತ ಮುಖ್ಯ ರೇವು ಪಟ್ಟಣವಾಗಿ ವಿಜಯನಗರ ಕಾಲದಲ್ಲಿ ಬೆಳವಣಿಗೆಗೊಂಡಿತ್ತು. ಇದು ಒಳನಾಡಿನ ವ್ಯಾಪಾರಕೇಂದ್ರಗಳೊಂದಿಗೆ ಸಂಪರ್ಕ ಕಲ್ಪಿಸಿಕೊಂಡಿದ್ದು, ಸಾಗರೋತ್ತರ ವ್ಯಾಪಾರದ ಮುಖ್ಯ ಕೇಂದ್ರವು ಆಗಿತ್ತು.[15] ವ್ಯಾಪಾರವು ಮುಖ್ಯವಾಗಿ ಭೂಮಾರ್ಗ (ಪಾದಮಾರ್ಗ) ಮತ್ತು ಜಲಮಾರ್ಗವಾಗಿ ನಡೆಯುತ್ತಿತ್ತು. ಭೂಮಾರ್ಗದಲ್ಲಿ ಎತ್ತಿನ ಬಂಡಿಗಳು, ಕುದುರೆ, ಕೋಣ, ಕತ್ತೆ ಮುಂತಾದ ಪ್ರಾಣಿಗಳ ಮೂಲಕ ಸರಕು ಸಾಗಿಸುತ್ತಿದ್ದರು. ಪಾದಮಾರ್ಗದ ವ್ಯಾಪಾರ ಬಂಡಿಯ ಹೆದ್ದಾರಿ, ರಾಜಬೀದಿ, ಕೀಳ್ವಟ್ಟೆ, ಮೇಲ್ವಟ್ಟೆ, ಅಡ್ಡವಟ್ಟೆಗಳ ಮುಖಾಂತರ ಸಾಗುತ್ತಿದ್ದಿತು.[16] ತಲೆಯ ಮೇಲೆ, ಭುಜದ ಮೇಲೆ ಸರಕನ್ನು ಸಾಗಿಸುತ್ತಿದ್ದರು. ಜಲಮಾರ್ಗದಲ್ಲಿ ಸಣ್ಣ ಸಣ್ಣ ನದಿಗಳನ್ನು ತೆಪ್ಪ, ದೋಣಿಗಳ ಮೂಲಕ ದಾಟುತ್ತಿದ್ದರು. ನದಿಯ ಆಳ ಕಡಿಮೆ ಇದ್ದಾಗ ಇಳಿದು ನಡೆದು ಬರುತ್ತಿದ್ದರು. ಹಾಗೆಯೇ ಸಣ್ಣ ಸಣ್ಣ ನದಿಗಳನ್ನು ದಾಟಲು ಸೇತುವೆಗಳ ನಿರ್ಮಾಣ ಮಾಡಿಕೊಂಡಿದ್ದರು. ಹಾಗೂ ದೊಡ್ಡ ನದಿಗಳನ್ನು ದಾಟುವ ಮಾರ್ಗವನ್ನು ಕಡಹುಗಳೆಂದು ಕರೆಯಲಾಗುತ್ತಿತ್ತು. ಸಮುದ್ರದಲ್ಲಿ 'ಭೈತ್ರ' ಎಂಬ ದೊಡ್ಡ ಹಡಗನ್ನೂ ವ್ಯಾಪಾರಕ್ಕೆ ಬಳಸುತ್ತಿದ್ದರು.[17] ಪಶ್ಚಿಮ ಕರಾವಳಿ ಮತ್ತು ಕರ್ನಾಟಕದ ಒಳನಾಡಿನ ನಡುವೆ ಸಂಪರ್ಕ ಮಾರ್ಗಗಳಿದ್ದ ವಿಚಾರವನ್ನು ಕಲ್ಲುಡ ಮತ್ತು

ಕಲ್ಲುರ್ಟಿ ಎಂಬ ತುಳು ಪಾಡ್ದನಗಳ ಅಧ್ಯಯನದಿಂದ ತಿಳಿದುಬರುತ್ತದೆ. ಕಲ್ಲುರ್ಟಿಯ ಸಹೋದರ ತುಳುನಾಡಿನ ಪ್ರಸಿದ್ಧ ಶಿಲ್ಪಿಯಾಗಿದ್ದನು. ತನ್ನ ಸಹೋದರನನ್ನು ಹುಡುಕುವ ವೇಳೆ ಅಡ್ಕ(ಅಟ್ಟ) ಎಂಬಲ್ಲಿ ಜಲಮಾರ್ಗವಾಗಿ ಹಾದುಹೋಗಿ ಬೇಲೂರನ್ನು ತಲುಪಿದಳು. ಆದರೆ ಆಕೆಯ ಸಹೋದರ ಅಲ್ಲಿರಲಿಲ್ಲ. ಅವನು ಶ್ರವಣಬೆಳಗೊಳಕ್ಕೆ ಹೋಗಿರುವ ವಿಷಯ ಬೇಲೂರಿನ ಜನರಿಂದ ತಿಳಿಯುತ್ತದೆ. ನಂತರ ಆಕೆ ಶ್ರವಣಬೆಳಗೊಳ ತಲುಪಿ ಸಹೋದರನಿಗಾಗಿ ಹುಡುಕುತ್ತಾಳೆ. ಆದರೆ ಆತ ಅಲ್ಲಿಯೂ ಸಿಗುವುದಿಲ್ಲ. ಆತ ಎರೆನಾಡಿಗೆ ತೆರಳಿರುವುದಾಗಿ ತಿಳಿಯುತ್ತದೆ. ಆಕೆ ಅಲ್ಲಿಗೆ ಹೋದಾಗಲೂ ಕಲ್ಕುಡ ನಾಡಿನಲ್ಲಿದ್ದಾನೆಯೆಂದು ಹೇಳಲಾಯಿತು. ಆಕೆ ಎರನಾಡಿಗೆ ಹೋಗಿ ಅಲ್ಲಿಂದ, ಕೊಲ್ಲೂರು, ಪೆರ್ಡೂರು, ಕಾರ್ಕಳ ಮತ್ತು ಉಪ್ಪಿನಂಗಡಿಯ ಮೂಲಕ ಕೊನೆಗೆ ವೇಣೂರು ತಲುಪಿದಳು. ಈ ಮೇಲಿನ ವಿವರವನ್ನು ತಿಳಿದಾಗ ತುಳುನಾಡಿಗೂ ಹೊಯ್ಸಳ ರಾಜ್ಯದ ನಡುವೆ ರಸ್ತೆ ಸಂಪರ್ಕ ಅಸ್ತಿತ್ವದಲ್ಲಿದ್ದುದನ್ನು ತಿಳಿಯಬಹುದು.[18] ಹೀಗೆ ಒಳನಾಡಿನಲ್ಲಿದ್ದ ಅನೇಕ ರಸ್ತೆ ಸಂಪರ್ಕವನ್ನು ನೋಡಬಹುದು. ಈ ರೀತಿಯ ಭೂಮಾರ್ಗಗಳ ವ್ಯವಸ್ಥೆಯನ್ನು ಮುಖ್ಯವಾಗಿ ಅಲ್ಲಿನ ಆಡಳಿತವರ್ಗ ಮತ್ತು ವರ್ತಕ ಸಂಘಗಳು ನೋಡಿಕೊಳ್ಳುತ್ತಿದ್ದವು. ಭೂಮಾರ್ಗಗಳು ಮತ್ತು ನದಿಮಾರ್ಗಗಳ ಮುಖಾಂತರ ಪ್ರಮುಖ ಬಂದರುಗಳಿಗೆ ಸಂಪರ್ಕವನ್ನೇರ್ಪಡಿಸಲಾಗಿತ್ತು.

### 2.6 ಶಾಸನಗಳು

ಇತಿಹಾಸ ರಚನೆಯಲ್ಲಿ ಶಾಸನಗಳ ಪ್ರಾಮುಖ್ಯ ಅಪಾರವಾದುದು. ತುಳುನಾಡಿನ ಚರಿತ್ರೆಯ ರಚನೆಯಲ್ಲಿ ಶಾಸನಗಳು ಸೂಕ್ತವಾದುದೆಂದು ಪರಿಗಣಿಸಿ ಇವುಗಳನ್ನು ಪ್ರಾಚೀನ, ಮಧ್ಯಯುಗೀನ ಮತ್ತು ವಿಜಯನಗರ ಕಾಲದ ಶಾಸನಗಳೆಂದು ವಿಂಗಡಿಸಿ ಅಧ್ಯಯನ ನಡೆಸಿದ್ದಾರೆ.[19] ಕೆಲವೊಂದು ಶಾಸನಗಳ ಬಗ್ಗೆ ನೋಡುವುದಾದರೆ, ಗುರುರಾಜ ಭಟ್ಟರು ತುಳುನಾಡಿಗೆ ಸಂಬಂಧಿಸಿದಂತೆ ಹಲವಾರು ಶಾಸನಗಳನ್ನು ಪ್ರಥಮ ಬಾರಿಗೆ ಬೆಳಕಿಗೆ ತಂದಿದ್ದಾರೆ.[20] ಇದಕ್ಕೆ ಪೂರಕವಾಗಿ ಸ್ಥಳೀಯರ ಸಹಕಾರವೂ ಲಭಿಸಿದೆ. ಏಕೆಂದರೆ ಹಲವಾರು ಬಾರಿ ಪತ್ರಿಕೆಗಳಲ್ಲಿ ತಮ್ಮ ಲೇಖನಗಳನ್ನು ಪ್ರಕಟಪಡಿಸಿ ಇತಿಹಾಸದ ಬಗ್ಗೆ ಅರಿವು ಮೂಡಿಸುವಲ್ಲಿ ಹಾಗೂ ಜನತೆಯಲ್ಲಿ ಜಾಗೃತ ಮನೋಭಾವನೆಯನ್ನು ಬೆಳೆಸುವಲ್ಲಿ ಶ್ರಮಿಸಿದ್ದಾರೆ. ಅವರ ಸರಳವಾದ ಭಾಷೆ ಮತ್ತು ವಿಚಾರಗಳಿಂದ ಪ್ರಚೋದಿತರಾದ ಸ್ಥಳೀಯರು ಹಲವಾರು ಹೊಸ ಹೊಸ ವಿಚಾರಗಳನ್ನು ಭಟ್ಟರಿಗೆ ತಿಳಿಸಿದ್ದರು. ಭಟ್ಟರೇ ಸ್ವತಃ ಅನ್ವೇಷಣೆ ಮಾಡಿದಂತಹ 25 ಮಹತ್ವದ ಶಾಸನಗಳಿವೆ.[21] ಅವುಗಳಲ್ಲಿ ಮುಖ್ಯವಾದವುಗಳು

ಆಳ್ವರಸನ ಉದ್ಯಾವರ ಶಾಸನ,[22] ಕಾಪುವಿನಲ್ಲಿರುವ ತಾಮ್ರಶಾಸನ,[23] ಕಡವಸೆ ಶಾಸನ,[24] ಹಾಗೂ ಹಟ್ಟಿಯಂಗಡಿಯ ಚಂದ್ರನಾಥ ಬಸದಿಯಲ್ಲಿರುವ ಕಲ್ಲಿನ ಶಾಸನ.[25] ಆಳುಪರಸ ರಣಸಾಗರನ ಉದಿಯಾವರ (ಕ್ರಿ.ಶ. 8ನೇ ಶತಮಾನದ ಉತ್ತರಾರ್ಧ) ಶಾಸನದಲ್ಲಿ ಮೆಣಸು, ಅಕ್ಕಿ ಮತ್ತು ಭತ್ತ ಇವುಗಳ ಮೇಲೆ ಕೊಡಬೇಕಾದ ತೆರಿಗೆಯ ಬಗ್ಗೆ ಉಲ್ಲೇಖವಿದೆ.[26] ವಿಜಯಾದಿತ್ಯ ಆಳುಪೇಂದ್ರನು (ಸು. ಕ್ರಿ.ಶ. 9ನೇ ಶತಮಾನ) ನಕರ ವ್ಯಾಪಾರಿ ಸಂಘದವರೊಡಗೂಡಿ ಸುಂಕಾದಾಯದಲ್ಲಿ ರಿಯಾಯಿತಿ ದಾನವನ್ನು ಮಾಡಿದನು. ಇದರ ಉಲ್ಲೇಖ ಉದಿಯಾವರ ಶಾಸನದಲ್ಲಿದೆ.[27] "ಪ್ರತಿ ಎರಡು ಗೋಣಿ ಧಾನ್ಯದ ಮೇಲಿನ ಒಂದೂವರೆ ಪುಟ್ಟಿಗೆ ಧಾನ್ಯದ ಸುಂಕ; ಪ್ರತಿ ಒಂದು ಮಣ ಹತ್ತಿಯ ಮೇಲಿನ ಒಂದೂವರೆ ಪುಟ್ಟಿಗೆ ಧಾನ್ಯದ ಸುಂಕ; ಪ್ರತಿ ಒಂದು ಮಣ ಹತ್ತಿಯ ಮೇಲಿನ ಹದಿನಾರು ಪಲ ಹತ್ತಿಯ ಸುಂಕ; ಪ್ರತಿ ಒಂದು ಹೇರಿನ ಅಡಕೆಯ ಮೇಲಿನ ಮುನ್ನೂರು ಅಡಕೆಯ ಸುಂಕ; ಪ್ರತಿ ಒಂದು ಹೇರಿನ ಮೆಣಸಿನ ಮೇಲಿನ ಹದಿನಾರು ಪಲ ಮೆಣಸಿನ ಸುಂಕ," ಈ ದಾನವನ್ನು ಸ್ವರ್ಣಗೋಸಸಿ, ಅಡಿಯಪ್ಪ ಸೆಟ್ಟಿ, ಪರಸೇಬ್ಯನ್ ಮತ್ತು ನಗಕುಮಾರನ್ ಎಂಬುವವರು ಸ್ವೀಕರಿಸಿದರು. ಕೆಳದಿ ವೀರಭದ್ರನಾಯಕನು ನೀಡಿದ ದಾನದ ವಿವರವನ್ನು ಕೊಲ್ಲೂರು ಶ್ರೀ ಮೂಕಾಂಬಿಕಾ ದೇವಾಲಯದ ತಾಮ್ರಶಾಸನದಲ್ಲಿ ನೋಡಬಹುದು.[28] (ಕ್ರಿ.ಶ. 1641 ರ ಕಾಲ). ಕ್ರಿ.ಶ. 7ನೇ ಶತಮಾನದ ಮಧ್ಯಭಾಗದಿಂದ ಕ್ರಿ.ಶ. 18ನೇ ಶತಮಾನದ ಕೊನೆಯ ವರೆಗಿನ ಹನ್ನೊಂದು ಶತಮಾನಗಳಿಗೂ ಹೆಚ್ಚಿನ ದೀರ್ಘಾವಧಿಯ ತುಳುನಾಡಿನ ಇತಿಹಾಸವನ್ನು ಪುನಾರಚಿಸುವಲ್ಲಿ ಶಾಸನಗಳ ಪ್ರಾಮುಖ್ಯ ಬಹಳ. ಪ್ರಾಥಮಿಕ ಆಕರಗಳಲ್ಲಿ ಶಾಸನಗಳು ಅತೀವ ಮುಖ್ಯವಾಗಿವೆ. ಇವುಗಳನ್ನು ಕೆ.ವಿ. ರಮೇಶ್[29] ವಸಂತ ಶೆಟ್ಟಿ[30] ಹೀಗೆ ಕೆಲವು ಮಂದಿ ತಮ್ಮ ಇತಿಹಾಸದ ಪುನಾರಚನೆಯಲ್ಲಿ ಈ ಎಲ್ಲಾ ಶಾಸನಗಳನ್ನು ತಮ್ಮ ಗ್ರಂಥಗಳ ರಚನೆಯಲ್ಲಿ ಉಪಯೋಗಿಸಿದ್ದಾರೆ.

### 2.7. ಕಡತ ದಾಖಲೆಗಳಲ್ಲಿ ವ್ಯಾಪಾರ

ಕಪ್ಪು ಮೇಣದ ಬಟ್ಟೆಯ ಮೇಲೆ ಸೀಸ ಅಥವಾ ಚೋಕಿನಿಂದ ಬರೆದ ಬರಹವೇ ಕಡತ ಅಥವಾ ಕಡಿತವೆನ್ನುತ್ತಾರೆ. ಇವುಗಳ ವಿಚಾರ ಆಳವಾಗಿ ಅಧ್ಯಯನ ನಡೆಸಿದ ಆದ್ಯರಲ್ಲಿ ಆರ್. ನರಸಿಂಹಾಚಾರ್ಯ, ಬಿ. ಎ. ಸಾಲೆತ್ತೂರ ಹಾಗೂ ಇತ್ತಿಚಿನವರಲ್ಲಿ ಎ. ಕೆ. ಶಾಸ್ತ್ರಿಯವರು ಪ್ರಮುಖರು. ಆದರೆ ಈ ಲೇಖನದಲ್ಲಿ ಈವರೆಗೂ ಪತ್ತೆಯಾಗದ ಕೆಲವು ಕಡತಗಳನ್ನು

ಪರಿಚಯಿಸಿ ಅವುಗಳಲ್ಲಿ ದಾಖಲಾಗಿರುವ ಸಾಗರೋತ್ತರ ಚಟುವಟಿಕೆಗಳನ್ನು ಇಲ್ಲಿ ತಿಳಿಸಲಾಗುವುದು. ಮಂಜೇಶ್ವರದ ಶ್ರೀಮದನಂತೇಶ್ವರ ದೇವಾಲಯದಲ್ಲಿರುವ, ಹೊಸ ನಾಡು ವಿಶ್ವೇಶ್ವರಯ್ಯನವರ ಮನೆಯಲ್ಲಿರುವ ಮತ್ತು ಬೈಲೂರು ರಾಮರಾಯರ ಮನೆ(ಗಂಗೊಳ್ಳಿ) ಯಲ್ಲಿರುವ ಕಡತಗಳನ್ನು ಇಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಮಂಜೇಶ್ವರ (ಕಾಸರಗೋಡು, ಕೇರಳ)ದಲ್ಲಿರುವ ಶ್ರೀಮದನಂತೇಶ್ವರ ದೇವಾಲಯದ ಇಂತಹ ಕೆಲವು ದಾಖಲೆಗಳನ್ನು ಗಣಪತಿ ರಾವ್ ಐಗಳ್‌ರವರು 1924ರಲ್ಲಿ ಸಂಶೋಧಿಸಿದ್ದಾರೆ. ಆದರೆ ಇನ್ನೂ ಇಂತಹ ದಾಖಲೆಗಳು ಅಪ್ರಕಟಿತವಾಗಿಯೇ ಉಳಿದಿವೆ. ಈ ಪ್ರಕಟಿತ ದಾಖಲೆಗಳಲ್ಲಿ ಮುಖ್ಯವಾಗಿ ಸಾಗರೋತ್ತರ ವ್ಯಾಪಾರ, ಮಂಜೇಶ್ವರ, ಕುಂಬಳೆ, ಕಾಸರಗೋಡುಗಳಲ್ಲಿ ನಡೆಯುತ್ತಿದ್ದ ವ್ಯಾಪಾರ ಮತ್ತು ಈ ರೇವುಗಳಿಗೂ, ಮಂಗಳೂರು ಮತ್ತು ಕೇರಳದ ರೇವುಗಳೊಳಗೆ ನಡೆದ ಜಲಯಾನ ವ್ಯಾಪಾರದ ಬಗ್ಗೆ ತಿಳಿಯುತ್ತದೆ. ಇಷ್ಟಲ್ಲದೇ ಇನ್ನೂ ಕೆಲವು ಕಡತಗಳು ಆಗ ಇದ್ದ ರೇವುಗಳಾದ ಇಳಿಮಲೆ, ಚವಣತ್ತೂರು, ಬೇಕಲ, ಕಾಸರಗೋಡು ಕುಂಬಳ ಮಂಜೇಶ್ವರ ಮತ್ತು ಮಂಗಳೂರುಗಳೊಳಗೆ ವಿವಿಧ ಹೆಸರಿನ ಹಡಗುಗಳ ಮುಖಾಂತರ ಸಾಗರೋತ್ತರ ವ್ಯಾಪಾರ ನಡೆದುದ್ದನ್ನು ದಾಖಲಿಸಿವೆ. ಕ್ರಿ.ಶ. 1748 ಶಕ 1670 ರ ಇಂತಹ ಅಪ್ರಕಟಿತ ಕಡತ ಮಂಜೇಶ್ವರ ರೇವಿಗೆ ಗುರುಪುರ, ಮಣಾಲಿ, ಶೃಂಗೇರಿ, ಆಗುಂಬೆ, ಮೂಡಬಿದ್ರೆ, ಬಂಟವಾಳ, ಪಾಣೆ ಮಂಗಳೂರು ಮುಖಾಂತರ ಬಂದ ಸರಕುಗಳನ್ನು ತಿಳಿಸಿವೆ. ಇದಲ್ಲದೇ ಇದೇ ಕಡತವು ಮಂಜೇಶ್ವರ ಬಂದರಿಗೂ, ಕುಮಟಾ, ಪಡುಬಿದ್ರೆ, ಮೂಲ್ಕಿ ರೇವುಗಳೊಳಗಿರುವ ಸಾಗರ ವ್ಯಾಪಾರವನ್ನು ಉಲ್ಲೇಖಿಸುತ್ತದೆ. ಇನ್ನೊಂದು ಇಂತಹ ಅಪ್ರಕಟಿತ ಕಡತ, ಮಂಜೇಶ್ವರ, ಬಂದರಿನಲ್ಲಿ ನಡೆದ ಸರಕುಗಳಾದ ಅಕ್ಕಿ, ತೆಂಗಿನಕಾಯಿ, ತುಪ್ಪ, ಬೇಸಿಕಾಯಿ, ಎಣ್ಣೆಗಳು, ಹಡಗುಗಳ ಮುಖಾಂತರ ಕೊಡೆಯಾಳ, ಮಂಗಳೂರು, ಕುಂಬಳೆ, ಕಾಸರಗೋಡು, ಹೊಸದುರ್ಗ (ಈಗಿನ ರೌಜನ್ ಕಾಡ) ಕಣ್ಣೂರಿಗೆ ರಫ್ತಾಗುತ್ತಿದ್ದದ್ದನ್ನು ತಿಳಿಸುತ್ತದೆ.[31] ಇದಲ್ಲದೇ ಈ ಕಡತಗಳಲ್ಲಿ ಸಾಗರೋತ್ತರ ವ್ಯಾಪಾರ ನಡೆಸುವ ಕುಂಬಳೆ ರಾಯಪ್ಪ ನಾಯಕ. ಮಂಜೇಶ್ವರದ ಲಕ್ಷ್ಮಣ ಶಾನುಭಾಗ, ವಿಟ್ಲದ ಅಪ್ಪಣ್ಣ ಸುಬ್ಬಯ್ಯ ಮಲ್ಯ, ಬಂಟವಾಳದ ರಾಮಚಂದ್ರ ನಾಯಕರ ಹೆಸರುಗಳು ಮತ್ತು ಇವರು ನಡೆಸುತ್ತಿರುವ ಸರಕುಗಳ ವ್ಯವಹಾರಗಳನ್ನು ತಿಳಿಸಿವೆ. ಪ್ರಕಟಿತ ಕಡತಗಳು, ಕೆಳದಿ ರಾಜ್ಯದ ರೇವುಗಳಾದ ಮಿರ್ಜಾನ್ ಹೊನ್ನಾವರ ಬಟ್ಕಳ, ಮಂಗಳೂರುಗಳೊಂದಿಗೂ ಮತ್ತು ಪಶ್ಚಿಮ ಕರಾವಳಿಯ ಇನ್ನಿತರ

ರೇವುಗಳಾದ ಕಡವಾಡ (ಈಗಿನ ಕಾರವಾರ) ಗೋವೆ, ರಾಜಾಪುರಗಳೊಳಗಿರುವ ಸಮುದ್ರ ವ್ಯಾಪಾರ ಸಂಪರ್ಕಗಳನ್ನು ಉಲ್ಲೇಖಿಸುತ್ತದೆ.

ಕಡತಗಳು ಶಾಸನಗಳಂತೆಯೇ ಐತಿಹಾಸಿಕ ಆಕರಗಳಾಗಿವೆ. ಕಡತಗಳು ಮಧ್ಯಕಾಲೀನ ಇತಿಹಾಸ ರಚನೆಗೆ ಮತ್ತು ಕರಾವಳಿ ಪ್ರದೇಶದ ಇತಿಹಾಸ ರಚನೆಗೆ ಸಹಾಯಮಾಡುತ್ತವೆ. ಬೆಂಗಳೂರಿನ ಪತ್ರಾಗಾರ ಮತ್ತು ಮದ್ರಾಸಿನ ಪ್ರಾಚ್ಯ ಪುಸ್ತಕ ಭಂಡಾರದಲ್ಲೂ ಇಂತಹ ಬರಹಗಳಿವೆ. ಮಂಜೇಶ್ವರ ದೇವಸ್ಥಾನದಲ್ಲೂ ಇಂತಹ ಕೆಲವು ದಾಖಲೆಗಳು ಪತ್ತೆಯಾಗಿವೆ.

ಕೊಟೇಶ್ವರ, ಕೊಲ್ಲೂರು ಮತ್ತು ಕಮಲಶೀಲೆ ದೇವಾಲಯಗಳಲ್ಲೂ ಹಲಸನಾಡಿನ ವಿಶ್ವೇಶ್ವರಯ್ಯನವರ ಮನೆಯಲ್ಲೂ ಇಂತಹ ಹಲವಾರು ಕಡತಗಳಿವೆ.[32] ಶಕವರುಷ ಕ್ರಿ.ಶ. 1601–1678ರ ಕಡತಗಳಲ್ಲಿ ಮಂಜೇಶ್ವರ ಮತ್ತು ಕುಂಬಳೆಯ ವರ್ತಕರು ಈ ರೇವುಗಳಲ್ಲಿ ನಡೆಸಿಕೊಂಡು ಬರುತ್ತಿದ್ದ ಅಕ್ಕಿ, ಅಡಿಕೆ, ತೆಂಗಿನಕಾಯಿ ವ್ಯಾಪಾರಗಳ ಲಾಭಗಳನ್ನು ಇಲ್ಲಿನ ದೇವಸ್ಥಾನದ ನಿತ್ಯಧಾರ್ಮಿಕ ಕಟ್ಟಳೆಗಳನ್ನು ನಡೆಸಲು ಪಾಲುವಂತಿಕೆಯಾಗಿ ನೀಡುತ್ತಿದ್ದನ್ನು ಹೇಳಿವೆ. ಕ್ರಿ.ಶ. 1668ರ ವರ್ಷದ ಮಂಜೇಶ್ವರ ದೇವಾಲಯದಲ್ಲಿರುವ ಕಡತದಲ್ಲಿ ಕೊಡೆಯಾಳ ಬಂದರಿಗೆ ಕೊಕ್ಕರ್ಣೆ ಮಾರ್ಗ ಮತ್ತು ಘಟ್ಟದ ಮಾರ್ಗದಿಂದ ಹೋಗಿಬರುವ ಸರಕುಗಳಾದ ಅಕ್ಕಿ, ದ್ವಿದಳಧಾನ್ಯ, ತೆಂಗಿನಕಾಯಿ, ಅಡಕೆ, ಮೆಣಸು, ಕೊಬ್ಬರಿ, ಕಾಟುಕತ್ತ, ಕಬ್ಬಿನ ಬೆಲ್ಲ, ಉಳಿಗಂದ, ಉತ್ತುತ್ತಿ, ದ್ರಾಕ್ಷಿ, ಹಕ್ರುಡಾ, ಬಾದಾಮಿ, ಯಿಂಗು, ಜೋಳ, ಮಂಜಿಷ್ಟ, ಎಣಿಕೆ ಜಿನಸು, ಕಾಗ, (ಕಾಗದ) ತೋಪು, ಇತ್ಯಾದಿಗಳು ಘಟ್ಟ ಮಾರ್ಗದ ಹೇರಿನ ಮೇಲೆ ನಡೆಯಲ್ಲಿ ಬರುತ್ತಿರುವುದನ್ನು ತಿಳಿಸಿದೆ. ಈ ಜಿನಸುಗಳನ್ನು ಕೊಡೆಯಾಳ ಬಂದರಿನ ವರ್ತಕರುಗಳಾದ ಹತ್ತು ಸಮಸ್ತರು (ಇವರು ಗೌಡ ಸಾರಸ್ವತರೆ) ಪರಸ್ಥಳದವರು ಮಹಾನಾಡಿನವರು, ಗುಜ್ಜಾರ ಮತ್ತು ಮಹಾಜನಂಗಳು ವ್ಯಾಪಾರ ನಡೆಸುತ್ತಿದ್ದರು. ಹಲಸನಾಡಿನಲ್ಲಿ ಸಿಕ್ಕಿದ ಕೆಲವು ಕಡತಗಳು ತುಳುನಾಡಿನ ತೆರಿಗೆ ಆಡಳಿತದ ವಿಚಾರ ತಿಳಿಸುತ್ತವೆ ಮತ್ತು ಆ ಊರಿನ ಪಕ್ಕದಲ್ಲಿರುವ ದೇವಾಲಯಗಳ ಬಗ್ಗೆ ಮಾಹಿತಿ ಒದಗಿಸುತ್ತವೆ.[33] ಇಂತಹ ಕೆಲವು ಅಪ್ರಕಟಿತ ದಾಖಲೆಗಳಲ್ಲಿ ರೇವುಗಳ ವೈಶಿಷ್ಟ್ಯಗಳನ್ನು ತಿಳಿಸಿವೆ. ಇನ್ನೊಂದು ಗಮನಾರ್ಹ ಸಂಗತಿಯೇನೆಂದರೆ ಹಲಸನಾಡಿನಲ್ಲಿ ಸಿಕ್ಕಿದ ಕಡತಗಳು ನದಿಗಳ ಹೂಳಿನಿಂದಾಗಿ ಬಂದರುಗಳು ಹಾಳಾಗಿ ಇಲ್ಲಿನ ವ್ಯಾಪಾರ ಇಳಿಮುಖವಾದುದನ್ನು ಉಲ್ಲೇಖಿಸುತ್ತವೆ. ಇಂತಹವುಗಳಲ್ಲಿ ಬಸ್ರೂರು, ಗಂಗೊಳ್ಳಿ ಮತ್ತು ಶಿರೂರು ರೇವುಗಳಾಗಿವೆ.

ಇದರಿಂದಾಗಿ ಈ ರೇವುಗಳಲ್ಲಿ ಅಕ್ಕಿ, ಮೆಣಸು, ತೆಂಗಿನಕಾಯಿ ಮತ್ತು ಹುರಿಹಗ್ಗ ವ್ಯಾಪಾರಗಳು ಇಳಿಮುಖವಾಯಿತು. ಗಂಗೊಳ್ಳಿ ಬಂದರುಗಳಿಗೆ ಬರುವ ಸರಕುಗಳು ತಲ್ಲೂರು, ಶಂಕರನಾರಾಯಣ, ಸಿದ್ಧಾಪುರ, ಹುಲಿಕಲ್ಲು, ಬಿದನೂರು ಮುಖಾಂತರವಾಗಿ ಎತ್ತು ನಡೆಗಳಲ್ಲಿ ಬರುತ್ತಿರುವುದನ್ನು ಹಲಸನಾಡು ಮತ್ತು ಗಂಗೊಳ್ಳಿಯಲ್ಲಿ ಸಿಕ್ಕಿದ ಕಡತಗಳಿಂದ ತಿಳಿದು ಬರುತ್ತದೆ.[34]

ಶೃಂಗೇರಿ ಮಠದಲ್ಲಿ ಸಿಕ್ಕಿರುವ ಕಡತವು ಶೃಂಗೇರಿ ಮಠ ಮತ್ತು ತುಳುನಾಡಿನ ದೇವಾಲಯಗಳ ಸಂಬಂಧವನ್ನು ತಿಳಿಸುತ್ತದೆ.[35] ಶೃಂಗೇರಿ ಮಠದಲ್ಲಿರುವ ಶಾಲಿವಾಹನ ಶಕ 1662– ಕ್ರಿ.ಶ. 1740 ರ ಕಡತದಲ್ಲಿ ಕೆಲವು ಸುಂಕ ಠಾಣೆಗಳು ಘಟ್ಟದ ಕೆಳಗೆ ಇದ್ದುದ್ದನ್ನು ತಿಳಿಸುತ್ತವೆ. ಈ ಠಾಣ್ಯಗಳಾವುವೆಂದರೆ ಹೊಸಂಗಡಿ, ನರಸೀಪುರ, ಸೋಮೇಶ್ವರ, ಕಾರಕಳ, ಮೂಡಬಿದಿರೆ, ಸುಬ್ರಹ್ಮಣ್ಯ, ಕುಂಬಳೆ, ಮಂಜೇಶ್ವರ, ಉರಾಳ(ಉಳ್ಳಾಲ), ಕೊಡೆಯಾಲ, ಪಣಂಬೂರು, ಮೂಲಿಕೆ, ಹೆಜಮಾಡಿ, ಕಾಪು, ಕಟುಪಾಡಿ, ಕಲ್ಯಾಣಪುರ, ಬಾರಕೂರು, ಸವಡ, ಗುರುವಾಡಿ (ಗುಳುವಾಡಿ), ಬಸುಸೂರು (ಬಸ್ರೂರು), ತಲಮಾರು (ತಲ್ಲೂರು), ಹೆಂಮಾಡಿ, ನಾಯಕನ ಕಟ್ಟೆ, ಬಯರೂರು (ಬೈಂದೂರು), ಬಟ್ಟಕಳ, ಸಿರಾಲಿ, ಹೊನ್ನಾವರ, ಗೇರೆಸೊಪ್ಪೆ, ಚಂದಾವರ, ಮಿಡಜೆ (ಮಿಜಿಣ), ಮರುರು (ಕುಮಟಾ ಸಮೀಪದ ಮೂರೂರು), ಕೊಲ್ಲೂರು ಇತ್ಯಾದಿ. ಇವುಗಳಲ್ಲಿ ಕೆಲವು ರೇವುಗಳು ಮತ್ತು ಉಳಿದವುಗಳು ಹಿನ್ನಾಡಿನ ವ್ಯಾಪಾರ ಕೇಂದ್ರಗಳಾಗಿವೆ. ಈ ಹಿನ್ನಾಡಿನ ವ್ಯಾಪಾರ ಕೇಂದ್ರಗಳ ಮುಖಾಂತರ ರೇವುಗಳಾದ ಕುಂಬಳೆ, ಮಂಜೇಶ್ವರ, ಉಳ್ಳಾಲ, ಕೊಡೆಯಾಳ, ಪಣಂಬೂರು, ಮೂಲಿಕೆ, ಹೆಜಮಾಡಿ, ಕಾಪು, ಬಸ್ರೂರು, ಬೈಂದೂರು, ಭಟ್ಕಳ, ಶಿರಾಲಿ, ಹೊನ್ನಾವರ ಮತ್ತು ಮಿಡಚೆಗಳೊಂದಿಗೆ ವ್ಯಾಪಾರ ಸಂಪರ್ಕವಿದ್ದುದನ್ನು ಈ ದಾಖಲೆಗಳು ಸೂಚಿಸುತ್ತವೆ.[36]



## 2.8. ವಿದೇಶಿಯ ಸಾಹಿತ್ಯ

ಕ್ರಿ.ಶ. 16ನೇ ಶತಮಾನದಿಂದ 18ನೇ ಶತಮಾನದವರೆಗೆ ತುಳುನಾಡಿನ ಇತಿಹಾಸ ಅಧ್ಯಯನಕ್ಕೆ ಶಾಸನಗಳಂತೆ ಕಡತಗಳೂ ಸಹಾಯಕವಾಗಿವೆ. ಇವೆರಡರ ಸಂಯೋಜಿತ ಅಧ್ಯಯನದಿಂದ ಸಾಕಷ್ಟು ವಿದೇಶಿಯ ಸಾಹಿತ್ಯ ಮಾಹಿತಿಗಳು ಇತಿಹಾಸ ರಚನೆಗೆ ದೊರೆಯುತ್ತವೆ.

ವಿದೇಶಿ ಪ್ರವಾಸಿಗರ ವರದಿಗಳಲ್ಲಿ ಅತಿಶಯೋಕ್ತಿ ಇರುವುದಾದರೂ ಅವರ ವರದಿಯಲ್ಲಿ ಕನ್ನಡ ನಾಡಿನ ವೈಭವವನ್ನು ನೋಡಬಹುದು. ಮಧ್ಯಕಾಲೀನ ತುಳುನಾಡಿನ ಬಗ್ಗೆ ವಿದೇಶಿಯರ ಮಾಹಿತಿ ಸಮೃದ್ಧವಾಗಿ, ವೈವಿಧ್ಯಮಯವಾಗಿ ದೊರೆಯುತ್ತದೆ. ಅಲ್ಲದೆ ಈ ಮಾಹಿತಿ ಅತ್ಯಂತ ಮಹತ್ವದ ವಿಚಾರಗಳನ್ನು ಹೊಂದಿವೆ. ಈ ಪ್ರವಾಸಿಗರು ಇಲ್ಲಿನ ನಗರ ಸಂಸ್ಕೃತಿ ಕಲೆ, ಸಾಮಾಜಿಕ, ಜೀವನಗಳನ್ನು ಕಣ್ಣಾರೆ ಕಂಡು ತಮ್ಮ ಅನುಭವಗಳನ್ನು ಯಥಾವತ್ತಾಗಿ ಹಾಗೂ ಸುಂದರವಾಗಿ ಬರೆದಿದ್ದಾರೆ. ಕ್ರಿ.ಶ 6ನೇ ಶತಮಾನದಿಂದ ಕ್ರಿ.ಶ 16ನೇ ಶತಮಾನದ ಅವಧಿಯಲ್ಲಿ ಕರ್ನಾಟಕದ ಪಶ್ಚಿಮ ಕರಾವಳಿ ಮತ್ತು ಒಳನಾಡಿಗೆ, ಪೂರ್ವದ ರಾಷ್ಟ್ರಗಳ ವ್ಯಾಪಾರಿಗಳು ಮತ್ತು ಪಾಶ್ಚಿಮಾತ್ಯರು ಆಗಮಿಸಿದ್ದರು. ಕರ್ನಾಟಕದ ಕರಾವಳಿ ಯನ್ನು ಸಂದರ್ಶಿಸಿದ ಪ್ರಾರಂಭದ ಯಾತ್ರಿಕರು ಆಂತರಿಕ ವ್ಯಾಪಾರದ ಬಗ್ಗೆ ಹೆಚ್ಚಿನ ವಿವರಗಳನ್ನು ನೀಡದೆ ಭಾರತದ ಕರಾವಳಿಯ ಈ ಭಾಗದಿಂದ ವಿದೇಶಗಳಿಗೆ ರಫ್ತಾಗುತ್ತಿದ್ದ ಸರಕುಗಳು, ಈ ಪ್ರದೇಶಕ್ಕೆ ಆಮದಾಗುತ್ತಿದ್ದ ವಸ್ತುಗಳು, ಇಲ್ಲಿನ ಬಂದರುಗಳಲ್ಲಿ ದೊರೆಯುತ್ತಿದ್ದ ಅತ್ಯುತ್ತಮ ವ್ಯಾಪಾರದ ವಸ್ತುಗಳನ್ನು ಬಂದರುಗಳ ನಡುವಿನ ವ್ಯಾಪಾರದ ಬಗೆ, ಮುಂತಾದ ವಿವರಗಳನ್ನು ದಾಖಲಿಸುತ್ತಾರಾದರೂ ಆಂತರಿಕ ವ್ಯಾಪಾರ ಮಾರ್ಗಗಳ ಬಗ್ಗೆ ಹೆಚ್ಚಿನ ಮಾಹಿತಿ ನೀಡುವುದಿಲ್ಲ. ಈ ಬಗೆಯ ವಿವರವಾದ ಅಧ್ಯಯನ ಲ. ನ. ಸ್ವಾಮಿಯವರ ಕೃತಿಯಲ್ಲಿ ದಾಖಲಾಗಿರುವುದರಿಂದ ಪುನರಾವರ್ತನೆಯನ್ನು ತಪ್ಪಿಸುವ ಸಲುವಾಗಿ ಅವನ್ನು ಇಲ್ಲಿ ಪುನಃ ದಾಖಲಿಸಿಲ್ಲ. ಪೌರ್ವಾತ್ಯ ದೇಶಗಳಿಂದ ಇಬ್ನಬಟೂಟ[37] (ಮೊರಕ್ಕೊ ಕ್ರಿ.ಶ 14ನೇ ಶತಮಾನ) – ಹಾಗೂ ಚೀನೀ ಪ್ರವಾಸಿಗರಾದ ವ್ಯಾಂಗ್–ಯುವಾನ್ (ಕ್ರಿ.ಶ 1330–1349), ಮಾ–ಹುವಾನ್ (ಕ್ರಿ.ಶ. 1412–1413), ಚೆಂಗ್–ಹೊ (ಕ್ರಿ.ಶ 1405) ಇನ್ನಿತರರು ಕರ್ನಾಟಕಕ್ಕೆ ಆಗಮಿಸಿದರು. ಇದೇ ಅವಧಿಯಲ್ಲಿ ಯುರೋಪಿನ ಪ್ರವಾಸಿಗರು ಹಾಗೂ ವ್ಯಾಪಾರಿಗಳಾದ ವೆನಿಸ್‌ನ ಗಾಸ್ಪೆರೊ ಬಲ್ಬಿ, ಇಟಲಿಯ ನಿಕೊಲೊ–ಕೊಂತಿ (ಕ್ರಿ.ಶ 1420) ಪರ್ಷಿಯಾದ ಅಬ್ದುಲ್–ರಜಾಕ್ (ಕ್ರಿ.ಶ 1443) ರಷ್ಯಾದ ನಿಕೆಟಿನ್ (1470) ಪೋರ್ಚುಗಲ್ ಪ್ರವಾಸಿಗರಾದ ಡ್ಯುರೆಟ್ ಬಾರ್ಬೊಸಾ (ಕ್ರಿ.ಶ 1514–16) ಡೊಮಿಂಗೊ ಪಯಾಸ್ (ಕ್ರಿ.ಶ 1520) ನ್ಯೂನಿಜ್ (ಕ್ರಿ.ಶ 1535) ವರ್ತೆಮಾ ಮತ್ತು ಡ್ಯೂರೆಟ್ ಮೆನೆಜಸ್, ಇಟಲಿಯ ಪಿಯಾತ್ರೊ–ಡೆಲ್ಲಾ–ವೆಲ್ಲಿ, ಇನ್ನಿತರರು ಕರ್ನಾಟಕದ ಪಶ್ಚಿಮ ಕರಾವಳಿ ಹಾಗೂ ಒಳನಾಡಿಗೆ ಪ್ರವೇಶಿಸಿದರು. ಈ ಪ್ರವಾಸಿಗರು ಪ್ರತ್ಯಕ್ಷದರ್ಶಿಗಳಾಗಿ ಈ ಭಾಗಗಳ ಪ್ರಕೃತಿ, ಜನಜೀವನ, ಆಹಾರ ಮತ್ತು ವಾಣಿಜ್ಯ ಬೆಳೆಗಳು, ವ್ಯಾಪಾರಿ

ಮಾರ್ಗಗಳು, ಮಾರುಕಟ್ಟೆಗಳು, ಸಾರಿಗೆ ಸಂಪರ್ಕ, ವೃತ್ತಿ ಸಂಘಗಳು ಇತ್ಯಾದಿಗಳ ಬಗೆಗೆ ಸ್ಪಷ್ಟ ಚಿತ್ರಣ ನೀಡಿರುತ್ತಾರೆ.

ಇಟಲಿಯ ಪ್ರವಾಸಿಗ ನಿಕೋಲೊ-ಕೊಂತಿ[38] ಕ್ರಿ.ಶ 1420ರಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ನೀಡಿದನು. ಕರ್ನಾಟಕದ ಪಶ್ಚಿಮ ಕರಾವಳಿಯ ಮೂಲಕ ದಕ್ಷಿಣ ಭಾರತಕ್ಕೆ ಬಂದಿರುವ ಇವನು ಮಲಬಾರಿನ ಕರಾವಳಿಯ ಉದ್ದಕ್ಕೂ ಪ್ರವಾಸ ಮಾಡಿದ್ದು, ವಿಜಯನಗರದ ರಾಜಧಾನಿ ಹಂಪಿಗೆ ಭೇಟಿ ನೀಡಿದನು. ಕ್ಯಾಂಬೆಯಿಂದ ಬಾರಕೂರಿಗೆ ಪ್ರಯಾಣ ಮಾಡಿದ ಇವನು, ಈ ಭಾಗದ ಸತಿಪದ್ಧತಿಯ ಆಚರಣೆಯನ್ನು ವರ್ಣಿಸಿದ್ದಾನೆ. ಬಾರಕೂರಿನ ಬಂದರಿನಲ್ಲಿ ಶುಂಠಿ ಮತ್ತು ನೀಲಿ ವ್ಯಾಪಾರ ಪ್ರಮುಖವಾಗಿದ್ದು; ಶುಂಠಿ ಕುರುಚಲು ಗಿಡದ ಬೇರಿನಂತಿದ್ದು ಹಾಗೂ ಎರಡು ಮೊಳ ಎತ್ತರ ಬೆಳೆಯುತ್ತದೆ ಎಂದಿದ್ದಾನೆ. ಈ ಭಾಗದ ಪ್ರಾಕೃತಿಕ ವರ್ಣನೆ, ಪ್ರಮುಖ ಆಹಾರ ಮತ್ತು ವಾಣಿಜ್ಯ ಬೆಳೆಗಳು, ಸಾಮಾಜಿಕ ಜೀವನ ಹಾಗೂ ವಾಣಿಜ್ಯ ಚಟುವಟಿಕೆಗಳ ಬಗೆಗೆ ನಿಕೋಲೊ-ಕೊಂತಿಯ ಹೇಳಿಕೆಗಳು ಪ್ರಮುಖವಾಗಿವೆ.

ಅಬ್ದುಲ್ ರಜಾಕ್[39] ಪರ್ಶಿಯಾದ ರಾಯಭಾರಿಯಾಗಿ ಕ್ರಿ.ಶ 1442ರಲ್ಲಿ ಪಶ್ಚಿಮ ಕರಾವಳಿಯ ಕಲ್ಲಿಕೋಟೆಯ ಮೂಲಕ ಭಾರತಕ್ಕೆ ಪ್ರವೇಶಿಸಿ, ಮಂಗಳೂರು ಹೊನ್ನಾವರ ಮಾರ್ಗವಾಗಿ ಪ್ರವಾಸ ಕೈಗೊಂಡು, ವಿಜಯನಗರದ ರಾಜಧಾನಿ ಹಂಪಿಗೆ ಭೇಟಿ ನೀಡಿದನು. ತನ್ನ ಬರವಣಿಗೆಯಲ್ಲಿ ಹಂಪೆಯ ರಾಜವೈಭವ, ವಾಣಿಜ್ಯ ಚಟುವಟಿಕೆಗಳು ಮಹಾನವಮಿ ಆಚರಣೆ ಇತ್ಯಾದಿ ವರ್ಣನೆಗಳು ಸಮಕಾಲೀನ ವಿಜಯನಗರದ ಇತಿಹಾಸ ಮತ್ತು ಸಾಂಸ್ಕೃತಿಕ ವೈಭವವನ್ನು ತಿಳಿಸುತ್ತಾನೆ. ಮಂಗಳೂರಿನಿಂದ ಆಗುಂಬೆ ಘಾಟಿ ಮುಖಾಂತರ ಬಿದನೂರಿಗೆ (ನಗರ) ಪ್ರಯಾಣ ಬೆಳೆಸಿದ ಅಬ್ದುಲ್ ರಜಾಕ್, ಈ ಮಾರ್ಗ ಘಾಟಿ ಪ್ರದೇಶವಾಗಿತ್ತೆಂದು; ಮಾರ್ಗದ ಉದ್ದಕ್ಕೂ ಗಗನಚುಂಬಿ ಪರ್ವತಗಳು ಹಾಗೂ ದಟ್ಟವಾದ ಅರಣ್ಯಗಳಿಂದ ಕೂಡಿದ್ದು, ಮಳೆ ಮತ್ತು ಸೂರ್ಯನ ರಶ್ಮಿಯೂ ನೆಲಕ್ಕೆ ಬೀಳುವುದಿಲ್ಲ ಎಂದು ತಿಳಿಸುತ್ತಾನೆ.

ರಷ್ಯಾದ ಪ್ರವಾಸಿಗ ನಿಕಿತಿನ್[40] ಕ್ರಿ.ಶ 1468ರಿಂದ 1475ರವರೆಗೆ ಭಾರತ ಪ್ರವಾಸ ಕೈಗೊಂಡನು. ಪಶ್ಚಿಮ ಕರಾವಳಿಯ ಚವೂಲ್ ಮೂಲಕ ಪ್ರವೇಶಿಸಿ ಬೀದರ್ ಮೂಲಕ ಒಳನಾಡಿಗೆ ಬಂದಿರುವ ನಿಕಿತನ್ ಬಹಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳಿಗೆ ಭೇಟಿ ನೀಡಿದನು. ಕರಾವಳಿಯ ಮಾರುಕಟ್ಟೆಗಳಲ್ಲಿ ಮೆಣಸು, ಶುಂಠಿ, ಮಸ್ಕತಿ ಅಕ್ಕಿ, ಲವಂಗ,

ದಾಲ್ಚಿನ್ನಿ, ಸುವಾಸನೆಯ ಔಷಧೀಯ ಬೇರುಗಳು, ಕಾಚು, ವಿಧ ವಿಧವಾದ ಸಂಭಾರ ವಸ್ತುಗಳು ದೊರೆಯುತ್ತಿದ್ದುದನ್ನು, ರೇಷ್ಮೆ, ಶ್ರೀಗಂಧ ಮತ್ತು ವಿವಿಧ ಹರಳುಗಳು ಎಲ್ಲವೂ ಇಲ್ಲಿ ಅಗ್ಗದ ಬೆಲೆಯಲ್ಲಿ ದೊರೆಯುತ್ತವೆ ಎಂದು ದಾಖಲಿಸುತ್ತಾನೆ. ನಿಕೆಟಿನ್ ತಿಳಿಸುವ ಬಹುತೇಕ ಈ ವಸ್ತುಗಳು ಮಲೆನಾಡಿನ ಬೆಳೆಗಳಾಗಿದ್ದವು.

ವರ್ತೆಮಾ ಪೋರ್ಚುಗಲ್ ದೇಶದ ವ್ಯಾಪಾರಿಯಾಗಿದ್ದು, ಕ್ರಿ.ಶ 1503ರಿಂದ ಕ್ರಿ.ಶ 1508ರ ಅವಧಿಯಲ್ಲಿ ಪಶ್ಚಿಮ ಕರಾವಳಿಗೆ ಭೇಟಿ ನೀಡಿದ್ದು, ಕರಾವಳಿ ಕರ್ನಾಟಕ ಹಾಗೂ ಒಳನಾಡಿನ ಪ್ರಾಕೃತಿಕ ವರ್ಣನೆ ಹಾಗೂ ವಾಣಿಜ್ಯ ಮಹಿವಾಟುಗಳನ್ನು ವಿವರಿಸುತ್ತಾನೆ. ವರ್ತೆಮಾ, ಸುಮಾರು 60 ಹಡಗುಗಳು ಅಕ್ಕಿಯೊಂದಿಗೆ ಹೊರಟು ಮಂಗಳೂರು ಬಂದರಿನಲ್ಲಿ ಏಡೆನ್ ಬಂದಾಗ ನೌಕಾಯಾನಕ್ಕೆ ಹೊರಡಲು ಸಿದ್ಧವಾಗಿದ್ದನ್ನು ವಿವರಿಸಿದ್ದಾನೆ.[41] ಗ್ಯಾಸ್ಪರೊ ಬಲ್ಬಿ, ಇವರು ವೆನಿಸ್‌ನ ಆಭರಣದ ವ್ಯಾಪಾರಿಯಾಗಿದ್ದು, ಕ್ರಿ.ಶ. 16ನೇ ಶತಮಾನದಲ್ಲಿ ಕರ್ನಾಟಕದ ಪಶ್ಚಿಮ ಕರಾವಳಿಗೆ ಭೇಟಿ ನೀಡಿದ್ದನು. ಇವನ ಬರವಣಿಗೆಗಳು ಸಮಕಾಲೀನ ಪೋರ್ಚುಗೀಸ್ ಮತ್ತು ಪಶ್ಚಿಮ ಕರಾವಳಿಯಲ್ಲಿರುವ ಅಳತೆ ಮತ್ತು ತೂಕಗಳನ್ನು ವಿವರಿಸುತ್ತವೆ. ಈತ ಮಲಬಾರಿನ ಜನರ ಸಾಮಾಜಿಕ ಆಚರಣೆ ಮತ್ತು ಸಂಪ್ರದಾಯಗಳನ್ನು ಕುರಿತು ವಿವರಿಸುತ್ತಾನೆ.

ಪ್ರವಾಸಿ ಬಾರ್ಬೋಸ ಕ್ರಿ.ಶ 1514 ಪೋರ್ಚುಗಲ್‌ನಿಂದ ಹೊರಟು ಕ್ರಿ.ಶ 1516ರ ವೇಳೆಗೆ ವಿಜಯನಗರದ ರಾಜಧಾನಿಗೆ ಭೇಟಿ ನೀಡಿದನು. ಅಂದಿನ ಕರ್ನಾಟಕದ ಕೃಷಿ ಚಟುವಟಿಕೆಗಳು ವಿವಿಧ ಬೆಳೆಗಳು, ಸಾಗುವಳಿ ಪದ್ಧತಿ, ಮಣ್ಣಿನ ಗುಣ, ರೈತರ ಜೀವನ ಮಟ್ಟ, ಕೃಷಿ ಉತ್ಪನ್ನ ಮಾರುಕಟ್ಟೆಗಳು ಮತ್ತು ವ್ಯಾಪಾರೀ ಕೇಂದ್ರಗಳನ್ನು ವಿವರಿಸಿದ್ದಾನೆ. ಹೊನ್ನಾವರದಲ್ಲಿ ಅಕ್ಕಿ ವ್ಯಾಪಾರ, ತೆಂಗಿನಕಾಯಿ, ಎಣ್ಣೆ, ಜಾಗ್ರಾ ಮತ್ತು ತಾಳೆಯ ಮರದ ಹೆಂಡ ದೊರೆಯುತ್ತಿದ್ದುದ್ದನು ಉಲ್ಲೇಖಿಸುತ್ತಾನೆ. ಅಂದು ಭಟ್ಕಳ ಭಾರೀ ವಾಣಿಜ್ಯ ಕೇಂದ್ರವಾಗಿದ್ದು ಶ್ರೀಮಂತಿಕೆಯ ಊರು ಆಗಿತ್ತು ಎಂದು ತಿಳಿಸುತ್ತಾನೆ ಮತ್ತು ಅರೇಬಿಯಾದ ಮೂರರಿಂದ ಪಡೆದ ಉತ್ತಮ ಗುಣಮಟ್ಟದ ಮರದ 'ಮೈರೋಬಲಾಮ್' ಬಗ್ಗೆ ಆತನ ಬರವಣಿಗೆಯಲ್ಲಿ ಉಲ್ಲೇಖವಿದೆ. ಅರಬ್ಬರಿಂದ ಕುದುರೆಗಳನ್ನು ಕೊಂಡುತಂದು ಭಟ್ಕಳದ ಮುಖಾಂತರ ವಿಜಯನಗರ ಸಾಮ್ರಾಜ್ಯಕ್ಕೆ ಸರಬರಾಜು ಮಾಡುತ್ತಿದ್ದರು ಎಂದು ತಿಳಿಸುತ್ತಾನೆ.[42] ಇಲ್ಲಿಂದ ಬಿಳಿ ಅಕ್ಕಿ, ಸಕ್ಕರೆ, ಕಬ್ಬಿಣ ಮತ್ತು ಔಷಧಿಗಳು ಒರ್ಮೋಜ್‌ಗೆ

ರವಾನೆಯಾಗುತ್ತದೆ. ಇಲ್ಲಿಯ ಜನರಿಗೆ ಸಕ್ಕರೆಯನ್ನು ಅಚ್ಚು ಮಾಡಲು ಬರುವುದಿಲ್ಲ ಎಂಬ ಮಾಹಿತಿಯನ್ನು ತಿಳಿಸುತ್ತಾನೆ. ಬೈಂದೂರಿನಲ್ಲಿ ಉತ್ತಮ ಭತ್ತ ಬೆಳೆಯುತ್ತಿದ್ದು; ಕೃಷಿಗಾಗಿ ಎತ್ತು ಮತ್ತು ಎಮ್ಮೆಗಳನ್ನು ಬಳಸುತ್ತಿದ್ದರು. ಬಿತ್ತನೆಯಲ್ಲಿ ಕೂರಿಗೆಯನ್ನು ಖುಷ್ಕಿ ಜಮೀನಿನಲ್ಲಿ ಬಳಸುತ್ತಿದ್ದರು. ನಾಟಿ ಪದ್ಧತಿಯ ಮೂಲಕ ನೀರಾವರಿ ಭೂಮಿಯಲ್ಲಿ ವರ್ಷಕ್ಕೆ ಎರಡು ಬೆಳೆ ಬೆಳೆಯುತ್ತಿದ್ದರು. ತುಳುನಾಡಿನಲ್ಲಿ ನಾಲ್ಕು ತರಹದ ಭತ್ತ ಬೆಳೆಯಲಾಗುತ್ತಿದ್ದು. ಅವುಗಳೆಂದರೆ; ಗಿರಜತ್, ಜಾನಿಬಜಾರ್, ಕಮಗರ್ ಮತ್ತು ಪಚರಿ, ಇವುಗಳಿಗೆ ಪ್ರತ್ಯೇಕ ಬೆಲೆಯಿದ್ದು, ಪ್ರತ್ಯೇಕ ರುಚಿಯನ್ನು ಹೊಂದಿದ್ದವು. ಕುಸಬಿ (ಕುಚ್ಚಲು) ಅಕ್ಕಿಯನ್ನು ದಿನ ಬಳಕೆಗೆ ಉಪಯೋಗಿಸ ಲಾಗುತ್ತಿತ್ತು. ಮಂಗಳೂರಿನ ಭಾಗದಲ್ಲಿ ಹೆಚ್ಚಾಗಿ ಕಂದು ಬಣ್ಣದ ಕುಚ್ಚಲು ಅಕ್ಕಿ ಬಳಸುತ್ತಿದ್ದು, ಅದು ಅಗ್ಗವಾಗಿದ್ದು ಬಿಳಿ ಅಕ್ಕಿಗಿಂತ ಆರೋಗ್ಯಕರವಾದುದು. ಬಾರಕೂರಿನಲ್ಲಿ ಭತ್ತದ ಹುಲ್ಲಿನ ಮೂಡೆ ತಯಾರಿಸುತ್ತಿದ್ದುದನ್ನು ಬಾರ್ಬೋಸ ಗುರುತಿಸಿದ್ದಾನೆ. ಕುಂಬಳ (ಕುಂಬ್ಳೆ) ಪಶ್ಚಿಮ ಕರಾವಳಿಯ ಬಂದರು ಪಟ್ಟಣವಾಗಿದ್ದು, ತೆಂಗಿನಕಾಯಿ, ಕಪ್ಪು ಅಕ್ಕಿ ಇಲ್ಲಿಂದ ಮಲಬಾರ್ ಮತ್ತು ಮಾಲ್ಡೀವ್ಸ್ ಹೋಗುತ್ತಿತ್ತು. ಮಾಲ್ಡೀವ್ಸಿನಿಂದ ತೆಂಗಿನ ನಾರಿನ ಹಗ್ಗಗಳನ್ನು ತರಿಸಿಕೊಳ್ಳಲಾಗುತ್ತಿತ್ತು.

ಡೊಮಿಂಗೊ ಫೇಯಿಸ್[43] ವರದಿಯಿಂದ ಕೃಷ್ಣದೇವರಾಯನ ಕಾಲದ ವಿಜಯನಗರ ವರ್ಣನೆ ತಿಳಿಯುವುದಲ್ಲದೆ ಇಲ್ಲಿ ಕೋಟೆಗಳ ರಚನೆ, ರಾಯಚೂರು ಯುದ್ಧ ಇತ್ಯಾದಿಗಳ ವಿವರ ತಿಳಿಸುತ್ತದೆ. ಭೂಮಿ ವರ್ಗೀಕರಣ ಅವುಗಳ ಆಧಾರದ ಮೇಲೆ ಭತ್ತ ಮತ್ತು ಧಾನ್ಯಗಳ ಬೇಸಾಯ ಗೇಣಿ ಕ್ರಮ ಇದ್ದಿತೆಂದು ತಿಳಿಸಿದ್ದಾರೆ. ಇಷ್ಟಲ್ಲದೆ ಮಂಗಳೂರಿನ ಇಗರ್ಜಿಗಳ ವ್ಯವಹಾರ ತಿಳಿಸಿದ್ದಾನೆ. ಅಂದರೆ ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಹಾಗೂ ಸಾಮಾಜಿಕವಾಗಿ ವ್ಯವಹರಿಸುತ್ತಿದ್ದ ಬಗೆ.

ಸೀಜರ್ ಫ್ರೆಡರಿಕ್[44] ವರದಿಯಲ್ಲಿ ಕ್ರಿ.ಶ. 1563 ತುಳುನಾಡಿನಲ್ಲಿರುವ ಪೋರ್ಚುಗೀಸರ ವ್ಯಾಪಾರ ಕೇಂದ್ರಗಳಾದ ಹೊನ್ನಾವರ, ಬಸ್ರೂರು, ಮಂಗಳೂರುಗಳಲ್ಲಿ ನಡೆಯುವ ವ್ಯಾಪಾರ, ಚೆನ್ನಬೈರಾದೇವಿಯ ರಾಜ್ಯವಿಸ್ತಾರ ಮತ್ತು ವಿಜಯನಗರ ಸಾಮ್ರಾಜ್ಯದ ಸ್ಥಿತಿ ತಿಳಿಯುತ್ತದೆ. ಕ್ರಿ.ಶ. 1567ರಲ್ಲಿ ಸೀಸರ್ ಫೆಡ್ರೀಕ್, ಮಂಗಳೂರಿನಲ್ಲಿ ಕಳಪೆ ವ್ಯಾಪಾರವನ್ನು ಗಮನಿಸಿದ್ದನು, ಉಳ್ಳಾಲದ ಚೌಟ ಮುಖಂಡನೊಂದಿಗೆ ಪೋರ್ಚುಗೀಸರ ಘರ್ಷಣೆಯ ಸಮಯದಲ್ಲಿ ಲೂಟಿ ಮತ್ತು ಕಳ್ಳತನದಿಂದಾಗಿ ಇದು ಸಂಭವಿಸಿತು. ಅವರು ಬಸ್ರೂರಿನಲ್ಲಿ ನಡೆಯುತ್ತಿದ್ದ

ಬಿರುಸಾದ ಅಕ್ಕಿಯ ವ್ಯಾಪಾರವನ್ನು ಗಮನಿಸಿದರು. ಈ ಪ್ರದೇಶಕ್ಕೆ ಹೆಚ್ಚಿನ ಪ್ರಮಾಣದಲ್ಲಿ ಕಾಶ್ಮೀರದಿಂದ ಕೇಸರಿ ಬರುತ್ತಿತ್ತು, ಡೆಲ್ಲಾವೆಲ್ಲಿಯ ಬರವಣಿಗೆಗಳಲ್ಲಿ ಇದನ್ನು ಗಮನಿಸಬಹುದು.[45]

ಡೊಂ ಡ್ಯುರಾಟ್ ಮೆನೆಜಸ್ ಮತ್ತು ಲಿನ್‌ಕೊಸ್ಟನ್[46] ವರದಿ ತುಳುನಾಡಿನ ರಾಜಕೀಯ ಆರ್ಥಿಕ ಸ್ಥಿತಿ ತಿಳಿಯಲು ಸಹಾಯಕವಾಗಿವೆ. ಲಿನ್‌ಕೊಸ್ಟನ್ ವರದಿಯಲ್ಲಿ ಪೋರ್ಚುಗೀಸರ ವ್ಯಾಪಾರ ಇಳಿಮುಖವಾದುದು, ಭೈರಾದೇವಿಯ ವ್ಯಾಪಾರ ಇತ್ಯಾದಿಗಳನ್ನು ತಿಳಿಸಿದ್ದಾನೆ. ಡಚ್ ಪ್ರವಾಸಿಗರಾದಲಿನ್ಸೆಚೆಂಟನ್,[47] ಕ್ರಿ.ಶ 1583ರಲ್ಲಿ ಭಾರತದ ಪಶ್ಚಿಮ ಕರಾವಳಿಯ ಹೊನ್ನಾವರ ಮತ್ತು ಭಟ್ಕಳಗಳಿಗೆ ಭೇಟಿ ನೀಡಿದನು. ಇಲ್ಲಿಯ ಮಾರುಕಟ್ಟೆಯಲ್ಲಿ ಮೆಣಸಿನ ಬೇಡಿಕೆ ಹೆಚ್ಚಾಗಿರುವುದನ್ನು ಪ್ರಸ್ತಾಪಿಸಿದ್ದು, ಮೆಣಸಿನ ಕೃಷಿ ಚಟುವಟಿಕೆಗಳ ಬಗ್ಗೆಯೂ ವಿವರಿಸುತ್ತಾನೆ. ಪೋರ್ಚುಗೀಸರ ವ್ಯಾಪಾರ ಇಳಿಮುಖವಾಗಿ ಅವರು ನಡೆಸುತ್ತಿರುವ ಅನೀತಿ ವ್ಯಾಪಾರಗಳು ಮತ್ತು ಸಾಗರೋತ್ತರ ಪ್ರದೇಶ ಮತ್ತು ತುಳುನಾಡಿನ ಬಂದರುಗಳಲ್ಲಿ ನಡೆಯುವ ವ್ಯಾಪಾರದ ಬಗ್ಗೆ ಪ್ರೆಂಚ್ ಪ್ರವಾಸಿ ಪೈರಾಡ್ಡ್[48] ತಿಳಿಸಿದ್ದಾನೆ. ಪೋರ್ಚುಗೀಸ್ ಪ್ರವಾಸಿ ಟೊಂ ಪೀರೆಸ್ (16ನೇ ಶತಮಾನದ ಪೂರ್ವಾರ್ಧ), ಇವನ ಪೌರ್ವಾತ್ಯದ ಪ್ರವಾಸ ಕಥನಸಾರ ಬರೆಯಲು ಆರಂಭಿಸಿದ್ದು ಮಲಕ್ಕದಲ್ಲಿದ್ದಾಗ, ಮುಗಿಸಿದ್ದು ಅಲ್ಲಿಂದ ಇಂಡಿಯಾಕ್ಕೆ ಬಂದ ಮೇಲೆ. ಚೀನಾಕ್ಕೆ ಹೋದಾಗಲೂ ಆತನು ಅದನ್ನು ಬರೆಯುತ್ತಲೇ ಇದ್ದ. ಪಿರೆಸ್‌ನ ಸುಮಾ-ಓರಿಯಂಟಲ್ ಸುಮಾರು 4 ಶತಮಾನಗಳ ಕಾಲ ಕಣ್ಮರೆಯಾಗಿದ್ದು ಇತ್ತೀಚೆಗೆ ಅಂದರೆ 1937ರಲ್ಲಿ ಬೆಳಕಿಗೆ ಬಂದಿದೆ. ಇದರಿಂದ ಪೌರ್ವಾತ್ಯ ದೇಶಗಳನ್ನು ಕುರಿತು ಬರೆದ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದ ಗ್ರಂಥವೊಂದು ದೊರಕಿದಂತಾಯಿತು. ಟೊಂ ಪಿರೆಸ್ ಪೋರ್ಚುಗೀಸ್ ವ್ಯಾಪಾರಿಯಾಗಿ ಅದರಲ್ಲೂ ಒಬ್ಬ ಗ್ರಂದಿಗೆ ವ್ಯಾಪಾರಿಯಾಗಿ ಇಂಡಿಯಾಕ್ಕೆ ಬರುವಾಗ 30.000 ರೆಯ್ಸ್ (ಪೋರ್ಚುಗೀಸ್ ನಾಣ್ಯ) ಹಣ ಮತ್ತು 20 ಕ್ವಿಂಟಾಲ್ ತೂಕದಷ್ಟು ಔಷಧಿಗಳನ್ನು ತೆಗೆದುಕೊಂಡು ಬಂದನು. 1511 ರಲ್ಲಿ ಲಿಸ್ಬನ್‌ನಿಂದ ಹೊರಟ ಹಡಗೊಂದರಲ್ಲಿ ಪೀರೆಸ್ ಕಣ್ಣನೂರಿಗೆ ಸೆಪ್ಟೆಂಬರ್‌ನಲ್ಲಿ ಬಂದು ಅಲ್ಲಿ ಗ್ರಂದಿಗೆ ವ್ಯಾಪಾರವನ್ನು ಆರಂಭಿಸಿದ. ಅಲ್ಲಿಂದ ಕೊಚ್ಚಿಗೆ ಹೋದ. ಇವನು ತಿಳಿಸಿರುವಂತೆ ಡೆಕ್ಕನ್‌ನಲ್ಲಿ ಅಕ್ಕಿ ಹೇರಳವಾಗಿ ದೊರೆಯುತ್ತದೆ. ಸ್ವಲ್ಪ ಗೋಧಿ ಮತ್ತು ಮಾಂಸ ಸಹ ಬಳಕೆಯಾಗುತ್ತವೆ. ವೀಳೆಯದೆಲೆ ಮತ್ತು ಅಡಕೆ ಬಹಳ ಹೆಚ್ಚು ಪೂರೈಕೆಯಾಗುತ್ತದೆ. ಅಲ್ಲದೆ ಗೋವಾದ ಅಡಿಕೆ ವೀಳೆಯದೆಲೆಯಂತೂ ಬಹಳ ಉತ್ತಮವಾದದ್ದು. ಇದನ್ನು

'ಅವೆಲನಾ ಇಂಡಿಯಾ' ಎಂದು ಕರೆದಿದ್ದಾನೆ. ಇಲ್ಲಿಗೆ ಒಳನಾಡಿನಿಂದ ಹೇರೆತ್ತುಗಳ ತಂಡಗಳ ಮೇಲೆ ವ್ಯಾಪಾರದ ವಸ್ತುಗಳನ್ನು ಹೇರಿಕೊಂಡು ಬರುತ್ತಾನೆ. ಗೋವಾದಿಂದ ಹೇರಳವಾಗಿ ಅಕ್ಕಿ ರವಾನೆಯಾಗುತ್ತಿತ್ತು. ಗೋವೆಯನ್ನು ಸುಲ್ತಾನರಿಂದ ಗೆದ್ದುಕೊಂಡ ಮೇಲೆ ನರಸಿಂಗ ತನಗೆ ಬೇಕಾದ ಕುದುರೆಗಳನ್ನು ಭಟ್ಕಲ್ ಬಂದರಿನ ಮೂಲಕ ತರಿಸಿಕೊಳ್ಳುತ್ತಾನೆ.[49] ಟೊಂ ಪಿರೆಸ್ ತಿಳಿಸುವಂತೆ ಪೋರ್ಚುಗೀಸರು ಮೊದಲು ಕಾಲಿಟ್ಟದ್ದು ಮಲಕ್ಕಾಕ್ಕೆ. ಇಲ್ಲಿ ಈಗಾಗಲೇ ಅನೇಕ ದೇಶದ ವರ್ತಕರು ನೆಲೆಸಿದ್ದು ವ್ಯಾಪಾರ ಮಾಡುತ್ತಿದ್ದರು. ಕೈರೊ, ಮೆಕ್ಕಾ ಮುಂತಾದ ದೇಶಗಳ ಮೂರರು, ಪಾರ್ಸಿಗಳು ತುರುಕರು, ಆರ್ಮೇನಿಯಾದ ಕ್ರೈಸ್ತರು, ಗುಜರಾತಿಗಳು, ಚಾಲ್, ದಭೋಲ್, ಗೋವಾ ಡೆಕನಿಯವರು, ಮಲಬಾರಿಗಳು, ಕಳಿಂಗರು, ಒರಿಸ್ಸಾ, ಸಿಲೋನ್, ಬಂಗಾಳ ಕಡೆಗಳವರು – ಹೀಗೆ ನಾನಾ ದೇಶದ ವರ್ತಕರು ಮಲಕ್ಕಾದಲ್ಲಿ ವ್ಯಾಪಾರ ನಡೆಸುತ್ತಿದ್ದಾರೆ. ಕೆಲವು ದ್ವೀಪಗಳಿಂದ ಅಕ್ಕಿಯನ್ನೂ ಗುಲಾಮರನ್ನೂ ತಂದು ಇಲ್ಲಿ ಮಾರಾಟ ಮಾಡುತ್ತಿದ್ದರು. ವರ್ತಕರುಗಳು 'ಜಂಕ್‌ಗಳು' (ಚೀನಾದ ಹಡಗುಗಳು) 'ಪಂಗಜಾವಾಸ್' (ಫತೆಮರಿ ಇರಬಹುದು) ಮತ್ತು ಹಡಗುಗಳಲ್ಲಿ ತಮ್ಮ ಸರಕುಗಳನ್ನು ಹೇರಿಕೊಂಡು ಬರುತ್ತಾರೆ. ಇಷ್ಟೊಂದು ಜನಾಂಗಗಳು ಇಲ್ಲಿ ವ್ಯಾಪಾರ ನಡೆಸುತ್ತಿದ್ದ ಕಾರಣ ಮಲಕ್ಕಾ ಬಂದರಿನಲ್ಲಿ 84 ಭಾಷೆಗಳನ್ನು ಕೇಳಬಹುದು.[50]

ಪಿಯೆತ್ರೊ ಡೆಲ್ಲಾವೆಲ್ಲೆ ಇಟಲಿಯ ಪ್ರವಾಸಿಗನಾಗಿದ್ದು ಕ್ರಿ.ಶ 1622ರಲ್ಲಿ ಕೆಳದಿ ಸಂಸ್ಥಾನಕ್ಕೆ ಭೇಟಿ ನೀಡಿದನು. ಮಲೆನಾಡಿನ ಹೃದಯ ಭಾಗಗಳಾದ ಸಾಗರ, ಕೆಳದಿ, ಇಕ್ಕೇರಿ ಇನ್ನಿತರ ಪ್ರದೇಶಗಳಿಗೆ ಭೇಟಿ ನೀಡಿದನು, ಅಂದಿನ ಮಲೆನಾಡಿನ ಕೃಷಿಪದ್ಧತಿ ಭೂಹಿಡುವಳಿ, ರೈತರ ಸ್ಥಿತಿಗತಿಗಳು ಹಾಗೂ ಮುಖ್ಯವಾಗಿ ಅಕ್ಕಿ ಮತ್ತು ಮೆಣಸಿನ ಬೆಲೆಗಳು, ಕೃಷಿ ಉತ್ಪನ್ನ ಮಾರುಕಟ್ಟೆಗಳು, ದರಗಳು ಮತ್ತು ರಸ್ತೆ ಮತ್ತು ಹೆದ್ದಾರಿ ಸಂಪರ್ಕಗಳ ಕುರಿತು ವಿವರಿಸುತ್ತಾನೆ. ಇದೇ ರೀತಿಯ ಮಾಹಿತಿಗಳನ್ನು ಪೋರ್ಚುಗೀಸ್ ದಾಖಲೆಗಳು ದೃಢಪಡಿಸಿದ್ದು, ಕರಾವಳಿ ಕರ್ನಾಟಕ ಮತ್ತು ಒಳನಾಡಿನ ಮಾರುಕಟ್ಟೆಗಳಲ್ಲಿ ಅಕ್ಕಿ ಮತ್ತು ಮೆಣಸಿನ ದರಗಳನ್ನು ತಿಳಿಸುತ್ತವೆ. ಈ ಭಾಗದ ಕೃಷಿ ಪದ್ಧತಿ ಮತ್ತು ಭಾರತೀಯ ಮಾರುಕಟ್ಟೆಯಲ್ಲಿ ಯೂರೋಪಿಯನ್ನರಲ್ಲಿಯೇ ಪೈಪೋಟಿಗಳು ಹೆಚ್ಚಾಗಿರುವುದನ್ನು ತಿಳಿಸುತ್ತಾರೆ. ಪಿಯತ್ರೊ ಡೆಲ್ಲಾವಲ್ಲೆ ತಿಳಿಸುವಂತೆ ಪೋರ್ಚುಗೀಸರು ಮೆಣಸನ್ನು ಕೊಂಡುಕೊಳ್ಳುವಾಗ ಅಳತೆ ಮಾಡಿಕೊಳ್ಳುತ್ತಿದ್ದರು. ಅದು ಗೇರುಸೊಪ್ಪದಿಂದ ಕೊಂಚ ದೂರದಲ್ಲಿ ಮರಗಳ ಮಧ್ಯೆ ಮೇಲ್ಛಾವಣಿ ಹಾಕಿದ ಒಂದು ಸಾಮಾನ್ಯ ಮನೆ. ಇವನು ತಿಳಿಸಿರುವಂತೆ ಈ ಪ್ರದೇಶದಲ್ಲಿ

ಬೆಳೆಯುವಷ್ಟು ಕಾಳುಮೆಣಸು ಬೇರೆಲ್ಲಿಯೂ ಬೆಳೆಯುವುದಿಲ್ಲ. ಈ ಕಾರಣದಿಂದಲೇ ಪೋರ್ಚುಗೀಸರು ಗೇರುಸೊಪ್ಪಾ ರಾಣಿಯನ್ನು 'ಮೆಣಸಿನ ರಾಣಿ' ಅಂದರೆ 'ರಯ್ಯಾದ ಪಿಮಂತಾ' ಎಂದು ಕರೆಯುತ್ತಿದ್ದರು.[51]

ಪೀಟರ್ ಮಂಡಿ[52] (1636-37), ತಿಳಿಸುವಂತೆ ಇಂಗ್ಲಿಷರು ಭಟ್ಕಳದಲ್ಲಿ ವ್ಯಾಪಾರ ನಡೆಸುತ್ತಿದ್ದ ಬಗ್ಗೆ, ಅಲ್ಲಿನ ಬಂದರಿನ ರಚನೆ, ಕೆಳದಿ ವೀರಭದ್ರ ಮತ್ತು ಇಂಗ್ಲೀಷರೊಳಗೆ ನಡೆಸಿದ ಪತ್ರವ್ಯವಹಾರ ಪಶ್ಚಿಮ ಘಟ್ಟದ ವರ್ಣನೆ ಮತ್ತು ಅದರ ಆರ್ಥಿಕ ಪ್ರಾಮುಖ್ಯ, ಭಟ್ಕಳದ ವರ್ಣನೆ, ಮಂಗಳೂರು, ಬಸ್ರೂರಿನಲ್ಲಿ ನಡೆದ ವ್ಯಾಪಾರದ ಕ್ರಮ ಅದರಲ್ಲಿ ಬಳಕೆಯಾಗುವ ಅಳತೆ ಮಾಪಕಗಳ ವಿವರಗಳನ್ನು ತನ್ನ ವರದಿಯಲ್ಲಿ ತಿಳಿದು ವಿವರವಾಗಿ ದಾಖಲಿಸಿದ್ದಾನೆ. ಕ್ರಿ.ಶ. 1666ರಲ್ಲಿ ಬಂದ ಫ್ರೆಂಚ್ ಪ್ರವಾಸಿಯೊಬ್ಬ (ಥೆವನಾರ್) ಉತ್ತರ ಕನ್ನಡದಲ್ಲಿ ಆದಿಲ್ ಶಾಹಿ ಪೋರ್ಚುಗೀಸರ ಸ್ಥಿತಿ, ತುಳುನಾಡಿನಲ್ಲಿ ಬಂಗ ಮತ್ತು ಚೌಟರ ವಿಚಾರ ತಿಳಿಸಿದ್ದಾನೆ.

ಹೆಮಿಲ್ಟನ್, ಪಿಯರ್‌ಸನ್, ಬುಕಾನನ್ ಇವರ ವರದಿಗಳು ತುಳುನಾಡಿನ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಇತಿಹಾಸ ತಿಳಿಯಲು ಸಹಾಯಕವಾಗುತ್ತವೆ. ಹೆಮಿಲ್ಟನ್ ರಾಜಕೀಯ ಸ್ಥಿತಿಯೊಂದಿಗೆ ಕನ್ನಡನಾಡಿನಲ್ಲಿ ಕ್ರೈಸ್ತಮತದ ಸ್ಥಿತಿಯನ್ನು ತಿಳಿಸಿದ್ದಾನೆ. ಪಿಯರ್‌ಸನ್ ಭಟ್ಕಳದ ಬಂದರು ರಚನೆ ಹೊನ್ನಾವರದ ರೇವು ಮತ್ತು ಇಲ್ಲಿನ ಕರಿಮೆಣಸಿನ ವ್ಯಾಪಾರ ತಿಳಿಸಿದ್ದು ಇತಿಹಾಸ ದೃಷ್ಟಿಯಲ್ಲಿ ಪ್ರಮುಖರಾದವರು.[53]

ನಮಗೆ ವಿದೇಶ ಬರಹಗಾರರ ಬರವಣಿಗೆಗಳಲ್ಲಿ ಮತ್ತು ಶಾಸನಗಳಲ್ಲಿ ಉಲ್ಲೇಖವಾಗಿರುವ ಆಂತರಿಕ ಮತ್ತು ವಿದೇಶಿ ವ್ಯಾಪಾರದ ಮಾಹಿತಿಗಳು ಖಚಿತವಾಗಿ ದೊರೆಯುವ ಹಿನ್ನಲೆಯಲ್ಲಿ ಈ ಪ್ರದೇಶವು ಪ್ರಾಚೀನಕಾಲದಿಂದಲೂ ಕೃಷಿ ಸಂಬಂಧಿ ವ್ಯಾಪಾರದಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ.

## 2.9 ಭಂಡಸಾಲೆಗಳ ಪಾತ್ರ

ವ್ಯಾಪಾರಕ್ಕೆ ಸಂಬಂಧಿಸಿದಂತೆ ಒಳನಾಡಿನ ಪ್ರದೇಶಗಳಿಂದ ಬರುವ ಸರಕು ಸಾಮಗ್ರಿಗಳಿಗೆ ಕೆಲವೊಮ್ಮೆ ಸರಿಯಾದ ಕ್ರಯ ಸಿಗದಿದ್ದಾಗ, ಭಂಡಸಾಲೆಗಳಲ್ಲಿ ಶೇಖರಣೆ ಯಾಗುತ್ತಿದ್ದವು. ಕೆಲವೊಮ್ಮೆ ಕೃಷಿಕರು ನೇರವಾಗಿ ಭಂಡಸಾಲೆಗಳಿಗೆ ಸರಕು ಸಾಮಗ್ರಿಗಳನ್ನು

ಒಯ್ಯುತ್ತಿದ್ದರು. ಇದರಿಂದ ಒಳನಾಡಿನ ವ್ಯಾಪಾರದಲ್ಲಿ, ಭಂಡಸಾಲೆಗಳ ಪಾತ್ರ ಪ್ರಮುಖ ವಾಗಿತ್ತು.[54] ಭಂಡಸಾಲೆಗಳಲ್ಲಿ ನಾಣ್ಯ ಚಲಾವಣೆ ಬಹಳ ಸೀಮಿತವಾಗಿತ್ತು. ವಿನಿಮಯ ಪದ್ಧತಿಯಲ್ಲಿಯೇ ಹೆಚ್ಚಿನ ಕೊಡುಕೊಳ್ಳುವಿಕೆ ನಡೆಯುತ್ತಿತ್ತು. ವ್ಯಾಪಾರಸ್ಥರು ರೈತರಿಂದ ತೆಗೆದುಕೊಂಡ ವಸ್ತುಗಳಿಗೆ ಕ್ರಮವಾಗಿ ದಿನನಿತ್ಯದ ಗೃಹಪಯೋಗಿ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುತಿದ್ದರು. ಉದಾಹರಣೆಗೆ ಒಂದು ಮುಡಿ ಅಕ್ಕಿಗೆ – ಒಂದು ಮುಡಿ ಉದ್ದು, ಹೀಗೆಯೆ ಒಂದು ಮುಡಿ ಹುಲ್ಲಿಗೆ 100 ತೆಂಗಿನಕಾಯಿ ಅಥವಾ 1000 ಅಡಿಕೆ. ಜೊತೆಗೆ ಹಿಡಿಸೂಡಿ, ಮಡ್ಲು ಇವುಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ಚಾಟಿ ಕೆಲಸ ಅಥವಾ ಪರಸ್ಪರ ಒಪ್ಪಂದದ ಮೇಲೆ ಕೃಷಿಯಲ್ಲಿ ಸಹಕರಿಸುವ ಪದ್ದತಿ ಆಗಿನ ಕಾಲದಲ್ಲೆ ರೂಡಿಯಲ್ಲಿತ್ತು. ಭಂಡಸಾಲೆಯಲ್ಲಿ ಎಲ್ಲವೂ ಖರೀದಿಯಾಗುತ್ತಿತ್ತು ಹಾಗೂ, ಎಲ್ಲಾ ಸಾಮಾಗ್ರಿಗಳು ಕ್ರಯಕ್ಕೆ ದೊರೆಯುತ್ತಿದ್ದವು. ಈಗಿನ ಪರಿಭಾಷೆಯಲ್ಲಿ ರಖಂ ಮತ್ತು ಚಿಲ್ಲರೆ ವ್ಯಾಪಾರಿಗಳೆರಡೂ ಸೇರಿರುವುದು ಭಂಡಸಾಲೆಯ ವೈಶಿಷ್ಟ್ಯ.[55] ಸಿದ್ದಾಪುರ, ಅಂಪಾರು, ಹಳ್ಳಾಡು, ಕಾರ್ವಾಡಿ, ಹಸೊಳ್, ಹಟ್ಟಿಯಂಗಡಿ, ಗುಲ್ವಾಡಿ, ಕರ್ಕುಂಜೆ ಇತ್ಯಾದಿ ಒಳನಾಡು ಪ್ರದೇಶಗಳಿಂದ ಭತ್ತವನ್ನು ಭಂಡಸಾಲೆಗೆ ತರಿಸಿಕೊಂಡು ಅವುಗಳನ್ನು ಕುಟ್ಟಿ ಅಕ್ಕಿ ಮಾಡುತ್ತಿದ್ದರು.[56] ಒಂದು ರೀತಿಯಲ್ಲಿ ಇದು ಉದ್ಯೋಗವನ್ನು ಕೂಡಾ ಸೃಷ್ಟಿಸಿತ್ತು. ಒಳನಾಡಿನಿಂದ ಎತ್ತಿನ ಗಾಡಿಯಲ್ಲಿ ಅಥವಾ ಹೊರೆರೂಪದಲ್ಲಿ; ನದಿಮಾರ್ಗವಿದ್ದೆಡೆ ಮಚುವೆಗಳಲ್ಲಿ ಭತ್ತವನ್ನು ತರುತ್ತಿದ್ದರು. ಈ ರೀತಿಯ ವ್ಯವಸ್ಥೆಯು ಆಧುನಿಕ ಕಾಲದವರೆಗೂ ಅಂದರೆ 18ನೇ ಶತಮಾನದವರೆಗೂ ಮುಂದುವರೆದಿತ್ತು. ಸಹಕಾರದ ರೀತಿಯಲ್ಲಿ ಕೆಲಸಗಳು ನಡೆಯುತ್ತಿದ್ದವು. ರೈತ ಕುಟುಂಬದವರು ಪರಸ್ಪರ ಸಹಾಯ ಮಾಡಿಕೊಳ್ಳುತ್ತಿದ್ದರು. ಅವಶ್ಯಕತೆಯಿರುವಾಗ ಅಷ್ಟೇ ಪ್ರಮಾಣದ ಸೇವೆ ಸಲ್ಲಿಸುತ್ತಿದ್ದರು. ಇದು ಬಹಳ ಹಿಂದಿನಿಂದಲೂ ಸಾಂಪ್ರದಾಯಿಕ ಭಾರತದ ಪ್ರತಿ ಹಳ್ಳಿಯಲ್ಲಿಯೂ ಈ ರೀತಿಯ ವ್ಯವಸ್ಥೆಯನ್ನು ಕಾಣಬಹುದು. ಹಾಗೆಯೇ ರೈತ ಬೆಳೆದ ಬೆಳೆಗೆ ಮುಂಗಡವಾಗಿಯೇ ವ್ಯಾಪಾರಸ್ಥರಿಂದ ಕೆಲವು ಸಂದರ್ಭಗಳಲ್ಲಿ ಮುಂಗಡ ಹಣ ಪಡೆದುಕೊಳ್ಳುತ್ತಿದ್ದ, ಮಾರುಕಟ್ಟೆಯ ಧಾರಣೆಗಿಂತ ಅಂತಹ ರೈತ ಸ್ವಲ್ಪ ಕಡಿಮೆ ಬೆಲೆಯಲ್ಲಿ ವಸ್ತುಗಳನ್ನು ಕೊಳ್ಳುತ್ತಿದ್ದರು. ವ್ಯಾಪಾರಸ್ಥರಿಂದ ಸಾಲಪಡೆಯದ ರೈತರು ತಮ್ಮ ವಸ್ತುಗಳಿಗೆ ಅಂದಿನ ಮಾರುಕಟ್ಟೆಯ ಧಾರಣೆಯನ್ನೇ ಪಡೆಯುತ್ತಿದ್ದರು. ಆಗಿನ ಕಾಲದಲ್ಲಿ ಹಣದ ತುಪ್ಪಿ ಇದ್ದಿತು. ಇದರಿಂದಾಗಿಯೇ ಜೀವನ ಸುಗಮವಾಗಿ ಸಾಗುತ್ತಿತ್ತು. ಈ ರೀತಿಯ ಮುಂಗಡ ಹಣ

ಪಡೆಯುತ್ತಿದ್ದರಿಂದ ವ್ಯಾಪಾರಸ್ಥನಿಗೂ ರೈತನ ಮಧ್ಯೆ ಒಂದು ರೀತಿಯ ಕರಾರು ವ್ಯವಸ್ಥೆ ಬೆಳೆದು, ವ್ಯಾಪಾರಸ್ಥನಿಗೆ ಸುರಕ್ಷಿತವಾದ ವ್ಯಾಪಾರ ಇರುತ್ತಿತ್ತು. ಒಂದೊಂದು ಭಂಡಸಾಲೆಯದ್ದು ಅದರದ್ದೇ ಆದ ವೈಶಿಷ್ಟತೆಯನ್ನು ಕಾಣಬಹುದು. ಬಸ್ರೂರಿನ ಭಂಡಸಾಲೆಯಲ್ಲಿ ಅಕ್ಕಿ, ಕಾಳುಮೆಣಸನ್ನು ಹೆಚ್ಚಾಗಿ ಸಂಗ್ರಹಿಸುತ್ತಿದ್ದರು. ಮಂಗಳೂರಿನ ಭಂಡಸಾಲೆಗಳಲ್ಲಿ ಅಕ್ಕಿಯನ್ನು ಹಾಗೂ ಕೆಲವು ಭಂಡಸಾಲೆಗಳಲ್ಲಿ ಎಲ್ಲಾ ರೀತಿಯ ದಿನನಿತ್ಯದ ಸರಕುಗಳ ವಿನಿಮಯ ಪದ್ದತಿ ಇರುತ್ತಿತ್ತು. ಉದಾಹರಣೆಗೆ, ನರಸಿಂಹ ಶೆಣೈ ಭಂಡಸಾಲೆ, ರಾಮಣ್ಣ ಹೆಗ್ಗಡೆ ಭಂಡಸಾಲೆಗಳನ್ನು ಉಲ್ಲೇಖಿಸಬಹುದು.[57] ಕ್ರಿ.ಶ. 1718ರ ಹಲಸನಾಡಿನ ವಿಶ್ವೇಶ್ವರಯ್ಯ ಮನೆಯಲ್ಲಿರುವ ಕಡತವು ಹೊನ್ನಾವರ ಮತ್ತು ಗಂಗೊಳ್ಳಿಗಳಲ್ಲಿ ವ್ಯಾಪಾರಸ್ಥರು ಭಂಡಸಾಲೆ ಸ್ಥಾಪಿಸಿ ಜಲವಾಣಿಜ್ಯ ವ್ಯವಹಾರಗಳನ್ನು ನಡೆಸಿದ್ದನ್ನು ದಾಖಲಿಸಿದೆ. ಗಂಗೊಳ್ಳಿಯ ಬೈಲೂರ ರಾಮರಾಯರ ಮನೆಯಲ್ಲಿರುವ ಕಡತಗಳು ಇಲ್ಲಿನ ವರ್ತಕರು ಭಟ್ಕಳ, ಹೊನ್ನಾವರ ಮತ್ತು ಮಂಗಳೂರು ಭಂಡಸಾಲೆಗಳೊಂದಿಗೆ ಮಂಜಿ ಮತ್ತು ಹಡಗುಗಳ ಮುಖಾಂತರ ಸರಕುಗಳ ವಿನಿಮಯ ಮಾಡಿಕೊಂಡಿರುವುದನ್ನು ಉಲ್ಲೇಖಿಸುತ್ತವೆ. ಇಲ್ಲಿರುವ ಇನ್ನೂ ಕೆಲವು ಕಡತಗಳು (ಕ್ರಿ.ಶ. 1740–1750) ವಾಣಿಜ್ಯ ಬೆಳೆಗಳನ್ನು ಹೇಳಿ ಅವುಗಳ ಕ್ರಯದರಗಳು ಏರು ಮತ್ತು ಇಳಿಮುಖವಾದುದನ್ನು ನಮೂದಿಸಿರುವುದು ಗಮನಾರ್ಹವಾದುದು.

ಶೇಖರಣೆಯಾಗುತ್ತಿದ್ದ ಸರಕುಗಳಲ್ಲಿ ಅಕ್ಕಿ ಅತಿ ಮುಖ್ಯವಾದುದು, ಅಕ್ಕಿಯಲ್ಲಿ ಮುಖ್ಯವಾದ ವಿಧ ಕಣ್ವ ಅಕ್ಕಿ. ಈ ಬಗೆಯ ಅಕ್ಕಿಯಲ್ಲಿ ಕೆಂಪು ಮತ್ತು ಕಪ್ಪು ಎಂಬ ಎರಡು ಪ್ರಭೇದಗಳಿದ್ದವು. ಕಣ್ವ ಅಕ್ಕಿ ಊಟಕ್ಕೆ ಹೆಚ್ಚು ರುಚಿ ಹಾಗೂ ಪೌಷ್ಟಿಕತೆಯಿಂದ ಕೂಡಿತ್ತು. ಮಲಬಾರಿಗಳು ಈ ಅಕ್ಕಿಯನ್ನು ಕಾಯಮೆ ಎಂದು ಹೇಳುತ್ತಾರೆ. ಅಂದರೆ, ಕಾಯಮೆ ಅಕ್ಕಿ (ಕಣ್ವ ಅಕ್ಕಿ)ಯ ಬೇಡಿಕೆ ಹೆಚ್ಚಾಗಲು ಕಾರಣ ಮತ್ತು ಇದರ ವೈಶಿಷ್ಟ್ಯವೇನೆಂದರೆ, ಯಾವುದೇ ರೀತಿಯಲ್ಲಿಯೂ ಅಕ್ಕಿ ಬಹು ಬೇಗನೆ ಕೆಡುವುದಿಲ್ಲ, ಬಹಳ ದೀರ್ಘಕಾಲದ ವರೆಗೆ ಸಂಗ್ರಹಿಸಿಟ್ಟುಕೊಳ್ಳಬಹುದು. ಹಾಗೆಯೇ ಅಕ್ಕಿಯ ಬೆಲೆ ಕಡಿಮೆ ಇರುವುದರಿಂದ ದಿನನಿತ್ಯ ಬಳಸುವುದರಿಂದ ಸಾಕಷ್ಟು ಬೇಡಿಕೆ ಇತ್ತು. ಅದೇ ರೀತಿ ಗುಲ್ವಾಡಿ ಸಣ್ಣಕ್ಕಿ ಬೇಡಿಕೆಯಲ್ಲಿರುವ ಮತ್ತೊಂದು ಬಗೆಯ ಅಕ್ಕಿ. ಇದನ್ನು ಗುಲ್ವಾಡಿ ಪ್ರದೇಶದಲ್ಲಿ ಬೆಳೆಯುತ್ತಿದ್ದರಿಂದ ಈ ಹೆಸರು ಬಂತು. ಈ ಅಕ್ಕಿಯನ್ನು ಸ್ಥಳೀಯ ತುಂಡರಸರು, ಶ್ರೀಮಂತ ವರ್ಗದವರು, ವ್ಯಾಪಾರ

ವರ್ಗದವರು, ಬ್ರಾಹ್ಮಣ ವರ್ಗದವರು ಹೆಚ್ಚಾಗಿ ಬಳಸುತ್ತಿದ್ದರು. ಇತರೆ ವರ್ಗದವರು ವಿಶೇಷ ಸಂದರ್ಭಗಳಲ್ಲಿ ಬಳಸುತ್ತಿದ್ದರು. ಈ ಅಕ್ಕಿಗೆ ಗಂಧಸಾಲೆ ಅಕ್ಕಿ ಎಂದೂ ಕರೆಯುತ್ತಾರೆ. ಪೋರ್ಚುಗೀಸರು ಮತ್ತು ಡಚ್ಚರು ಪ್ರಾರಂಭದಲ್ಲಿ ಬಸ್ರೂರಿಗೆ ಬಂದ ಸಂದರ್ಭದಲ್ಲಿ ಇಲ್ಲಿ ಭಂಡಸಾಲೆಗಳನ್ನು ಪ್ರಾರಂಭಿಸಿದರು ಅದರ ದಾಖಲೆಯನ್ನು ಡಚ್ಚರ ಬರಹಗಳಲ್ಲಿ ಕಾಣಬಹುದು.

ಸ್ಥಳೀಯ ಅಡಳಿತಗಾರರು ಯುರೋಪಿನ ವ್ಯಾಪಾರಿಗಳು ಮಂಗಳೂರಿನಲ್ಲಿ ನೆಲೆಸಲು ಕಾರಣರಾದರು ಎಂಬ ಮಾಹಿತಿಯನ್ನು ಯೂರೋಪಿಯನ್ ದಾಖಲೆಗಳಲ್ಲಿ ಕಾಣಬಹುದು. ಸ್ಥಳೀಯ ಆಡಳಿತಗಾರರು, ಉದಾರವಾಗಿದ್ದುದರಿಂದ, ತಮ್ಮ ದೇಶದ ಸಮೃದ್ಧಿಯು ತಮ್ಮ ಸಕ್ರಿಯ ವ್ಯವಹಾರದ ಮೇಲೆ ಅವಲಂಬಿತವಾಗಿದೆ ಮತ್ತು ಅವರು ಯುರೋಪಿಯನ್ನ ರೊಂದಿಗೆ ವ್ಯಾಪಾರದಿಂದ ಲಾಭ ಪಡೆಯಲು ಬಯಸುತ್ತಿದ್ದಾರೆ ಎಂದು ಐರೋಪ್ಯರು ತಿಳಿದಿದ್ದರು. ಯುರೋಪಿಯನ್ ವ್ಯಾಪಾರಿ ಮತ್ತು ಸ್ಥಳೀಯ ನಿವಾಸಿಗಳ ನಡುವಿನ ಹೋರಾಟವಾದಾಗಲೆಲ್ಲಾ ವಿದೇಶಿ ವ್ಯಾಪಾರಿಗಳ ಅಗತ್ಯ ರಾಜನಿಗಿದ್ದುದರಿಂದ ರಾಜ ಮಧ್ಯಸ್ಥಿಕೆ ವಹಿಸಿ ವ್ಯಾಪಾರಿಗಳ ಮತ್ತು ಸ್ಥಳೀಯರ ನಡುವೆ ಹೊಂದಾಣಿಕೆಗೆ ಪ್ರಯತ್ನಿಸುತ್ತಿದ್ದರು. ಅರಬ್ ವ್ಯಾಪಾರಿಗಳ ವಿಚಾರದಲ್ಲಿಯೂ ಕೆಲವೊಮ್ಮೆ ರಾಜ ಮಧ್ಯೆ ಪ್ರವೇಶಿಸುತ್ತಿದ್ದುದನ್ನು ಕಾಣಬಹುದು. ಯುರೋಪಿಯನ್ನರ ಆಗಮನದ ಮೊದಲು ಇಲ್ಲಿನ ಆಡಳಿತಗಾರರು ಅರಬ್ಬರಿಗೆ ಮಂಗಳೂರಿನಲ್ಲಿ ನೆಲೆಸಲು ಅವಕಾಶ ಮಾಡಿಕೊಟ್ಟರು. ಇವರು ಆಂತರಿಕ ವ್ಯಾಪಾರದಲ್ಲೂ ತೊಡಗಿದ್ದರು.

ಪ್ರಾರಂಭಿಕ ಹಂತಗಳಲ್ಲಿ ಅರಬ್ಬರು ಮತ್ತು ನಂತರ ಯುರೋಪಿಯನ್ನರು ಮಂಗಳೂರಿನ ಒಳನಾಡಿನ ಮತ್ತು ಸಾಗರೋತ್ತರ ವ್ಯಾಪಾರದ ಪ್ರಮುಖ ಭಾಗವನ್ನು ನಿಯಂತ್ರಿಸಿದರು. ಇದರ ಪರಿಣಾಮವಾಗಿ, ದೂರದ ವ್ಯಾಪಾರಿಗಳ ಸ್ಥಳೀಯ ವ್ಯಾಪಾರಿಗಳ ನಿಜವಾದ ಭಾಗವಹಿಸುವಿಕೆ ಕುಸಿಯಿತು. ಮುಖ್ಯವಾಗಿ ತುಳುನಾಡಿನ ಆಂತರಿಕ ವ್ಯಾಪಾರಿಗಳನ್ನು ಅಧೋಗತಿಗೆ ತಳ್ಳಲಾಯಿತು. ಈ ಸಂದರ್ಭಗಳಲ್ಲಿ ಬೇರೆ ಪರ್ಯಾಯ ವಿಲ್ಲದ ಸ್ಥಳೀಯ ರಾಜರು ಮತ್ತು ವ್ಯಾಪಾರಿಗಳು, ಅರಬ್ ಮತ್ತು ಯುರೋಪಿಯನ್ ವ್ಯಾಪಾರಿಗಳ ಕಡೆಗೆ ಶಾಂತಿಯುತವಾಗಿ ಮತ್ತು ಸಹಿಷ್ಣುವಾಗಿ ಉಳಿಯುವ ಅನಿವಾರ್ಯತೆ ಎದುರಾಯಿತು. ಅರಬ್, ಯುರೋಪಿಯನ್ ಮತ್ತು ಸ್ಥಳೀಯ ವ್ಯಾಪಾರಿಗಳ ಉಪಸ್ಥಿತಿಯು

ಸಂಕೀರ್ಣ ವ್ಯಾಪಾರ ವಹಿವಾಟು ಸಂಬಂಧಗಳಿಗೆ ಕಾರಣವಾಯಿತು. ಒಳನಾಡಿನ ನಿಯಂತ್ರಣಕ್ಕಾಗಿ ಹೋರಾಟವು ಈ ಸಮಯದಲ್ಲಿ ಪ್ರಮುಖ ಸಮಸ್ಯೆಯಾಗಿತ್ತು.[50] ಮೈಸೂರು ಆಡಳಿತಗಾರರು ಮತ್ತು ಬ್ರಿಟಿಷರ ನಡುವಿನ ನಿರಂತರ ಯುದ್ಧವು ಮಂಗಳೂರಿನ ಸ್ಥಳೀಯ ವ್ಯಾಪಾರಿಗಳಿಗೆ ಅಪಾಯಕಾರಿ ಮತ್ತು ಅಸುರಕ್ಷಿತವಾಗಿದ್ದಿತು. ಸತತ ಯುದ್ಧ ಬ್ರಿಟಿಷ್ ವ್ಯಾಪಾರಿಗಳ ಏರಿಕೆಗೆ ನೆರವಾಯಿತು. ಅವರು ತಮ್ಮ ಪ್ರತಿಸ್ಪರ್ಧಿಗಳನ್ನು ಹೊರಗುತ್ತಿಗೆ ಮಾಡಿದರು. ಬ್ರಿಟಿಷರು, ಅರಬ್ಬರು, ಮತ್ತು ಇತರ ವ್ಯಾಪಾರಿಗಳ ವ್ಯಾಪಾರಿ ಹಿತಾಸಕ್ತಿಗಳನ್ನು ಮಂಗಳೂರಿನ ಹೊರಗೆ ಓಡಿಸಿದರು. ಮಂಗಳೂರಿನಲ್ಲಿ ಯುರೋಪಿಯನ್ ವ್ಯಾಪಾರಿಗಳ ಸಂಖ್ಯೆಯಲ್ಲಿ ಹೆಚ್ಚಳವು ವ್ಯಾಪಾರ ಮತ್ತು ಹಡಗುಗಳ ಮೇಲಿನ ಹಿಡಿತ ಅದಕ್ಕೆ ಅನುಗುಣವಾಗಿ ಐರೋಪ್ಯರ ಹೆಚ್ಚಳಕ್ಕೆ ಕಾರಣವಾಯಿತು.

### 2.10 ಐರೋಪ್ಯರ ಆಗಮನ

ಸ್ಥಳೀಯ ಆಡಳಿತಗಾರರು ಯೂರೋಪಿನ ವ್ಯಾಪಾರಸ್ಥರಿಗೆ ನೀಡಿದ ಪ್ರೋತ್ಸಾಹವು ಸ್ಥಳಿಯ ವ್ಯಾಪಾರಸ್ಥರ ವ್ಯವಹಾರಕ್ಕೆ ದಕ್ಕೆ ಉಂಟುಮಾಡಲಿಲ್ಲ. ಸ್ಥಳೀಯ ವ್ಯಾಪಾರಿಗಳು, ಕೃಷಿಕರ ಮೆಣಸು, ಶುಂಠಿ, ಇತರ ಸರಕುಗಳನ್ನು ಒಳನಾಡಿನಲ್ಲಿ ತರಿಸಿಕೊಳ್ಳುತ್ತಿದ್ದರು. ದೈನಂದಿನ ಅಗತ್ಯಗಳಾದ ಅನ್ನ, ಬಟ್ಟೆ ಮತ್ತು ಇತರ ವಸ್ತುಗಳನ್ನು ಸುಗ್ಗಿಯ ಸಮಯದಲ್ಲಿ ತಮಗೆ ನೀಡಬೇಕೆಂದು ತಿಳಿಸಿದರು. ರಫ್ತಿನ ಸಮಯದಲ್ಲಿ ಆಯಾ ಕಾರ್ಖಾನೆಗಳಲ್ಲಿ ಅಗತ್ಯ ಸರಕುಗಳನ್ನು ಪಡೆಯಲು ಯುರೋಪಿಯನ್ನರು ಈ ವ್ಯಾಪಾರಿಗಳೊಂದಿಗೆ ಒಪ್ಪಂದ ಮಾಡಿಕೊಂಡರು.[59]

ಪ್ರಯಾಣಿಕರ ಕಥಾನಕಗಳನ್ನು ಹೊರತುಪಡಿಸಿ ಈ ಪ್ರದೇಶದ ಶಿಲಾಶಾಸನಗಳು ಕೂಡಾ ಹೊರಗಿನ ಪ್ರಪಂಚದೊಂದಿಗೆ ವ್ಯಾಪಾರ ಸಂಪರ್ಕಗಳ ಮೇಲೆ ಬೆಳಕುಚೆಲ್ಲುತ್ತವೆ. ತುಳುನಾಡು ಮತ್ತು ಚೀನಾ ನಡುವಿನ ವ್ಯಾಪಾರ ಸಂಪರ್ಕವನ್ನು ಕ್ರಿ.ಶ. 1429ರ ಹೊಸಬಸ್ತಿ, ಮೂಡಬಿದರೆ ಶಿಲಾಶಾಸನದ ಆಧಾರದಲ್ಲಿ ಸೂಚಿಸಲಾಯಿತು.[60] ತುಳುನಾಡಿನ ಬಂದರುಗಳಲ್ಲಿ ಚುರುಕಾದ ವಾಣಿಜ್ಯ ಚಟುವಟಿಕೆಗಳನ್ನು ಪೋರ್ಚುಗೀಸರು ನಡೆಸುತ್ತಿದ್ದರು ಹಾಗೂ ವಿಜಯನಗರದ ಆಡಳಿತಗಾರರೊಂದಿಗಿನ ಸೌಹಾರ್ದ ಸಂಬಂಧಗಳು ತುಳುನಾಡಿನ ವಾಣಿಜ್ಯ ಪ್ರಯೋಜನಗಳನ್ನು ಸ್ವಾಧೀನಪಡಿಸಿಕೊಳ್ಳಲು ಅವರಿಗೆ ಸಹಾಯ ಮಾಡಿದ್ದವು. ಕರಾವಳಿಯಲ್ಲಿ ಪೋರ್ಚುಗೀಸ್ ವ್ಯಾಪಾರ ಕ್ರಮೇಣ ವೇಗವನ್ನು ಹೆಚ್ಚಿಸಿತು ಮತ್ತು ಈ

ಪ್ರಕ್ರಿಯೆಯಲ್ಲಿ ಅವರು ಕರಾವಳಿಯುದ್ದಕ್ಕೂ ಅರಬ್ ಮತ್ತು ಮೊಪ್ಲಾ ವ್ಯಾಪಾರವನ್ನು ತಡೆಯಲು ಪ್ರಯತ್ನಿಸಿದರು. ಇದು ದೇಶೀಯ ವ್ಯಾಪಾರಿಗಳ ಮಾರಾಟಕ್ಕೆ ಕಾರಣವಾಯಿತು.

ಯುರೋಪಿಯನ್ನರನ್ನು, ಅದರಲ್ಲೂ ಪೋರ್ಚುಗೀಸರನ್ನು ಅನುಸರಿಸಲೇಬೇಕಾದ ಅನಿವಾರ್ಯತೆ ವಿಜಯನಗರ ಸಾಮ್ರಾಜ್ಯಕ್ಕೆ ಎದುರಾಯಿತು. ಕಾರಣವೆನೆಂದರೆ 1503ರಲ್ಲಿ ಪೋರ್ಚುಗೀಸರು ಅರಬ್ಬರನ್ನು ಸೋಲಿಸಿದರು. ಪೋರ್ಚುಗೀಸರು ಅರಬ್ ಮೈತ್ರಿಪಡೆಗಳನ್ನು ಅರೇಬಿಯನ್ ಸೀನಲ್ಲಿ ಸೋಲಿಸಿದ ಮೇಲೆ, ವಿಜಯನಗರದಲ್ಲಿ ಕೃಷ್ಣದೇವರಾಯನು ಒಳಗೊಂಡಂತೆ ದಖ್ಖನಿನ ಎಲ್ಲಾ ಅರಸರು ಮತ್ತು ಚಕ್ರವರ್ತಿಗಳಿಗೂ ಪೋರ್ಚುಗೀಸರೊಂದಿಗೆ ವ್ಯಾಪಾರ ಮಾಡುವ ಅನಿವಾರ್ಯತೆ ಎದುರಾಯಿತು. ಅರಬ್ಬರನ್ನು ಸೋಲಿಸಿದ ಪೊರ್ಚುಗೀಸರು ಅರಬ್ಬರಿಗೆ ಕಾರ್ತೆಜ್‌ಗಳನ್ನು ನೀಡಿದರು. ಆಗ ಅರಬ್ಬರ ವಿದೇಶಿ ವ್ಯಾಪಾರ ನಿಂತುಹೋಯಿತು. ಪೊರ್ಚುಗೀಸರು ಪ್ರಾರಂಭದಲ್ಲಿ ಸಂಪೂರ್ಣವಾಗಿ ಆಂತರಿಕ ವ್ಯಾಪಾರದ ಒಳಗೆ ಹೋಗಲಿಲ್ಲ, ಬದಲಾಗಿ ವಿದೇಶಿ ವ್ಯಾಪಾರವನ್ನು ನಿಯಂತ್ರಣದಲ್ಲಿಟ್ಟುಕೊಂಡಿದ್ದರು. ಕುದುರೆ ವ್ಯಾಪಾರ ಪ್ರಮುಖವಾಗಿ ಇವರ ಲಾಭದಾಯಕ ವ್ಯಾಪಾರವಾಗಿತ್ತು. ವಿಜಯನಗರದವರಿಗೆ ಕುದುರೆ ಬೇಕಾಗಿತ್ತು. ಕುದುರೆ ತರುವುದನ್ನು ಅರಬ್ಬರು ಯಾವಾಗ ನಿಲ್ಲಿಸಿದರೋ ಆ ಸಂದರ್ಭದಲ್ಲಿ ವಿಜಯನಗರದವರು ಪೋರ್ಚುಗೀಸರನ್ನು ಅವಲಂಬಿಸಬೇಕಾಯಿತು.

ಅರಬ್ಬರ ಸೋಲು ಪೋರ್ಚುಗೀಸರು ಜಾರಿಗೆ ತಂದ ಕಾರ್ತೆಜ್‌ಗಳು ಪೊರ್ಚುಗೀಸರ ಏಕಸ್ವಾಮ್ಯವನ್ನು ಅರಬ್ಬೀ ಸಮುದ್ರದಲ್ಲಿ ಹರಡಿದ್ದರಿಂದ ಅನಿವಾರ್ಯವಾಗಿ ಬಹುಮನಿ ಸಾಮ್ರಾಜ್ಯ ಮತ್ತು ವಿಜಯನಗರ ಸಾಮ್ರಾಜ್ಯ ತಮ್ಮ ಯುದ್ಧದ ಮಹಾಸ್ತ್ರವಾದ ಕುದುರೆಗಳಿಗೆ ಅರಬ್ಬರನ್ನು ಬಿಟ್ಟು ಪೊರ್ಚುಗೀಸರನ್ನೇ ಅವಲಂಬಿಸಬೇಕಾದ ಅನಿವಾರ್ಯತೆ ಈ ಹೊತ್ತಿಗೆ ಮಡುಗಟ್ಟಿದ್ದಿತು. ಸ್ಥಾನಿಕ ವ್ಯಾಪಾರಿಗಳಿಗೆ ಪೋರ್ಚುಗೀಸರೊಂದಿಗಿನ ವ್ಯವಹಾರ ಲಾಭದಾಯಕ ದೃಷ್ಟಿಯಿಂದ ಅನಿವಾರ್ಯವಾದರೂ ರಾಜಕೀಯ ಹಿತಾಸಕ್ತಿ ಇದ್ದಿರಲಿಲ್ಲ. ಹಾಗಾಗಿ ಸ್ಥಾನಿಕರು ಬಯಸದಿದ್ದರೂ ವಿಜಯನಗರ ಸಾಮ್ರಾಜ್ಯದ ಅನಿವಾರ್ಯತೆಯ ಕೊಂಡಿಯಲ್ಲಿ ಸಿಲುಕಿಕೊಂಡು ಕಡಲತೀರದಲ್ಲಿ ಪೋರ್ಚುಗೀಸರು ನೆಲೆಸಿ ಅವರ ಧ್ಯೇಯವಾದ ವ್ಯಾಪಾರ ಮತ್ತು ಪ್ರಚಾರಕ್ಕೆ ನಿಷ್ಕ್ರಿಯ ಪ್ರೇಕ್ಷಕರಾದರು. ಇದು ಪೋರ್ಚುಗೀಸರು ಕಡಲತೀರದಲ್ಲಿ ನೆಲೆಸಲು ಅನುವು ಮಾಡಿಕೊಟ್ಟಿತ್ತಲ್ಲದೆ ಅವರ ವ್ಯಾಪಾರಾಭಿವೃದ್ಧಿಗೆ

ಕ್ರೈಸ್ತಧರ್ಮ ಮತಾಂತರಕ್ಕೆ ದೊಡ್ಡ ಅವಕಾಶಗಳನ್ನು ತೆರೆದುಕೊಟ್ಟಿತು. ಇಲ್ಲಿನ ಸ್ಥಳೀಯ ವ್ಯಾಪಾರಿಗಳು ಪೋರ್ಚುಗೀಸರಿಂದ ಸರಕುಗಳನ್ನು ಕೊಂಡು ಆಯಾ ಪ್ರದೇಶಗಳಿಗೆ ತಲುಪಿಸುತ್ತಿದ್ದರು.

ತುಳುನಾಡಿನ ವ್ಯಾಪಾರಿಗಳು ತಮ್ಮ ವೈರಿಗಳನ್ನು ಮತ್ತು ಪ್ರತಿಸ್ಪರ್ಧಿಗಳನ್ನು ಅದರಲ್ಲೂ ವಿಶೇಷವಾಗಿ ಅರಬ್ಬರು, ಡಚ್, ಮತ್ತು ಇಂಗ್ಲೀಷ್ ವ್ಯಾಪಾರಿಗಳನ್ನು ವ್ಯಾಪಾರ ಮಾಡುವುದನ್ನು ತಪ್ಪಿಸಲು ಸ್ಥಳೀಯ ಮುಖ್ಯಸ್ಥರೊಂದಿಗೆ ಬಲ ಅಥವಾ ಒಪ್ಪಂದದ ಮೂಲಕ ಅವರು ಪ್ರಯತ್ನಿಸಿದರು. ಕೆಲವು ಸಮಯಗಳಲ್ಲಿ ಪೋರ್ಚುಗೀಸರಿಗೆ ಯಾವುದೇ ಪ್ರತಿಸ್ಪರ್ಧಿಗಳು ತುಳುನಾಡಿನ ಬಂದರಿನಲ್ಲಿ ಬಾರದಂತೆ ಮಾಡಲು ಸ್ಥಳೀಯ ಮುಖಂಡರಿಗೆ ಶಿಕ್ಷೆ ವಿಧಿಸಲಾಯಿತು. ಉದಾಹರಣೆಗೆ ಕ್ರಿ.ಶ. 1524ರಲ್ಲಿ ವಾಸ್ಕೋಡಗಾಮ ಕ್ಯಾಲಿಕಟ್‌ನ ಮುಸ್ಲಿಂ ವ್ಯಾಪಾರಿಗಳಿಗೆ ಮಂಗಳೂರು ಮತ್ತು ಬಸ್ರೂರಿನಲ್ಲಿ ಮಧ್ಯವರ್ತಿಗಳು ಎಂದು ಹೇಳಿದಾಗ ಅವರು ನದಿಗಳನ್ನು ನಿರ್ಬಂಧಿಸಲು ಆದೇಶಿಸಿದರು. 1530ರಲ್ಲಿ ಮತ್ತು 1558ರಲ್ಲಿ, ಮಲಬಾರ್ ವ್ಯಾಪಾರಿಗಳು ಪೊರ್ಚುಗೀಸ್‌ರ ಶತ್ರು ಹಡಗುಗಳೊಂದಿಗೆ ವ್ಯವಹರಿಸಲು ಪ್ರಾರಂಭಿಸಿದ್ದರಿಂದ ಪೋರ್ಚುಗೀಸ್ ಪ್ರತೀಕಾರಗಳನ್ನು ಅನುಭವಿಸಿತು. ತುಳುನಾಡಿನಲ್ಲಿ ಪೋರ್ಚುಗೀಸರು ವಾಣಿಜ್ಯ ಸೌಲಭ್ಯಗಳನ್ನು ಹೊಂದುವ ಹಾಗೂ ಧರ್ಮವನ್ನು ಬೋಧಿಸುವ ಉದ್ದೇಶದಿಂದ ಕೂಡಿತ್ತು. ಆದ್ದರಿಂದ ಪೋರ್ಚುಗಲ್ ವ್ಯಾಪಾರ ಮತ್ತು ಅಧಿಕಾರವು ತುಳುನಾಡಿನಲ್ಲಿ ಬೇರುಗಳನ್ನು ಬಿಟ್ಟಿತು. ನಿಸ್ಸಂದೇಹವಾಗಿ ತುಳುನಾಡಿನಲ್ಲಿ ಪೋರ್ಚುಗಲ್ ವ್ಯಾಪಾರ ಯಶಸ್ವಿಯಾಗಿದೆ. ಅದು ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯಡಿಯಲ್ಲಿ ಆದರೆ ಅದು ಯಾವಾಗಲೂ ತುಳುನಾಡಿನ ಸ್ಥಳಿಯ ಆಡಳಿತಗಾರರ ಬೆಂಬಲದೊಂದಿಗೆ ಅಲ್ಲ. ಆಗಾಗ್ಯೆ ಉಳ್ಳಾಲ ರಾಣಿಯ ಪ್ರತಿರೋಧವನ್ನು ನೆನಪಿಗೆ ತರುವಂತಹ ವೈಷಮ್ಯ ಮತ್ತು ಹೋರಾಟಗಳ ಬಗ್ಗೆ ನಾವು ಉಲ್ಲೇಖಗಳನ್ನು ಕಾಣುತ್ತೇವೆ.[61] ಪೋರ್ಚುಗೀಸರನ್ನು ತಿರಸ್ಕರಿಸಿ ಅರಬ್ಬರನ್ನು ಉಳಿಸಿಕೊಳ್ಳಲು ಸ್ಥಳೀಯ ಆಡಳಿತಗಾರರಿಗೆ ಸಾಧ್ಯವಾಗಲಿಲ್ಲ. ಕೆಳದಿ ನಾಯಕರ ಮೇಲೆ ಪ್ರಭಾವ ಬೀರುವ ಅವರ ಪ್ರಯತ್ನಗಳು ಸಾಂದರ್ಭಿಕವಾಗಿ ಯಶಸ್ವಿಯಾಗಿದ್ದವು. ಆದರೆ ಅದು ದೀರ್ಘಕಾಲದವರೆಗೆ ಮುಂದುವರಿಯಲಿಲ್ಲ.[62]

ಪೋರ್ಚುಗಿಸರಿಗೆ ಕೆಳದಿ ಬೆಂಬಲವು ಅಸಹನೀಯವೆಂದು ಸಾಬೀತಾಯಿತು. ಅಲ್ಲದೆ ಕೆಳದಿಯ ಸ್ಥಾನಿಕ ಆಡಳಿತಗಾರರೊಂದಿಗೆ ಹಲವಾರು ಘರ್ಷಣೆಗಳು ಸಂಭವಿಸಿದುವು. 17ನೇ ಶತಮಾನದ ಮಧ್ಯಭಾಗದಲ್ಲಿ ಪೋರ್ಚುಗೀಸರ ಶಕ್ತಿ ಕುಸಿಯಲಾರಂಭಿಸಿತು. ಪೋರ್ಚುಗಲ್‌ನ ರಾಜನು 1635ರಲ್ಲಿ ತನ್ನ ವೈಸರಾಯಿಗೆ ತುಳುನಾಡಿನ ಮುಖ್ಯಸ್ಥರ ಆಂತರಿಕ ರಾಜಕೀಯದಲ್ಲಿ ಮಧ್ಯಪ್ರವೇಶಿಸಬಾರದೆಂದು ಎಚ್ಚರಿಸಿದನು. ಏಕೆಂದರೆ, ಪೋರ್ಚುಗೀಸರ ವ್ಯಾಪಾರಕ್ಕೆ ಇದು ಹಾನಿಕಾರಕ ಎಂಬ ಮುಂದಾಲೋಚನೆ ಇತ್ತು. ಅದರ ನಿರ್ಲಕ್ಷ್ಯದಿಂದಾಗಿ, ಕಾರವಾರ, ಹೊನ್ನಾವರ, ಬಸ್ರೂರು, ಮತ್ತು ಮಂಗಳೂರು ಮುಂತಾದ ಕೆಲವು ಬಂದರುಗಳು ಪ್ರಾಮುಖ್ಯವನ್ನು ಕಳೆದುಕೊಳ್ಳುತ್ತಿದ್ದವು. ಕೆಳದಿಯ ನಾಯಕರುಗಳೊಂದಿಗೆ ದೀರ್ಘಕಾಲದ ಹೋರಾಟವು ಕೆಲವು ಬಂದರುಗಳನ್ನು ಕಳೆದುಕೊಳ್ಳಲೂ ಕಾರಣವಾಯಿತು. ಅದರಲ್ಲೂ ವಿಶೇಷವಾಗಿ ಹೊನ್ನಾವರ ಮತ್ತು ಬಸ್ರೂರು. ಆರಂಭದಲ್ಲಿ ಪೋರ್ಚುಗೀಸ್ ಪ್ರಭಾವದಿಂದ ಮುಕ್ತಾಯವಾಯಿತು. ಆದರೆ ಪೋರ್ಚುಗಿಸ್ ವ್ಯಾಪಾರ ಮತ್ತು ಅಧಿಕಾರವು ತುಳುನಾಡಿನಲ್ಲಿ ಬೇರುಗಳನ್ನು ಬಿಟ್ಟಿತು. ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯಡಿಯಲ್ಲಿ ನಿಸ್ಸಂದೇಹವಾಗಿ ತುಳುನಾಡಿನಲ್ಲಿ ಪೋರ್ಚುಗೀಸರ ವ್ಯಾಪಾರ ಯಶಸ್ವಿಯಾಗಿದೆ.

18ನೇ ಶತಮಾನದ ಮೊದಲ ಭಾಗದಲ್ಲಿ ಅವರ ಸ್ಥಾನಮಾನವು ಗಣನೀಯವಾಗಿ ದುರ್ಬಲಗೊಂಡಿತು. 2ನೇ ಸೋಮಶೇಖರ ನಾಯಕನಿಗೆ ನಿಯಮಗಳನ್ನು ನಿರ್ದೇಶಿಸುತ್ತಿದ್ದರು. ಆದರೂ 1678 ಮತ್ತು 1714ರ ಒಪ್ಪಂದಗಳಲ್ಲಿ ಕೆಳದಿ ನಾಯಕರುಗಳೊಂದಿಗೆ ಅವರು ಪಡೆದ ಕೆಲವು ವಾಣಿಜ್ಯ ಸೌಲಭ್ಯಗಳನ್ನು ಉಳಿಸಿಕೊಳ್ಳಲು ಸಾಧ್ಯವಾಯಿತು.[63] ತುಳುನಾಡಿನಲ್ಲಿನ ಏಕಸ್ವಾಮ್ಯದ ಮೆಣಸಿನ ವ್ಯಾಪಾರ ಡಚ್‌ರ ಸಾಹಸೋದ್ಯಮದ ವಿರೋಧವನ್ನು ಪೋರ್ಚುಗೀಸರು ಎದುರಿಸಬೇಕಾಯಿತು. 1647ರ ಪೋರ್ಚುಗೀಸ್ ಪತ್ರವ್ಯವಹಾರವು ಡಚ್ಚರು ತಮ್ಮ ವ್ಯಾಪಾರ ಕೇಂದ್ರಗಳನ್ನು ಕೆಳದಿ ಸಾಮ್ರಾಜ್ಯದಲ್ಲಿ ಸ್ಥಾಪಿಸಲು ಉದ್ದೇಶಿಸಿದ್ದನ್ನು ದಾಖಲಿಸುತ್ತದೆ ಮತ್ತು ಪೋರ್ಚುಗೀಸ್ ವಿರುದ್ಧ ನಾಯಕರನ್ನು ಪ್ರಚೋದಿಸಲು ಪ್ರಯತ್ನಿಸಿದ್ದನ್ನು ತಿಳಿಸುತ್ತದೆ.[64]

## 2.11 ವ್ಯಾಪಾರಿ ಮಾರ್ಗಗಳು

ಈ ಅವಧಿಯಲ್ಲಿ ಆಂತರಿಕ ವ್ಯಾಪಾರವನ್ನು ಹೇಗೆ ನಡೆಸಲಾಯಿತು ಎಂಬುದನ್ನು ಮುಂದಿನ ಪುಟಗಳಲ್ಲಿ ವಿಶ್ಲೇಷಿಸಲಾಗುವುದು. ವ್ಯಾಪಾರ ವಹಿವಾಟು ಎರಡು ವಿಧವಾಗಿತ್ತು ಅದನ್ನು-

1) ನದಿ ಮತ್ತು ಸಾಗರ (ಸಮುದ್ರ) ಮಾರ್ಗಗಳ ಮೂಲಕ

2) ಭೂಮಾರ್ಗಗಳ ಮೂಲಕ

ಇಲ್ಲಿನ ಭೌಗೋಳಿಕ ಹಿನ್ನಲೆ ಒಳನಾಡಿನ ವ್ಯಾಪಾರಕ್ಕೆ ನೀಡಿದ ಕೊಡುಗೆ ಅಪಾರ. ಹೊಳೆ, ಹಳ್ಳ ತೋಡು, ಕಡಲೊತ್ತುಗಳು, ದಟ್ಟ ಕಾಡುಗಳು, ಪಶ್ಚಿಮ ಘಟ್ಟದ ಸಾಲುಗಳೆ ಮುಂತಾದ ನಿಸರ್ಗದ ರಚನೆಗಳು ಸಾಗಾಣಿಕೆಯನ್ನು ಶ್ರಮದಾಯಕವಾಗಿಸಿವೆ. ತಲೆಹೊರೆಯಲ್ಲಿ ಹಾಗೂ ದೋಣಿಗಳ ಮುಖಾಂತರವೇ ಹೆಚ್ಚಿನ ಸರಕು ಸಾಗಣಿಕೆ ಯಾಗುತ್ತಿತ್ತು. ತಲೆಹೊರೆಯಲ್ಲಿ ಮತ್ತು ನದಿಯ ಹಿನ್ನೀರುಗಳಲ್ಲಿ ಅಕ್ಕಿ ಸಾಗಾಟವಾಗುತ್ತಿತ್ತು ಮತ್ತು ಇದಕ್ಕೆ ರಸ್ತೆ ಸುಂಕ ಹಾಗೂ ನದಿ ಸುಂಕಗಳೆರಡನ್ನೂ ಕೊಡಬೇಕಾಗಿತ್ತು.[65] ಪ್ರಯಾಣಿಕರಿಗೆ ಮತ್ತು ಸೈನಿಕರಿಗಷ್ಟೇ ಹೆದ್ದಾರಿಗಳಾಗಲೀ, ಒಳ್ಳೆಯ ರಸ್ತೆಗಳ ಅನಿವಾರ್ಯತೆಯಿತ್ತು. ಏಕೆಂದರೆ ಇಲ್ಲಿನ ಜನರ ಬಳಿ ಎತ್ತುಗಳು, ಬಂಡಿಗಳು ಇದ್ದವು. ಇದನ್ನು ಬುಖಾನನ್ ವರದಿಯೂ ದೃಢೀಕರಿಸುತ್ತದೆ. ಅಕ್ಕಿ, ಕಬ್ಬು, ತೆಂಗಿನಕಾಯಿ, ಅಡಿಕೆ, ಶುಂಠಿ ಕೊಬ್ಬರಿ, ಬೆಲ್ಲ, ತೆಂಗಿನನಾರು, ಕಾಚು ಇತ್ಯಾದಿಗಳು ಇಲ್ಲಿನ ಪ್ರಮುಖ ಉತ್ಪನ್ನಗಳಾಗಿದ್ದು, ವ್ಯಾಪಾರದ ಮುಖ್ಯ ವಸ್ತುಗಳಾಗಿದ್ದವು.

ಸ್ವಾಭಾವಿಕವಾದ ನದಿಗಳು, ಅಥವಾ ಕೃತಕವಾದ ಕಾಲುವೆಗಳ ಮೂಲಕ ಆಂತರಿಕವಾಗಿ ಹಡಗು ಅಥವಾ ದೋಣಿಗಳಲ್ಲಿ ಸರಕು ಮತ್ತು ಪ್ರಯಾಣಿಕರನ್ನು ಸಾಗಿಸುವ ವ್ಯವಸ್ಥೆಯನ್ನು ಒಳನಾಡಿನ ಜಲಸಾರಿಗೆ ಎಂದು ಕರೆಯುತ್ತಾರೆ. 18ನೇ ಶತಮಾನಕ್ಕಿಂತ ಮೊದಲು ಜಲಸಾರಿಗೆಯಿಂದ ಪ್ರಯಾಣಿಕರನ್ನು ಮತ್ತು ಸರಕನ್ನು ಒಳನಾಡಿನಲ್ಲಿ ಸಾಗಿಸಲಾಗುತ್ತಿತ್ತು. ದೊಡ್ಡ ಪ್ರಮಾಣದ ಸರಕನ್ನು ಕಡಿಮೆ ಖರ್ಚಿನಲ್ಲಿ ರವಾನಿಸಲು ಅನುಕೂಲವಾಗಿದೆ. ರಸ್ತೆ ಸಾರಿಗೆ ವ್ಯವಸ್ಥೆ ಇಲ್ಲದ ಪ್ರದೇಶಗಳಲ್ಲಿ ಜಲಸಾರಿಗೆಯ ಪ್ರಾಮುಖ್ಯ ಹೆಚ್ಚಾಗಿದೆ. ಕರಾವಳಿ ಕರ್ನಾಟಕದಲ್ಲಿ ಮಂಗಳೂರು, ಮತ್ತು ಕಾರವಾರಗಳ ನಡುವೆ ಕೆಲವು

ನದಿಗಳಾದ ಕಾಳಿ, ಗಂಗಾವತಿ, ಅಘನಾಶಿನಿ, ಕೊಲ್ಲೂರು, ಸೀತಾ, ಗುರುಪುರ, ನೇತ್ರಾವತಿಗಳು ಒಳನಾಡಿನ ವ್ಯಾಪಾರಕ್ಕೆ ಬಳಕೆಯಾಗುತ್ತಿವೆ.

ನದಿ ವ್ಯಾಪಾರದ ಪರಿಣಾಮವು ತುಳುನಾಡಿನಲ್ಲಿ ಹೆಚ್ಚು ಇರಲಿಲ್ಲ. ಇದು ಕೆಲವು ಭೌಗೋಳಿಕ ಅಂಶಗಳ ಕಾರಣದಿಂದಾಗಿತ್ತು. ಮೊದಲಿಗೆ ಪಶ್ಚಿಮ ಘಟ್ಟ ಜಿಲ್ಲೆಯ ಪೂರ್ವದ ಗಡಿಯಾಗಿ ರೂಪುಗೊಂಡಿದೆ. ಈ ಪರ್ವತ ಶ್ರೇಣಿಯ ಕೆಲವು ಹಾದಿಗಳ ಮೂಲಕ ರಾಜ್ಯದ ಬಯಲುಪ್ರದೇಶದ ಭಾಗಗಳೊಂದಿಗೆ ಸಂವಹನ ಸಾಧ್ಯವಾಗಿಸಿಕೊಂಡಿದೆ[66] ಎಂದು ಕರುಣಾಕರ್‌ರವರು ತಿಳಿಸಿದ್ದಾರೆ. ಆದರೆ ನದಿಗಳ ಮೂಲಕ ತುಳುನಾಡಿನಲ್ಲಿ ಹೆಚ್ಚು ಸರಕುಗಳು ಸಾಗಾಣಿಕೆಯಾಗುತ್ತಿತ್ತು ಎಂಬುದನ್ನು ಲ. ನ. ಸ್ವಾಮಿಯವರು, ಮಾಲತಿ ಕೃಷ್ಣಮೂರ್ತಿಯವರು ವಿವರಿಸಿದ್ದಾರೆ.[67] ಈ ಮೇಲಿನ ಹೇಳಿಕೆಗಳಿಂದ ತಿಳಿಯುವುದೆಂದರೆ, ನದಿ ಮಾರ್ಗಗಳು ವ್ಯಾಪಾರಕ್ಕೆ ಅನುಕೂಲವಾಗಿದ್ದನ್ನು ಧೃಡಿಕರಿಸುತ್ತವೆ.

ತುಳುನಾಡಿನ ಹೆಚ್ಚಿನ ನದಿಗಳು ಪಶ್ಚಿಮ ಘಟ್ಟದಲ್ಲಿ ತಮ್ಮ ಹುಟ್ಟನ್ನು ಪಡೆದುಕೊಳ್ಳುತ್ತವೆ.[68] ಇದಲ್ಲದೆ ಘಟ್ಟಗಳು ಸಮುದ್ರದಿಂದ 80 ಕಿಲೋಮೀಟರ್‌ಗಳಿಗಿಂತಲೂ ಹೆಚ್ಚು ದೂರದಲ್ಲಿವೆ. ಆದ್ದರಿಂದ ಈ ನದಿಗಳು ಪ್ರತಿಯೊಂದು ಕಡೆಯೂ 160 ಕಿಲೋಮೀಟರ್‌ಗಳಿಗಿಂತ ಮೀರಿದೆ. ನೈಋತ್ಯ ಮಾನ್ಸೂನ್ ಮಳೆ, ಈ ನದಿಗಳಲ್ಲಿ ತ್ವರಿತವಾದ ಪ್ರವಾಹಗಳಾಗಿ ಪರಿವರ್ತಿತವಾಗಿ ಹಲವು ಬಾರಿ ವಿನಾಶಕಾರಕವಾಗಿ ಪರಿವರ್ತಿತವಾಗುತ್ತವೆ. ಅದಲ್ಲದೆ ನದಿಸಾರಿಗೆಗೆ ಅನುಕೂಲಕರ ನದಿಗಳಾದ ನೇತ್ರಾವತಿ, ಗುರುಪುರ, ಗಂಗೊಳ್ಳಿ, ಸೀತಾನದಿ ಮತ್ತು ಸ್ವರ್ಣಾನದಿಗಳನ್ನು ಸ್ಥಳೀಯ ವ್ಯಾಪಾರಿಗಳು ತಮ್ಮ ಸರಕುಗಳನ್ನು ಹಲವಾರು ವ್ಯಾಪಾರ ಕೇಂದ್ರಗಳಿಗೆ ಸಾಗಿಸಲು ಬಳಸಿದರು.[69] ಜಿಲ್ಲೆಯ ಉತ್ತರದ ಭಾಗಗಳಲ್ಲಿ ನದಿಗಳ ಮೂಲಕ ನೀರಿನ ಸಾಗಣೆಯ ಸಾಧ್ಯತೆ ಹೆಚ್ಚಾಗಿದ್ದಿತು.

ಮಂಗಳೂರು, ಭಟ್ಕಳ, ಹೊನ್ನಾವರ, ಮಲಬಾರ್‌ನ ಕೊಚ್ಚಿನ್ ಪುಲಿಕಾಟ್, ಪಸುಪಳ್ಳಿ ಮತ್ತು ಮಂಗಳೂರಿನ ಕಯಾಲ್ ನಡುವೆ ಸಣ್ಣ ಹಡಗುಗಳ ಮೂಲಕ ಅಂತರ–ಕರಾವಳಿ (Inter-Coastal) ವ್ಯಾಪಾರವನ್ನು ನಡೆಸಲಾಗುತ್ತಿತ್ತು.[70] ಅಕ್ಕಿ, ತೆಂಗಿನ ಎಣ್ಣೆ, ಬೆಲ್ಲ ಮತ್ತು ಇತರ ಪದಾರ್ಥಗಳು ಮಂಗಳೂರಿನಿಂದ ಹೊರಭಾಗಗಳಿಗೆ ಹೋಗುತ್ತವೆ. ಪ್ರತಿಯಾಗಿ ಹತ್ತಿ ಮತ್ತು ರೇಷ್ಮೆ ಸಾಮಾಗ್ರಿಗಳನ್ನು ತರಲಾಗುತ್ತಿತ್ತು. ಕರ್ನಾಟಕದ ಕರಾವಳಿಯ ಬಂದರುಗಳ ನಡುವಣ ವ್ಯಾಪಾರವು ಈ ಅವಧಿಯಲ್ಲಿಯೇ ಚುರುಕಾಗಿತ್ತು.

ಪ್ರಾಚೀನಕಾಲದಿಂದಲೂ ತುಳುನಾಡಿನ ನದಿಗಳು ಆಂತರಿಕ ವ್ಯಾಪಾರದಲ್ಲಿ ಪ್ರಮುಖಪಾತ್ರ ವಹಿಸಿವೆ. ನೇತ್ರಾವತಿ ನದಿಯು ಸಾಮಾನ್ಯ ಪ್ರವಾಹಕಾಲದಲ್ಲಿ ಉಪ್ಪಿನಂಗಡಿಯ ವರೆಗೆ ಸಂಚರಿಸಬಹುದಾದ ನದೀಮಾರ್ಗವಾಗಿತ್ತು. ಇದೇ ರೀತಿ ಕರಾವಳಿಯ ಬಹುತೇಕ ನದಿಗಳೆಲ್ಲವೂ ಸಾಕಷ್ಟು ದೂರದವರೆಗೆ ಸರಕು ಸಾಗಾಣಿಕೆಯನ್ನು ನದಿಮಾರ್ಗದಲ್ಲಿ ನೆರವೇರಿಸುತ್ತವೆ. ಇಂದು ನದಿ ಪಾತ್ರಗಳಲ್ಲಿ ಬಂದ ಅಣೆಕಟ್ಟುಗಳು, ಅರಣ್ಯಗಳ ಒತ್ತುವರಿ, ಗಣಿಗಾರಿಕೆ ಹಾಗೂ ಜನಸಂಖ್ಯೆ ಹೆಚ್ಚಳ, ವಸತಿ ಪ್ರದೇಶಗಳ ಬೆಳವಣಿಗೆ, ನದಿಯ ಹರಿವಿನ ಪ್ರಮಾಣವನ್ನು ನಿಯಂತ್ರಿಸುವುದರಿಂದ ಹಿಂದಿನ ಕಾಲದ ನೈಜ ಪ್ರದೇಶದವರೆಗೆ, ನಾವು ಇಂದು ಸಾಗಲು ಸಾಧ್ಯವಾಗುತ್ತಿಲ್ಲವಾದರೂ ಈ ನದಿಗಳು ಅತ್ಯುತ್ತಮ ಒಳನಾಡಿನ ವ್ಯಾಪಾರದ ಜೀವನಾಡಿಗಳಾಗಿ ಕಾರ್ಯನಿರ್ವಹಿಸುತ್ತಿದ್ದವು.[71] ತುಳುನಾಡಿನಲ್ಲಿ ಅನೇಕ ನದಿಗಳು ಮತ್ತು ಹಲವಾರು ಹಿನ್ನೀರುಗಳು ಇವೆ. ಈ ಪ್ರದೇಶದ ಮುಖ್ಯ ನದಿಗಳು, ಚಂದ್ರಗಿರಿ ಅಥವಾ ಪಯಸ್ವಿನಿ, ಬೇಕಲ್, ಚಿತ್ತಾರಿ, ಕವಾಯ್, ಕುಮಾರಧಾರಾ, ನೇತ್ರಾವತಿ, ಗುರುಪುರ, ಸುವರ್ಣಾ ಅಥವಾ ಸ್ವರ್ಣಾ, ಸೀತಾ ಮತ್ತು ಗಂಗೊಳ್ಳಿ (ಪಂಚಗಂಗಾವಳಿ), ಕಾಳಿ ನದಿಗಳಾಗಿವೆ. ಆದರೂ ಇವುಗಳ ಪೈಕಿ ಯಾವುದೂ 100 ಮೈಲಿಗಳಿಗಿಂತ ಹೆಚ್ಚು ಉದ್ದವಾಗಿಲ್ಲ. ನದಿಗಳು ಮತ್ತು ಹಿನ್ನೀರುಗಳು ಕೃಷಿಯ ಕಾರ್ಯಾಚರಣೆಗಳಿಗೆ ಅನುಕೂಲ ಕಲ್ಪಿಸುತ್ತವೆ. ಕೃತಕ ನೀರಾವರಿ ಮೇಲೆ ಅವಲಂಬನೆಯನ್ನು ಕಡಿಮೆಮಾಡುತ್ತವೆ. ಮತ್ತು ಬಹುತೇಕವಾಗಿ ಆಂತರಿಕ ಸಂವಹನವನ್ನು ಉತ್ತೇಜಿಸುತ್ತವೆ.[72]

ಕರಾವಳಿ ಕರ್ನಾಟಕದ ನದಿಗಳ ಒಳನಾಡಿನ ವ್ಯಾಪಾರದ ಮಾರ್ಗಗಳ ಬಗ್ಗೆ ನದಿಗಳು ಎಲ್ಲಿಯವರೆಗೆ ಸಂಚಾರಕ್ಕೆ ಯೋಗ್ಯವಾಗಿದ್ದವೆಂದು ದಾಖಲಿಸುತ್ತಾರೆ.[73] ಶರಾವತಿ ನದಿಯು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯಿಂದ ಸಮೀಪದ ಕವಲೇದುರ್ಗದ ಬಳಿ ಅಂಬುತೀರ್ಥದಲ್ಲಿ ಹುಟ್ಟುತ್ತದೆ. ಈ ನದಿಯ ಒಟ್ಟು ಉದ್ದವು 128 ಕಿ.ಮೀ. ಶರಾವತಿ ನದಿಯು ತಾಳಗುಪ್ಪದ ಬಳಿ ಜೋಗ್ ಫಾಲ್ಸ್ ಎಂದು ಕರೆಯಲ್ಪಡುವ ಜಲಪಾತವನ್ನು ಸೃಷ್ಟಿಸಿದೆ. ಇದು ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದ ಸಮೀಪ ಅರಬ್ಬೀ ಸಮುದ್ರವನ್ನು ಸೇರುತ್ತದೆ ಮತ್ತು ನಾಡದೋಣಿಗಳಾದ, ಮಚುವೆಗಳು, ಪತೆಮರಿಗಳಲ್ಲಿ ಗೇರುಸೊಪ್ಪಾವರೆಗೆ ಸಂಚರಿಸಬಹುದಾಗಿತ್ತು.

ನೇತ್ರಾವತಿ ನದಿಯು ತುಳುನಾಡಿನ ಪ್ರಮುಖ ನದಿಯಾಗಿದೆ. ಇದು ಪಶ್ಚಿಮ ಘಟ್ಟದ ಕುದುರಮುಖ ಶ್ರೇಣಿಯಲ್ಲಿ ಹುಟ್ಟಿ, ಬಂಗಾಡಿ ಕಣಿವೆಯ ಮುಖಾಂತರ ಹರಿದು, ಬೆಳ್ತಂಗಡಿ ತಾಲೂಕನ್ನು ದಾಟಿ, ಬಂಟ್ವಾಳದ ಮುಖಾಂತರ ಮಂಗಳೂರಿನೆಡೆ ಸಾಗಿ ಕೊಡಿಯಾಲದ ಬಳಿ ಅರಬೀಸಮುದ್ರವನ್ನು ಸೇರುತ್ತದೆ. ನದಿಯ ಹರಿವಿನ ಒಟ್ಟು ಉದ್ದ 96 ಕಿ.ಮೀ. ಮುಂಗಾರು ಮಳೆಯ ದಿನಗಳಲ್ಲಿ ನೇತ್ರಾವತಿಯಲ್ಲಿ ಅಧಿಕ ಪ್ರವಾಹವಿರುತ್ತದೆ. ಮಂಗಳೂರಿನ ಬಳಿ ನದಿಯ ಪಾತ್ರ ವಿಶಾಲವಾಗಿದ್ದು, ನದಿಯ ಮಧ್ಯೆ ಸಣ್ಣ ದ್ವೀಪಗಳಿವೆ. ಫಲವತ್ತಾಗಿರುವ ಈ ಭಾಗಗಳಲ್ಲಿ ಭತ್ತ ಮತ್ತು ಕಬ್ಬು ಬೆಳೆಗೆ ಅನುಕೂಲವಾಗಿದೆ. ನೇತ್ರಾವತಿ ನದಿಯು ಮಂಗಳೂರಿನಿಂದ ಬಂಟ್ವಾಳದವರೆಗೆ ಸದಾಕಾಲದಲ್ಲಿಯೂ, ಮಳೆಗಾಲದಲ್ಲಿ ಉಪ್ಪಿನಂಗಡಿಯವರೆಗೂ ನಾಡದೋಣಿಗಳಲ್ಲಿ ಸಂಚರಿಸಲು ಯೋಗ್ಯವಾಗಿದೆ.[74]

ಮುಲ್ಕಿ ನದಿಯು ಮಂಗಳೂರು ತಾಲೂಕನ್ನು ಉಡುಪಿ ಮತ್ತು ಕಾರ್ಕಳ ತಾಲೂಕುಗಳನ್ನು ಬೇರ್ಪಡಿಸುವ ಉತ್ತರ ಗಡಿಯಾಗಿ ಹರಿಯುತ್ತದೆ. ಪಯಸ್ವಿನಿ ನದಿಯು ಸುಳ್ಯ ತಾಲೂಕಿನ ದಕ್ಷಿಣದಲ್ಲಿ ಆಗ್ನೇಯದಿಂದ ವಾಯವ್ಯಕ್ಕೆ ಹರಿದು ಕೇರಳ ರಾಜ್ಯವನ್ನು ಪ್ರವೇಶಿಸುತ್ತದೆ. ಈ ನದಿಗಳ ದಾರಿಯುದ್ದಕ್ಕೂ ಜಿಲ್ಲೆಯ ಪ್ರಾಚೀನ ವ್ಯಾಪಾರಿ ಮಾರ್ಗಗಳಿದ್ದು, ಅವು ಇಂದು ಸಂಚಾರಿ ಮಾರ್ಗಗಳಾಗಿ ಪರಿವರ್ತಿತವಾಗಿವೆ. ಈ ಮಾರ್ಗಗಳ ಬಳಕೆ ಮತ್ತು ಅವುಗಳು ಸೇರುತ್ತಿದ್ದ ಗಮ್ಯವನ್ನು ಮುಂದಿನ ಪುಟಗಳಲ್ಲಿ ವಿಶ್ಲೇಷಿಸಲಾಗಿದೆ.

ಆಂತರಿಕ ವ್ಯಾಪಾರ ನದಿ ಮಾರ್ಗದ ಮೂಲಕವೂ ನಡೆಯುತ್ತಿತ್ತು[75] ಎಂದು ಹೇಳಲಾಗಿದೆ. ಮಳೆಗಾಲದಲ್ಲಿ ಮತ್ತು ಬೇಸಿಗೆಕಾಲದಲ್ಲಿ ದೋಣಿಗಳ ಮೂಲಕ ವ್ಯಾಪಾರ ನಡೆಯುತ್ತಿತ್ತು. ಮಂಗಳೂರಿನಿಂದ ಉಪ್ಪಿನಂಗಡಿ ತನಕ ನದಿ ಮುಖಾಂತರ ಸರಕು ಸಾಗಾಣಿಕೆ ನಡೆಯುತ್ತಿತ್ತು. ಆದರೆ ಕೆಲವು ಪ್ರದೇಶಗಳಲ್ಲಿ ಆಳ ಇಲ್ಲದೇ ಇರುವುದರಿಂದ ಹಾಗೂ ನೀರಿನ ಹರಿವು ಕಡಿಮೆ ಇರುವುದು ನದಿ ಮೂಲಕ ವ್ಯಾಪಾರಕ್ಕೆ ಅನನುಕೂಲವಾಗಿತ್ತು. ನದಿಗಳ ಮೂಲದ ವ್ಯಾಪಾರ ಮಾರ್ಗಗಳಲ್ಲಿ ಕಾಳಿನದಿ ಮುಖ್ಯವಾದುದು. ಈ ನದಿಯು ಗೇರುಸೊಪ್ಪೆಯ ತನಕ ಸಂಪರ್ಕ ಕಲ್ಪಿಸಿತ್ತು. ಗೇರುಸೊಪ್ಪೆಯವರೆಗೆ ಈ ನದಿಯ ಅಕ್ಕಪಕ್ಕದಲ್ಲಿ ಉದ್ದಕ್ಕೂ ಪ್ರಾಚೀನ ಊರುಗಳು ಸಿಕ್ಕುತ್ತವೆ. ಈ ಪ್ರದೇಶದಲ್ಲಿ ಭೂಮಾರ್ಗ ಸಂಪರ್ಕವೂ ಇತ್ತು. ಸರಕು ಸಾಗಾಣಿಕೆಗೆ ಹೆಚ್ಚಾಗಿ ಹಡಗುಗಳನ್ನು ಬಳಸುತ್ತಿದ್ದರು. ಇದರಿಂದ ಕಡಿಮೆ ಖರ್ಚಿನಲ್ಲಿ ಹೆಚ್ಚು ಸರಕುಗಳನ್ನು ಸಾಗಾಟ ಮಾಡಲು ಸಾಧ್ಯವಾಗುತ್ತಿತ್ತು. ಕೇವಲ

ಸರಕುಗಳನ್ನು ಹಡಗಿಗೆ ತುಂಬಿಸುವಾಗ ಮತ್ತು ಕೆಳಗಿಳಿಸುವಾಗ ಮಾತ್ರವೇ ಶ್ರಮಿಕ ವರ್ಗದವರನ್ನು ಬಳಸುತ್ತಿದ್ದರು. ಇಲ್ಲಿನ ಜನ ಮಳೆಗಾಲದಲ್ಲಿ ಬೇಸಾಯದಲ್ಲಿ ತೊಡಗುತ್ತಿದ್ದರು. ಅಲ್ಲದೆ ಜನಸಂಖ್ಯೆ ಸಹ ಕಡಿಮೆ ಇದ್ದು ಉದ್ಯೋಗಗಳು ವಿಪುಲವಾಗಿದ್ದವು. ಹಾಗಾಗಿ ಪಶ್ಚಿಮ ಕರಾವಳಿಯಲ್ಲಿ ನದಿ ಮಾರ್ಗಗಳ ಬಳಕೆ ಹೆಚ್ಚಿತ್ತು. ಕಷ್ಟದಾಯಕ ಕೆಲಸ ಇದಾಗಿತ್ತು. ಇದರ ಅವಲಂಬಿಗಳು ಅಲ್ಪ ಪ್ರಮಾಣದಲ್ಲಿದ್ದರು. ಅದಕ್ಕಾಗಿ ನದಿಗಳ ಮೂಲಕವೇ ಸಾಗಾಣಿಕೆಗೆ ಮುಂದಾಗಿದ್ದರು.

ಮಳೆಗಾಲದಲ್ಲಿ ಸಂಪರ್ಕ ವಂಚಿತವಾಗುವುದು ಸಾಮಾನ್ಯ ಅನುಭವವಾಗಿತ್ತು. ಇಲ್ಲಿ ಸಮತಟ್ಟಾಗಿರುವ ಪ್ರದೇಶಗಳು ಅಪರೂಪವಾಗಿರುವುದರಿಂದ ವರ್ಷಋತುವಿನಲ್ಲಿ ನದಿಗಳ ನೀರಿನ ಹರಿವಿನಲ್ಲಿ ವ್ಯತ್ಯಯ ತೀವ್ರತರವಾಗಿತ್ತು. ಇತರ ಋತುಗಳಲ್ಲಿ ಅಸಮಾನತೆ ಇದ್ದರೂ ನಾಡದೋಣಿ ಸಂಚಾರಕ್ಕೆ ಅಲ್ಲಲ್ಲಿ ಅನುಕೂಲಕರವಾಗಿದ್ದವು. ತುಳುನಾಡಿನ ನದಿಗಳು ಎಲ್ಲಾ ಕಡೆಯಲ್ಲಿ ದೋಣಿ ಪ್ರಯಾಣಕ್ಕೆ ಪ್ರಶಸ್ತವಾಗಿಲ್ಲ. ಅವುಗಳು ಸಮುದ್ರ ತಲುಪುವಾಗ ಅಥವಾ ಕೆಲವು ಸಮತಟ್ಟು ಪ್ರದೇಶಗಳಲ್ಲಿ, ಅದೂ ವರ್ಷದ ಕೆಲವು ಸಮಯದಲ್ಲಿ ಮಾತ್ರ ದೋಣಿ ಪ್ರಯಾಣವನ್ನು ಸಾಧ್ಯವಾಗಿಸುತ್ತವೆ. ಈ ಭೌಗೋಳಿಕ ವಾಸ್ತವತೆಯು ತುಳುನಾಡಿನ ಆಂತರಿಕ ಸಾಂಸ್ಕೃತಿಕ ವೈವಿಧ್ಯಗಳನ್ನು ರೂಪಿಸಿವೆ. ಇದು ತುಳು ಜಾನಪದದಲ್ಲಿ ವಿಶೇಷವಾಗಿ ಪ್ರತಿಬಿಂಬಿತವಾಗಿದೆ. ದೈವಗಳ ಸಂಚಾರವನ್ನು ತಿಳಿಸುವ ಮಾರ್ಗವಾಗಿ, ಅವುಗಳ ಪ್ರಭಾವದ ಎಲ್ಲೆಗಳಾಗಿ ಅವುಗಳು ಕಂಡುಬರುತ್ತವೆ. ವಿಶೇಷವೆಂದರೆ ಇಲ್ಲಿಯ ನದಿಗಳು ಬೇಸಾಯದ ಸಹಾಯಕ ಶಕ್ತಿಯಾಗಿ ವಿವರಣೆಗೊಂಡೇ ಇಲ್ಲ. ಬಹುತೇಕ ತುಳು ಜಾನಪದವು ಬೇಸಾಯಕ್ಕೆ ಕೇಂದ್ರಿತವಾಗಿರುವುದು. ಈ ಪ್ರದೇಶದಲ್ಲಿ ಅನೇಕ ನದಿಗಳು ಹರಿಯುತ್ತಿರುವುವಾದರೂ ಇಲ್ಲಿಯ ಬೇಸಾಯವು ನದಿಗಳನ್ನು ಹೆಚ್ಚಾಗಿ ಅವಲಂಬಿಸದೇ ಇರುವುದೂ ವಿಪರ್ಯಾಸ.[70] ದೋಣಿಗಳ ಮೂಲಕ ಬಹುತೇಕ ಊರುಗಳಿಗೆ ಸರಕುಗಳನ್ನು ಸಾಗಿಸುತ್ತಿದ್ದರು. ಇಲ್ಲಿ, ಹಂಜಮಾನರು, ಮೂರರು, ನಖರರು, ಸೆಟ್ಟಿಕಾರರು, ಕೋಮ್ಟಿಗಳು, ಚೆಟ್ಟಿಯಾರ್ಗಳ್, ಹಲರು ಮುಂತಾದ ವ್ಯಾಪಾರಿ ಸಂಘಗಳ ವರ್ತಕರು ವ್ಯಾಪಾರ ವಹಿವಾಟಿನಲ್ಲಿ ತೊಡಗಿಕೊಂಡಿದ್ದರು. ಸ್ಥಳೀಯವಾಗಿ ಮಚುವೆಗಳನ್ನು ವ್ಯಾಪಾರಕ್ಕಾಗಿ ಬಳಸುತ್ತಿದ್ದರು. ಜಲಸಾರಿಗೆ ಆಗಿನ ಕಾಲದಲ್ಲಿ ಹೆಚ್ಚು ಪ್ರಾಮುಖ್ಯ ಪಡೆದುಕೊಂಡಿತ್ತು. ಭೂಮಾರ್ಗಗಳು ಕಿರಿದಾಗಿದ್ದು ಕೇವಲ ಎತ್ತಿನ ಗಾಡಿ ಹೋಗಲು ಮಾತ್ರವೇ ಸಾಧ್ಯವಿದ್ದಿತ್ತು. ಹೆಚ್ಚಾಗಿ

ದೋಣಿಗಳ ಮುಖಾಂತರವೇ ಸರಕು ಸಾಗಿಸುತ್ತಿದ್ದರು. ವ್ಯಾಪಾರ ಮಾಡಲು ಮತ್ತು ಜನರು ಓಡಾಡಲು ದೋಣಿಗಳನ್ನು ಬಳಸುತ್ತಿದ್ದರು. ಘಟ್ಟದ ಪ್ರದೇಶಗಳಿಂದ ಅಕ್ಕಿ, ಕಾಳುಮೆಣಸು, ಇತರ ಸಾಮಗ್ರಿಗಳ ವ್ಯಾಪಾರ ವಹಿವಾಟಿಗೆ ಕರಾವಳಿ ಬಂದರಿಗೆ ಬರುತ್ತಿದ್ದವು. ಕಾರಾವಾರ, ಹೊನ್ನಾವರ, ಕುಮುಟ, ಗಂಗೊಳ್ಳಿ, ಬಸ್ರೂರು, ಬಾರಕೂರು, ಮಂಗಳೂರು, ಪ್ರಮುಖ ಬಂದರು ಪ್ರದೇಶಗಳಲ್ಲಿ ಆಮದು ಮತ್ತು ರಫ್ತಾಗುತ್ತಿದ್ದವು.

ಇದಲ್ಲದೆ ಭಟ್ಕಳ, ಅಂಕೋಲ, ಮಿರ್ಜಾನ್, ಹೊನ್ನಾವರ, ಬೈಂದೂರು, ಬಸ್ರೂರು, ಬಾರ್ಕೂರು, ಮಂಗಳೂರು ಮತ್ತು ಕುಂಬಳೆಗಳು ಆ ಕಾಲದ ಪ್ರಮುಖ ಬಂದರುಗಳಾಗಿದ್ದವು. ಅಕ್ಕಿ, ತೆಂಗಿನಕಾಯಿ, ತೆಂಗಿನನಾರು, ಕಾಳುಮೆಣಸು ಮುಂತಾದವುಗಳನ್ನು ಈ ಕರಾವಳಿಯುದ್ದಕ್ಕೂ ದೋಣಿಗಳಲ್ಲಿ ವಿವಿಧ ಬಂದರುಗಳಿಗೆ ಸಾಗಿಸಲಾಗುತ್ತಿತ್ತು. ಭಟ್ಕಳ, ಬಸ್ರೂರು ಮತ್ತು ಬಾರ್ಕೂರು ಬಂದರುಗಳಿಂದ ಶ್ರೇಷ್ಠ ಗುಣಮಟ್ಟದ ಬಿಳಿ ಅಕ್ಕಿಯನ್ನು ರಫ್ತುಮಾಡಲಾಗುತ್ತಿತ್ತು. ದಕ್ಷಿಣದ ಬಂದರುಗಳಾದ ಮಂಗಳೂರು ಮತ್ತು ಕುಂಬಳೆಗಳಿಂದ ದಪ್ಪ ಮತ್ತು ಒರಟಾದ ಕೆಂಪು, ಕಪ್ಪು ಹಾಗೂ ಕಡಿಅಕ್ಕಿಯನ್ನು ರಫ್ತು ಮಾಡಲಾಗುತ್ತಿತ್ತು. ಈ ಕರಾವಳಿಯ ಬಂದರುಗಳಿಂದ ಮಲಬಾರ್ ಪ್ರದೇಶಕ್ಕೂ, ಕೊಂಕಣ ಪ್ರದೇಶ, ಪರ್ಶಿಯನ್ ಕೊಲ್ಲಿ ಮತ್ತು ಕೆಂಪುಸಮುದ್ರದ ಬಂದರುಗಳಿಗೂ ಅಕ್ಕಿಯನ್ನು ರಫ್ತು ಮಾಡಲಾಗುತ್ತಿತ್ತು.[76] ಕ್ರಿ.ಶ. 1560ರ ನಂತರ ತುಳುನಾಡಿನ ಬಂದರುಗಳಿಂದ ಗೋವಾಕ್ಕೆ ನಿರಂತರವಾಗಿ ಸಮುದ್ರ ಮುಖಾಂತರ ಅಕ್ಕಿ ರಫ್ತಾಗುತ್ತಿತ್ತು. ಇದರಲ್ಲಿ ಅತೀ ಹೆಚ್ಚು ಪ್ರಮಾಣದಲ್ಲಿ ಬೈಂದೂರು, ಬಸ್ರೂರು, ಬಾರ್ಕೂರು ಮತ್ತು ಮಂಗಳೂರುಗಳಿಂದಲೆ ಅಕ್ಕಿ ಸಾಗಾಟ ನಡೆಯುತ್ತಿತ್ತು. ಅಕ್ಕಿಯ ಜೊತೆಗೆ, ಪೋರ್ಚುಗೀಸರು ಕೆನರಾ ಕರಾವಳಿಯ ಬಂದರುಗಳಿಂದ ಕಾಳುಮೆಣಸನ್ನು ಒಯ್ಯುತ್ತಿದ್ದರು.[77] ಕರಾವಳಿಯಲ್ಲಿ ಆಂತರಿಕ ವಾಣಿಜ್ಯ ವ್ಯವಹಾರಗಳು ನದಿಗಳ ಹಾಗೂ ಹಿನ್ನೀರುಗಳ ಮೂಲಕ ನಡೆಯುತ್ತಿತ್ತು. "ಇಡೀ ತುಳುನಾಡಿನ ವ್ಯಾಪಾರ ದೋಣಿ, ಪತ್ತೇಮರ ಮತ್ತು ಜನರ ಇನ್ನಿತರ ಸ್ವಂತ ಸಾಧನಗಳಿಂದ ನಿರ್ವಹಿಸಲ್ಪಡುತ್ತಿತ್ತು. ಪತ್ತೆಮರಿ ಎಂಬ ಹೆಸರಿನ ಹಡಗನ್ನು ಕರಾವಳಿಯ ಇನ್ನಿತರ ಬಂದರುಗಳೊಂದಿಗೆ ಲಕ್ಷದ್ವೀಪಕ್ಕೆ ಮತ್ತು ಏಡನ್ ಹಾಗೂ ಇತರ ಅರೇಬೀಯನ್ ಸಮುದ್ರದ ರೇವು ಪಟ್ಟಣಗಳೊಂದಿಗಿನ ವ್ಯಾಪಾರಕ್ಕೆ ಬಳಸಲಾಗುತ್ತಿತ್ತೆಂಬ ಮಾಹಿತಿ ದೊರೆಯುತ್ತದೆ.[78] ತುಳುನಾಡಿನಲ್ಲೇ ಮಂಗಳೂರಿನ ಹೊರತಾಗಿ ಬೇರೆಲ್ಲೂ ದೊಡ್ಡ ಹಡಗುಗಳಿಗೆ

ತಂಗುದಾಣವಿರಲಿಲ್ಲ:" ಎಂಬುದು ಕಲೆಕ್ಟರ್ ರೇವನ್‌ಶಾನ ಹೇಳಿಕೆ.[79] ಬುಖಾನನ್ ವರದಿಯಲ್ಲಿ ತಿಳಿಸುವಂತೆ ತುಳುನಾಡಿನಲ್ಲಿ ಹರ್ತಟ್ಟು ಮತ್ತು ಕುಂದಾಪುರಗಳ ನಡುವಿನ ಪ್ರದೇಶ ಬಂಡಿಗಳ ಉಪಯೋಗಕ್ಕೆ ಅನುಕೂಲವಾಗಿತ್ತು.[80] ಥ್ಯಾಕರೆ ಪ್ರಕಾರ ಒಂದು ಮುಖ್ಯವಾದ ರಸ್ತೆ ತುಳುನಾಡಿನಲ್ಲಿ ದಕ್ಷಿಣ ತುದಿಯಾದ ಕವ್ವೆ ನದಿಯಿಂದ ಉತ್ತರದ ಸದಾಶಿವಘಡದ ವರೆಗಿದ್ದರೂ, ಹಲವಾರು ಸೇತುವೆ ರಹಿತ ನದಿಗಳಿಂದಾಗಿ ಸಂಚಾರಕ್ಕೆ ಅಲ್ಲಲ್ಲಿ ದೋಣಿಗಳನ್ನು ಬಳಸಬೇಕಾಗಿದ್ದು, ಬಹಳ ಕಷ್ಟಕರವಾಗಿತ್ತು. ಇಲ್ಲಿ ಜನರೇ ದೋಣಿಗಳ ವ್ಯವಸ್ಥೆ ಮಾಡಿಕೊಂಡಿದ್ದರಿಂದ, ಹಿನ್ನೀರುಗಳು ಸಾಕಷ್ಟು ಅಗಲವಾಗಿದ್ದುದರಿಂದ ಯಾವುದೇ ಸೇತುವೆ ವ್ಯವಸ್ಥೆ ನಿರ್ಮಾಣಗೊಂಡಿರಲಿಲ್ಲ.

ಪ್ರಾಚೀನ ತುಳುನಾಡಿನ ಆಂತರಿಕ ವ್ಯಾಪಾರದಲ್ಲಿ ಭೂಮಾರ್ಗವು ಪ್ರಮುಖವಾಗಿತ್ತು. ಭೂಮಾರ್ಗಗಳು ಆಂತರಿಕ ವ್ಯಾಪಾರಕ್ಕೆ ಗಣನೀಯ ಸೌಲಭ್ಯಗಳನ್ನು ಒದಗಿಸುತ್ತವೆ. ಜಿಲ್ಲೆಯು ಸುಮಾರು 900 ಮೈಲುಗಳಷ್ಟು ಮಣ್ಣಿನ ರಸ್ತೆಯನ್ನು ಹೊಂದಿತ್ತು. ಗ್ರಾಮದ ರಸ್ತೆಗಳೂ ಬಂಡಿಗಳಿಗೆ ಸೂಕ್ತವಾಗಿವೆ. ಭೂಮಾರ್ಗಗಳ ಮೂಲಕ ವ್ಯಾಪಾರದ ಬಗ್ಗೆ ತಿಳಿದು ಕೊಳ್ಳಬೇಕಾದರೆ ಪಶ್ಚಿಮ ಘಟ್ಟಗಳಲ್ಲಿ ನಿರ್ಗಮಿಸುವ ಕಣಿವೆ ಮಾರ್ಗಗಳ ಮೂಲಕ, ಭೂಮಾರ್ಗಗಳ ಆಂತರಿಕ ವ್ಯಾಪಾರವನ್ನು ನಡೆಸಲಾಯಿತು. ಮಂಗಳೂರು ಕೊಡಗಿನೊಂದಿಗೆ ಸಂಪರ್ಕ ಹೊಂದಿದೆ ಮತ್ತು ಮೈಸೂರು ಸಂಪಾಜೆ ಘಾಟ್ ಮೂಲಕ ಮತ್ತು ಶಿವಮೊಗ್ಗ ಆಗುಂಬೆ ಘಾಟ್ ಮೂಲಕ ಸಂಪರ್ಕ ಹೊಂದಿದೆ. ಚಾರ್ಮಾಡಿ, ಮತ್ತು ಶಿರಾಡಿ, ಸುಬ್ರಮಣ್ಯ, ಬಿಸಲೆಘಾಟ್‌ಗಳು, ಮಂಗಳೂರಿನಿಂದ ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳನ್ನು ಸಂಪರ್ಕಿಸುತ್ತವೆ.[81] ವಿಜಯನಗರ ಆಡಳಿತಗಾರರ ಕಾಲದಲ್ಲಿ ಮತ್ತು ಕೆಳದಿ ಆಡಳಿತಗಾರರ ಅವಧಿಯಲ್ಲಿ ರಸ್ತೆಗಳು ಉತ್ತಮವಾಗಿ ನಿರ್ವಹಿಸಲ್ಪಟ್ಟವು ಹಾಗೂ ಈ ಮಾರ್ಗಗಳ ಮೂಲಕ ಸರಕು ಸಾಗಿಸುವ ವ್ಯಾಪಾರಿಗಳಿಗೆ ಎಲ್ಲಾ ಸೌಲಭ್ಯಗಳನ್ನು ಒದಗಿಸಲಾಗಿದೆ. ಪಿಯೆಟ್ರಾ, ಡೆಲ್ಲಾವೆಲ್ಲಿ[82] ಹೇಳುವಂತೆ, ವೆಂಕಟಪ್ಪ ನಾಯಕನ ದೇಶದಲ್ಲಿ ಹೆದ್ದಾರಿಗಳು ಬಹಳ ಸುರಕ್ಷಿತವಾಗಿವೆ ಮತ್ತು ಇಕ್ಕೇರಿಗೆ ಹೋಗುವ ರಸ್ತೆಯ ಎರಡೂ ಬದಿಯಲ್ಲಿ "ವಿಶಾಲವಾದ ಪ್ರದೇಶದಲ್ಲಿ ಎತ್ತರವಾದ ಹಾಗೂ ಉತ್ತಮವಾದ ಮರಗಳನ್ನು ನೆರಳಿಗಾಗಿ ಬೆಳೆಸಿದ್ದಾರೆ. ದಪ್ಪದಾದ ಕೊಂಬೆಗಳನ್ನು ಈ ಮರಗಳಲ್ಲಿ ನೋಡಿ ನಿಜಕ್ಕೂ ಅವರ ದಿನಗಳಲ್ಲಿ ಇಂತಹ ಒಂದು ನೈಸರ್ಗಿಕ ತೋಟವನ್ನು ನೋಡಲಿಲ್ಲ" ಎಂದು ಬಣ್ಣಿಸಿದ್ದಾನೆ.

ಅಲೆಕ್ಸಾಂಡರ್ ಹ್ಯಾಮಿಲ್ಟನ್[83] ತಿಳಿಸುವಂತೆ, "ಅನೇಕ ಸ್ಥಳಗಲ್ಲಿ, ಗುಡಿಸಲುಗಳನ್ನು ಕಟ್ಟಲಾಗಿದೆ. ಇಲ್ಲಿ ವಯಸ್ಸಾದ (ಹಳೆಯ) ಜನರು ದಿನದ ಸಮಯವನ್ನು ಕಳೆಯುತ್ತಾರೆ. ಪ್ರಯಾಣಿಕರಿಗೆ ಉಚಿತವಾಗಿ ಕುಡಿಯಲು ನೀರಿನ ವ್ಯವಸ್ಥೆ ಮಾಡಲಾಗಿತ್ತು. ಹೀಗಾಗಿ ಭೂಮಾರ್ಗಗಳ ಮೂಲಕ ವ್ಯಾಪಾರ ನಡೆಸುವ, ವ್ಯಾಪಾರಿಗಳ ಸುರಕ್ಷತೆಗಾಗಿ ರಾಜ್ಯವು ಸಾಕಷ್ಟು ಕ್ರಮಗಳನ್ನು ಕೈಗೊಂಡಿದೆ ಎಂಬುದು ಸ್ಪಷ್ಟವಾಗಿದೆ ಮತ್ತು ದೀರ್ಘಪ್ರಯಾಣದಲ್ಲಿದ್ದವರಿಗೆ ಕನಿಷ್ಠ ಸೌಲಭ್ಯಗಳನ್ನು ಒದಗಿಸಲಾಗಿದೆ.

ಸಮಕಾಲೀನ ದಾಖಲೆಗಳು ವಿವಿಧ ವಿಧಾನಗಳನ್ನು ಉಲ್ಲೇಖಿಸುತ್ತವೆ. ಆನೆಗಳು, ಕುದುರೆಗಳು, ಹೇಸರಗತ್ತೆಗಳು, ಅರಮನೆಗಳು, ಸೂಳುಗಳು (Waste-Lotters) ಬುಲಕ್ ಕಾರ್ಟ್‌ಗಳು, ಪ್ಯಾಕ್-ಎತ್ತುಗಳು, ಕುದುರೆಗಳು (Ponies), ಎಮ್ಮೆ ಕೂಡಾ ಇವೆ. ಇವುಗಳ ಮೂಲಕ ವ್ಯಾಪಾರದ ಸರಕುಗಳು ಸ್ಥಳದಿಂದ ಸ್ಥಳಕ್ಕೆ ಸಾಗಿಸಲ್ಪಡುತ್ತವೆ. ಮತ್ತು ಸಾಮಾನ್ಯ ವ್ಯಾಪಾರಿಗಳ ಬುಲಕನ್ನು ಶ್ರೀಮಂತರು ಬಳಸುತ್ತಿದ್ದರು. ಪುರುಷರು ಸಹ ಸಂವಹನದ ಸಾಧನವಾಗಿ ಸೇವೆ ಸಲ್ಲಿಸಿದರು.[84] ಪುರುಷರು ಮತ್ತು ಮಹಿಳೆಯರಿಂದ ಕಡಿಮೆ ದೂರದಲ್ಲಿರುವ ಸ್ಥಳಗಳಿಗೆ ವಾಣಿಜ್ಯ ಸರಬರಾಜುಗಳನ್ನು ತಲೆಯ ಮೇಲೆ ಸಾಗಿಸಲಾಯಿತು. ಭೂಮಿ ವ್ಯಾಪಾರದ ಸರಕುಗಳಲ್ಲಿ, ಮೆಣಸು ಕಡಲೆಕಾಯಿ, ಹಣ್ಣುಗಳು, ಶ್ರೀಗಂಧದ ಮರ, ಏಲಕ್ಕಿ, ಜಿರಿಗೆ ಬೀಜಗಳು, ಇಂಗು, ಕಬ್ಬಿಣ, ಬೇಳೆಕಾಳುಗಳು, ಸಾಸಿವೆ, ತಂಬಾಕು, ಒಣತೆಂಗಿನಕಾಯಿ, ಖರ್ಜೂರ, ಹುಣಸೆಹಣ್ಣು, ಕಾಚು, ರೇಷ್ಮೆ ಮತ್ತು ಹತ್ತಿ ಜವಳಿ, ಅರಿಶಿನ, ಶುಂಠಿ, ಬಿದಿರು ಬುಟ್ಟಿಗಳು, ಬೆಲ್ಲ, ತುಪ್ಪ ಎಣ್ಣೆ, ಉಪ್ಪು, ಅಕ್ಕಿ, ರಾಗಿ, ಭತ್ತ, ಕಸೂಲೆ ಮತ್ತು ಧಾನ್ಯ ಇವೆಲ್ಲಾ ಈ ಅವಧಿಯಲ್ಲಿ ಭೂಮಾರ್ಗಗಳ ಮೂಲಕ ವ್ಯಾಪಾರವಾಗುತ್ತಿದ್ದ ಸರುಕುಗಳಿಗೆ ಸಾಕ್ಷಿಯಾಗಿದೆ.[85]

ತುಳುನಾಡಿನ ಆಂತರಿಕ ವ್ಯಾಪಾರದ ಸಾಮಗ್ರಿಗಳನ್ನು ಮತ್ತು ವ್ಯಾಪಾರಿಗಳನ್ನು ಎಂಟು ವಿಭಾಗವಾಗಿ ವರ್ಗೀಕರಿಸಬಹುದು. ಅಂದರೆ, ಆಹಾರ ಸಾಮಾಗ್ರಿಗಳು, ಹಣ್ಣುಗಳು, ಮಸಾಲೆಗಳು, ಲೋಹಗಳು, ಜವಳಿ, ಪ್ರಾಣಿಗಳು, ಐಷಾರಾಮಿ ಸರಕುಗಳು ಮತ್ತು ದಿನನಿತ್ಯದ ಬಳಕೆಯ ವಸ್ತುಗಳು. ಆಹಾರದ ಸಾಮಗ್ರಿಗಳೆಂದರೆ ಅಕ್ಕಿ, ಗೋಧಿ, ಭತ್ತ, ವಿವಿಧ ರೀತಿಯ ಧಾನ್ಯಗಳು, ಮೀನು, ಮೆಣಸಿನಕಾಯಿ, ಹಾಲು, ಸಕ್ಕರೆ, ತೆಂಗಿನ ಎಣ್ಣೆ, ಬೆಲ್ಲ, ಉಪ್ಪು, ಮತ್ತು ತುಪ್ಪ ಮೊದಲಾದ ವಿವಿಧ ಧಾನ್ಯಗಳನ್ನು ಒಳಗೊಂಡಿವೆ.[86] ಅಕ್ಕಿ, ತೆಂಗಿನಕಾಯಿ,

ತೆಂಗಿನನಾರು, ಕಾಳುಮೆಣಸು ಮುಂತಾದವುಗಳನ್ನು ಈ ಕರಾವಳಿಯುದ್ದಕ್ಕೂ ದೋಣಿಗಳ ಮೂಲಕ ವಿವಿಧ ಬಂದರುಗಳಿಗೆ, ಒಳನಾಡಿನ ವ್ಯಾಪಾರ ಕೇಂದ್ರಗಳಿಗೆ ಸಾಗಿಸಲಾಗುತ್ತಿತ್ತು. ಭಟ್ಕಳ, ಬಸ್ರೂರು ಮತ್ತು ಬಾರ್ಕೂರು ಬಂದರುಗಳಿಂದ ಶ್ರೇಷ್ಠ ಗುಣಮಟ್ಟದ ಬಿಳಿ ಅಕ್ಕಿಯನ್ನು ರಫ್ತು ಮಾಡಲಾಗುತ್ತಿತ್ತು. ದಕ್ಷಿಣದ ಬಂದರುಗಳಾದ ಮಂಗಳೂರು ಮತ್ತು ಕುಂಬಳೆಗಳಿಂದ ದಪ್ಪ, ಒರಟಾದ ಕಪ್ಪು, ಕೆಂಪು ಮತ್ತು ಕಡಿ ಅಕ್ಕಿಯನ್ನು ರಫ್ತು ಮಾಡಲಾಗುತ್ತಿತ್ತು. ಈ ಕರಾವಳಿ ಬಂದರುಗಳಿಂದ ಮಲಬಾರ್ ಪ್ರದೇಶಕ್ಕೂ, ಕೊಂಕಣ ಪ್ರದೇಶ, ಪರ್ಶಿಯನ್ ಕೊಲ್ಲಿ ಮತ್ತು ಕೆಂಪು ಸಮುದ್ರದ ಬಂದರುಗಳಿಗೂ ಅಕ್ಕಿಯನ್ನು ರಫ್ತು ಮಾಡುತ್ತಿದ್ದರು[87]

ಪ್ರಮುಖ ವ್ಯಾಪಾರಿಗಳಾದ ಅರಬ್ಬರು ರಾಷ್ಟ್ರಕೂಟರ ಕಾಲದಲ್ಲಿ ತುಳುನಾಡಿಗೆ ಬಂದರು. ರಾಷ್ಟ್ರಕೂಟರ ಕಾಲದಲ್ಲಿ ಪಶ್ಚಿಮದ ಕರಾವಳಿಗೆ ಆಗಮಿಸಿದ ಅರಬ್ಬರು ಕರ್ನಾಟಕದ ಅಥವಾ ದಕ್ಷಿಣ ಕೊಂಕಣದ ಬಂದರುಗಳಾದ ಕಾರವಾರ, ಹೊನ್ನಾವರ, ಭಟ್ಕಳ, ಬಸರೂರು, ಬಾರಕೂರು, ಮಂಗಳೂರು ಪ್ರದೇಶಗಳಲ್ಲಿ ನೆಲಸಿ ಈ ಪ್ರದೇಶದ ವ್ಯಾಪಾರದ ಅಭಿವೃದ್ಧಿಗೆ ಕಾರಣರಾದರು. ಆದರೆ ಹೊಯ್ಸಳರು ಪ್ರವರ್ಧಮಾನಕ್ಕೆ ಬಂದನಂತರ ಕರ್ನಾಟಕದ ಕಡಲ ತೀರದಲ್ಲಿ ರಾಜಕೀಯ ಬದಲಾವಣೆಗಳಾದವು. ದೋರಸಮುದ್ರವು ಹೊಯ್ಸಳರ ರಾಜಧಾನಿ ಯಾಗಿ ಮಾರ್ಪಟ್ಟಿತ್ತು. ರಾಜಧಾನಿಗೆ ಹತ್ತಿರದ ಬಂದರುಗಳಲ್ಲಿ ವಿದೇಶೀಯ ಮತ್ತು ದೇಶೀಯ ವ್ಯಾಪಾರಿಗಳು ಬಂದು ನೆಲೆಸಿದ್ದಲ್ಲದೆ ಇಲ್ಲಿನ ವ್ಯಾಪಾರ ಮತ್ತು ವಹಿವಾಟಿನ ಮೇಲೆ ಅಧಿಕವಾದ ಪ್ರಭಾವ ಬೀರಿದ್ದರು. ಸಂಪರ್ಕ ಮಾರ್ಗಗಳಲ್ಲಿ ನಿರಂತರವಾಗಿ ನಡೆಯುತ್ತಿದ್ದ ಸೈನಿಕ ಮತ್ತು ರಕ್ಷಿತ ವ್ಯಾಪಾರಿಗಳ ಓಡಾಟ ಇಲ್ಲಿನ ಕಳ್ಳಕಾಕರ ಹಾವಳಿಯನ್ನು ಅತ್ಯಂತ ಕನಿಷ್ಠಮಟ್ಟಕ್ಕೆ ಇಳಿಸಿದ್ದಿತು. ಇವೆಲ್ಲವೂ ಹೊಯ್ಸಳರು ತಮ್ಮ ರಾಜಧಾನಿಯನ್ನು ದಕ್ಷಿಣದ ಭಾಗದಲ್ಲಿ ಹೊಂದಿದ್ದರ ಪರಿಣಾಮವಾಗಿದ್ದಿತು.

ತುಳುನಾಡು ಹಲವಾರು ನೈಸರ್ಗಿಕ ಬಂದರುಗಳನ್ನು ಹೊಂದಿತ್ತು. ಅವುಗಳಲ್ಲಿ ಭಟ್ಕಳ ಅಂತಾರಾಷ್ಟ್ರೀಯ ವಾಣಿಜ್ಯ ಕೇಂದ್ರವಾಗಿತ್ತು. ತುಳುನಾಡಿಗೂ ಮಲೆನಾಡಿಗೂ ನಡುವಿನ ಸಂಪರ್ಕವು ದುರ್ಗಮ ಬೆಟ್ಟ ಮತ್ತು ಕಣಿವೆಗಳ ಮೂಲಕ ಕಾಲುದಾರಿ ಮತ್ತು ರಸ್ತೆಗಳ ಮೂಲಕ ಸಾಧ್ಯವಿತ್ತು. ಇದೇ ಮಾರ್ಗವನ್ನು ಅನುಸರಿಸಿ ವಿದೇಶೀಯರು ಒಳನಾಡನ್ನು ಪ್ರವೇಶಿಸಿ ವ್ಯಾಪಾರ, ವಹಿವಾಟು ಇತ್ಯಾದಿ ಕಾರ್ಯಗಳಲ್ಲಿ ನಿರತರಾದರು ಮಲೆನಾಡಿನ

ಪ್ರಮುಖ ವಾಣಿಜ್ಯ ಬೆಳೆಗಳಾದ ಮೆಣಸು, ಏಲಕ್ಕಿ ಇತ್ಯಾದಿ ಸಂಭಾರ ಪದಾರ್ಥಗಳು ವಿದೇಶೀಯರನ್ನು ಆಕರ್ಷಿಸಿದವು. ಈ ಸರಕುಗಳಿಗೆ ವಿದೇಶೀ ಮಾರುಕಟ್ಟೆಯಲ್ಲಿ ಭಾರೀ ಬೇಡಿಕೆ ಇತ್ತು ಈ ವ್ಯಾಪಾರಿಗಳು ಒಂದಕ್ಕೆ ನೂರರಷ್ಟು ಲಾಭವನ್ನು ಪಡೆಯುತ್ತಿದ್ದರು. ಹಾಗೆಯೇ ಕಾರವಾರ, ಮಿರ್ಜಾನ್, ಬಸರೂರು, ಬಾರಕೂರು, ಮಂಗಳೂರು ಮತ್ತು ಕಾಸರಗೋಡು ಬಂದರುಗಳ ಮೂಲಕ ವಿದೇಶಿ ವ್ಯಾಪಾರ ವಹಿವಾಟುಗಳು ನಡೆಯುತ್ತಿದ್ದವು. ವಿದೇಶೀಯರು ತುಳುನಾಡಿನ ಕರಾವಳಿ ತೀರದ ಮತ್ತು ಒಳನಾಡಿನ ಪ್ರಮುಖ ಪಟ್ಟಣಗಳಾದ ಭಟ್ಕಳ, ಮಂಗಳೂರು, ಹೊನ್ನಾವರ, ಬೈಂದೂರು, ಬಸರೂರು, ಕುಂಬಳೆ, ಮಿರ್ಜಾನ್ ಮಂಜೇಶ್ವರ, ಕಾಸರಗೋಡು, ಕಾರ್ಕಳ, ಮೂಡಬಿದರೆ, ಕಳಸ, ಸಾಗರ, ಚಂದಾವರ ಬನವಾಸಿ ಇತ್ಯಾದಿ ಪಟ್ಟಣಗಳಲ್ಲಿ ನೆಲೆಸಿ ವ್ಯಾಪಾರ ವಹಿವಾಟಿನಲ್ಲಿ ತೊಡಗಿಸಿಕೊಂಡಿದ್ದಕ್ಕೆ ಆಕರಗಳು ಲಭ್ಯವಿದೆ.

ಪ್ರವಾಸಿಗಳು ಕರ್ನಾಟಕದ ವಿವಿಧ ವ್ಯಾಪಾರ ಕೇಂದ್ರಗಳನ್ನು ಮತ್ತು ಬಂದರುಗಳನ್ನು ಗುರುತಿಸಿರುವುದನ್ನು ಕಾಣುತ್ತೇವೆ. ಹಾಗೆಯೇ ಭೂಮಾರ್ಗಗಳ ಸಂಪರ್ಕದ ಬಗ್ಗೆ ತಿಳಿಯಬೇಕಾಗಿದೆ. ಪ್ರತಿಷ್ಠಾನದಿಂದ ದಕ್ಷಿಣದತ್ತ ಹೊರಟ ಮಾರ್ಗ ಕೊಲ್ಲಾಪುರ, ಅಶೋಕನ ಶಿಲಾಶಾಸನಗಳು ದೊರೆತಿರುವ ಕೊಪ್ಪಳ, ಮಾಸ್ಕಿ, ಚಂದ್ರವಳ್ಳಿ, ಕನಕಗಿರಿ ಮೊದಲಾದ ಪ್ರಾಚೀನ ಪಟ್ಟಣಗಳನ್ನು ಸಂಪರ್ಕಿಸುತ್ತಿತ್ತು. ಬನವಾಸಿ ಅಥವಾ ವೈಜಯಂತಿ ಮೌರ್ಯರ ಕಾಲದಿಂದಲೂ ಪ್ರಸಿದ್ಧ ಬಂದರಾಗಿತ್ತು. ಬಾರಕನೂರು ಘಾಟಿಮಾರ್ಗದಲ್ಲಿ ಹೊನ್ನಾವರದಿಂದ ದಕ್ಷಿಣದತ್ತ ಹೊರಟ ಮಾರ್ಗ ಬನವಾಸಿ, ಹಾನಗಲ್, ಬಂಕಾಪುರ, ಹರಿಹರ, ಅರಸೀಕೆರೆ, ಶ್ರವಣಬೆಳಗೊಳವನ್ನು ಹಾಯ್ದು ಪಶ್ಚಿಮದತ್ತ ತಲಕಾಡಿಗೂ ಪೂರ್ವದತ್ತ ಬೆಂಗಳೂರು ಕೋಲಾರದ ಕಡೆಗೂ ಹೋಗುತ್ತಿತ್ತು. ಬೆಂಗಳೂರಿನಲ್ಲಿ ರೋಮನ್ ನಾಣ್ಯಗಳು ಮತ್ತು ಅವಶೇಷಗಳು ದೊರೆತಿರುವುದು ಆ ಸ್ಥಳ ಪ್ರಾಚೀನ ಕಾಲದಿಂದಲೂ ಪ್ರಾಮುಖ್ಯ ಪಡೆದಿತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಕರ್ನಾಟಕದ ಕಲ್ಯಾಣದಿಂದ ತಮಿಳುನಾಡಿನ ತಂಜಾವೂರಿನ ವರೆಗೆ ಹಿರಿಯ ಹೆದ್ದಾರಿಯೊಂದು ಇದ್ದುದನ್ನು ಚೋಳ ಶಾಸನ ತಿಳಿಸುತ್ತದೆ.[88] ಇದು ನಮ್ಮ ದೇಶದ ಸಂಚಾರ ವ್ಯವಸ್ಥೆ ಮತ್ತು ಆರ್ಥಿಕ ಅವಲಂಬನೆ ಎಷ್ಟು ಸಂಘಟಿತವಾಗಿತ್ತೆಂಬುದನ್ನು ತೋರಿಸುತ್ತದೆ. ಭಟ್ಕಳದಿಂದ ಉತ್ತರಕ್ಕಿದ್ದ ಬಂದರುಗಳಿಗೂ ಒಳನಾಡಿಗೂ ಸಂಪರ್ಕ ಮಾರ್ಗಗಳು ಸುಲಭವಾಗಿದ್ದರೆ ದಕ್ಷಿಣದ ಮಲ್ಪೆ, ಮಂಗಳೂರು, ಕುಂಬಳೆ ಮೊದಲಾದ

ಬಂದರುಗಳೊಡನೆಯ ಸಂಪರ್ಕ ಕಠಿಣವಾಗಿತ್ತು. ಉದಾಹರಣೆಗೆ, ಮಂಗಳೂರು, ಬೇಲೂರು ಮಾರ್ಗವನ್ನು ತೆಗೆದುಕೊಳ್ಳಬಹುದು. ಅದು ಬಂಟವಾಳ, ಬೆಳ್ತಂಗಡಿಗಳ ಮೂಲಕ ಚಾರ್ಮಾಡಿ ಘಾಟಿಯಲ್ಲಿ ಹಾಯ್ದು ಘಟ್ಟದ ಮೇಲೆ ಮೂಡಿಗೆರೆ ತಾಲ್ಲೂಕಿನ ಕಳಸವನ್ನು ಸೇರುತ್ತಿತ್ತು. ಮುಂದೆ ಮೂಡಿಗೆರೆ ಮೂಲಕ ಬೇಲೂರು ತಲುಪಿ ನಂತರ ದ್ವಾರಸಮುದ್ರ, ಅರಸೀಕೆರೆ, ಹಾಸನ ಮೊದಲಾದ ಮುಖ್ಯ ಸ್ಥಳಗಳತ್ತ ಮುಂದುವರಿಯುತ್ತಿತ್ತು. ಮಂಗಳೂರಿನಿಂದ ಕೊಡಗಿನ ಮೂಲಕ ಸಂಪಾಜೆ ಘಾಟಿ ಮಾರ್ಗವಿತ್ತು ಆದರೆ ಇದು ಬಳಸುದಾರಿ. ತಲಕಾಡು, ಮಣ್ಣೆ ಮತ್ತು ಕೋಲಾರಗಳಿಂದ ಕ್ರಮವಾಗಿ ಕೊಯಮತ್ತೂರು, ಧರ್ಮಪುರಿ ಮತ್ತು ಸೇಲಂಗಳಿಗೆ ಇದ್ದ ಹೆದ್ದಾರಿಗಳು ತಮಿಳುನಾಡಿನೊಂದಿಗೆ ಕರ್ನಾಟಕವನ್ನು ಬೆಸೆದಿದ್ದವು. ತಲಕಾಡಿನಿಂದ ವಯನಾಡಿನ ಮೂಲಕ ಕೇರಳಕ್ಕೂ ಸಂಪರ್ಕವಿತ್ತು. ಹಂಪೆ ಅರಸೀಕರೆ, ಮಧುಗಿರಿ, ಮುಳುಬಾಗಿಲುಗಳ ಕಡೆಗೆ ಹೆದ್ದಾರಿಗಳು ಹಬ್ಬಿದ್ದವು.[89] ಕರ್ನಾಟಕದ ಕರಾವಳಿ ಮತ್ತು ಒಳನಾಡುಗಳ ನಡುವೆ ಅದರಲ್ಲೂ ದಕ್ಷಿಣ ಕರ್ನಾಟಕದಲ್ಲಿ ಸಂಪರ್ಕ ಸುಗಮವಾಗದಿರಲು ಪಶ್ಚಿಮಘಟ್ಟ ಶ್ರೇಣಿಯೇ ಬಹುಮಟ್ಟಿಗೆ ಕಾರಣ. ಆದರೂ ಮಂಗಳೂರು–ಬೇಲೂರು ಮಾರ್ಗ ಸಾಕಷ್ಟು ಬಳಕೆಯಲ್ಲಿದ್ದು ಈ ಮೂಲಕ ಗಣನೀಯ ವಾಣಿಜ್ಯ ನಡೆಯುತ್ತಿತ್ತು. ಈ ಬಗ್ಗೆ ನಮಗೆ ಕೆಲವೊಂದು ಸ್ವಾರಸ್ಯಕರ ಸಂಗತಿಗಳು ತಿಳಿದುಬರುತ್ತವೆ. ಈ ಮಾರ್ಗ ಘಟ್ಟದ ಮೇಲೆ ಬರುತ್ತಿದ್ದಂತೆ ಕಳಸ ಸಿಗುತ್ತದೆ. ಈ ಊರು ಧಾರ್ಮಿಕ ಕ್ಷೇತ್ರವೂ ಆಗಿದೆ. ತರುವಾಯದ ಶತಮಾನಗಳಲ್ಲಿ ಬೈರರಸರ ರಾಜಧಾನಿಯೂ ಆಗಿತ್ತು. ಈ ಕಳಸದಿಂದ ಮುಂದಕ್ಕೆ 'ಸುಂಕಸಾಲೆ' ಎಂಬ ಸ್ಥಳವಿದೆ. ಬಹುಶಃ ಆ ಮಾರ್ಗದಲ್ಲಿ ಸಾಗುತ್ತಿದ್ದ ಸರಕಿಗೆ ಸುಂಕ ವಿಧಿಸುತ್ತಿದ್ದ ಸ್ಥಳವಿರಬೇಕು ಇದು. ದಟ್ಟ ಅರಣ್ಯದಿಂದ ಕೂಡಿದ ಈ ಸುಂಕಸಾಲೆಯ ಸಮೀಪದಲ್ಲೇ ಬಲ್ಲಾಳರಾಯನ ದುರ್ಗವಿದೆ. ಈ ಗಿರಿದುರ್ಗ ಹೊಯ್ಸಳರ ಕಾಲದಿಂದ ಕೆಳದಿಯ ನಾಯಕರ ಕಾಲದವರೆಗೂ ಮಹತ್ವ ಪಡೆದಿತ್ತು. ಸುಂಕಸಾಲೆಯಿಂದ ಮುಂದುವರಿದ ಮಾರ್ಗ ಜಾವಳಿಯ ಬಳಿ ಕವಲಾಗಿ ಒಡೆದು ಉತ್ತರಕ್ಕೆ ಶೃಂಗೇರಿ, ಶಿವಮೊಗ್ಗಗಳ ಕಡೆಗೆ ಹೋಗುತ್ತದೆ. ನೇರವಾಗಿ ಮುಂದುವರಿದ ಮಾರ್ಗ ಮೂಡಿಗೆರೆ ತಲುಪಿ ಮಾಕೋನಹಳ್ಳಿಯ ಮೂಲಕ ಬೇಲೂರು ಸೇರುತ್ತದೆ. ಈ ಮಾರ್ಗದಲ್ಲಿ ಮೂಡಿಗೆರೆಯಿಂದ ಸುಮಾರು 6 ಕಿ.ಮೀಟರುಗಳ ದೂರದಲ್ಲಿ ಘಟ್ಟದಲ್ಲಿ ಎಂಬ ಸ್ಥಳವಿದೆ. ಹಿಂದೆ ಅಲ್ಲಿ ಸಂತೆ ನಡೆಯುತ್ತಿತ್ತು. ಹಾಗೆಯೇ ಮೂಡಿಗೆರೆಯಿಂದ ಬೇಲೂರಿಗೆ ಹಾಗೂ ಸಕಲೇಶಪುರಕ್ಕೆ ಹೋಗುವ ಇನ್ನೊಂದು ಮಾರ್ಗ ಹೊಯ್ಸಳರ ಮೂಲ ಸ್ಥಳವಾದ

ಸೊಸೆವೂರಿನ (ಅಂಗಡಿ) ಸಮೀಪ ಹಾದುಹೋಗುತ್ತದೆ. ಈ ಮಾರ್ಗದಲ್ಲಿ ಮೂಡಿಗೆರೆಯಿಂದ ನಾಲ್ಕು ಕಿಲೋಮೀಟರ್‌ಗಳಷ್ಟು ದೂರದಲ್ಲಿ ಮುದ್ರೆಮನೆ ಎಂಬ ಸ್ಥಳವಿದೆ. ಅದರ ಹೆಸರೇ ಸೂಚಿಸುವಂತೆ ಅದು ಕಮ್ಮಟ ಅಥವಾ ಟಂಕಸಾಲೆಯಾಗಿತ್ತು. ಬೇಲೂರು ತಲುಪುತ್ತಿದ್ದ ಈ ಮಾರ್ಗ ಬಯಲುನಾಡು ಸೇರಿ ಮುಂದೆ ಕರ್ನಾಟಕದ ವಿವಿಧ ಮುಖ್ಯ ಸ್ಥಳಗಳೊಡನೆ ಸಂಪರ್ಕ ಸಾಧಿಸುತ್ತದೆ. ಈ ಘಾಟಿ ಮಾರ್ಗದಲ್ಲಿ ಆಗ ಎತ್ತುಗಳು ಮತ್ತು ಕತ್ತೆಗಳ ಮೇಲೆ ಮಾತ್ರ ಸರಕು ಸಾಗಿಸಲು ಸಾಧ್ಯವಿತ್ತು. ಆದರೆ ತುಸು ಸುಲಭ ಸಂಚಾರ ಸಾಧ್ಯವಾದ ತಮಿಳುನಾಡಿನ ಅಂತಾರಾಷ್ಟ್ರೀಯ ಬಂದರುಗಳಿಗೆ ಮಲೆನಾಡು ಮತ್ತು ಪುನ್ನಾಟದ (ಮೈಸೂರು) ಸಂಭಾರವಸ್ತುಗಳು, ರತ್ನಗಳು, ಹರಳುಗಳು ಇತ್ಯಾದಿ ವಸ್ತುಗಳು ಹೆಚ್ಚಾಗಿ ಸಾಗುತ್ತಿದ್ದುದು ಸ್ವಾಭಾವಿಕ ದಕ್ಖನ್ನಿನ ಹತ್ತಿ, ಕಬ್ಬಿಣ, ತಾಮ್ರ, ವಜ್ರ, ಉಡುಪು ಇತ್ಯಾದಿಗಳು ಹೊನ್ನಾವರದ ಉತ್ತರಕ್ಕಿದ್ದ ಬಂದರುಗಳ ಮೂಲಕ ಸಾಗುತ್ತಿದ್ದವು.[90]

ಹೊಯ್ಸಳರ ರಾಜ್ಯವು ಮಧ್ಯ ಭಾರತದೊಡನೆ ಸಂಪರ್ಕ ಹೊಂದಿದ್ದು ಅದು ಹಿರಿಯೂರಿನಿಂದ ಪಂಡರಾಪುರ, ಬಿಜಾಪುರ, ಹರಿಹರ ಮಾರ್ಗವಾಗಿ ಬಳಿಕ ಪ್ರಮುಖ ಮಾರ್ಗವಾದ ಬಾಣಾವರ ಮತ್ತು ಹಳೆಬೀಡನ್ನು ಹಾದುಹೋಗಿತ್ತು. ಪೂರ್ವದಲ್ಲಿ ಮತ್ತೊಂದು ರಸ್ತೆಯು ದೋರಸಮುದ್ರದಿಂದ ಕಣ್ಣಾನೂರು, ಶ್ರೀರಂಗಂ ಮುಖಾಂತರ ಬಾಣಾವರ, ಚಿಕ್ಕನಾಯಕನಹಳ್ಳಿ, ತುಮಕೂರು, ಬೆಂಗಳೂರು, ಹೊಸೂರು ಮತ್ತು ನಾಮಕ್ಕಲ್‌ನ್ನು ಸಂಧಿಸುವ ಹೆದ್ದಾರಿಯಾಗಿ ಅಸ್ಥಿತ್ವದಲ್ಲಿತ್ತು. ಪ್ರಮುಖ ವ್ಯಾಪಾರಿ ಮಾರ್ಗಗಳು ಪಶ್ಚಿಮ ಕರಾವಳಿಯ ಪ್ರಮುಖ ಬಂದರು ಪಟ್ಟಣಗಳಾದ ಹೊನ್ನಾವರ ಮತ್ತು ಭಟ್ಕಳದೊಂದಿಗೆ ಸಂಪರ್ಕ ಹೊಂದಿದ್ದವು. ಬಯಲು ಪ್ರದೇಶಗಳಲ್ಲಿ ಪೂರ್ವ ಪಶ್ಚಿಮ ವ್ಯಾಪಾರಿ ಮಾರ್ಗವು ಪೂರ್ವದ ಕರಾವಳಿ ಕಂಚಿಯಿಂದ ಚಿಕ್ಕನಾಯಕನಹಳ್ಳಿ ಮೂಲಕ ಅರಸೀಕೆರೆ, ಬೇಲೂರು, ಅಂಗಡಿ ಮೂಲಕ ಮುಂದುವರಿದು ಮಂಗಳೂರನ್ನು ಮುಟ್ಟುತ್ತಿತ್ತು. ಇತರ ಪೂರ್ವ–ಪಶ್ಚಿಮ ರಸ್ತೆಯು ಹೊನ್ನಾವರದಿಂದ ಬನವಾಸಿ, ಬಳ್ಳಿಗಾವೆ, ಬಂಕಾಪುರ ಮತ್ತು ಉಚ್ಚಂಗಿಗೆ ಸಂಪರ್ಕ ಹೊಂದಿದ್ದವು. ಹೊಯ್ಸಳ ರಾಜ್ಯದಲ್ಲಿ ಹಾದುಹೋಗಿರುವ ಪ್ರಮುಖ ವ್ಯಾಪಾರಿ ಮಾರ್ಗಗಳು ದಖ್ಖನ್, ತಮಿಳು ಮತ್ತು ತೆಲುಗು ರಾಷ್ಟ್ರಗಳನ್ನು ಹಾಗೂ ಹಿಂದೂ ಮಹಾಸಾಗರವನ್ನು ಸಂಪರ್ಕ ಹೊಂದಿದ್ದವು.[91] ಫಲವತ್ತತೆಯ ಆಧಾರದಲ್ಲಿಯೂ ಭೂಮಿ ತನ್ನ ಉಪಯೋಗಕ್ಕೆ ಅತ್ಯುತ್ತಮವಾದ ಅವಕಾಶಗಳನ್ನು ನೀಡುವುದರ ಜೊತೆಗೆ

ವ್ಯಾಪಾರದ ನಿಯಂತ್ರಣವನ್ನು ಹೊಂದುವ ಅವಕಾಶಗಳನ್ನು ಕೂಡಾ ನೀಡುತ್ತಿತ್ತು. ಈ ರೀತಿಯ ಒಳನಾಡಿನ ಅನೇಕ ರಸ್ತೆ ಸಂಪರ್ಕವನ್ನು ನೋಡಬಹುದು. ಈ ರೀತಿಯ ಭೂಮಾರ್ಗಗಳ ವ್ಯವಸ್ಥೆಯನ್ನು ಮುಖ್ಯವಾಗಿ ಅಲ್ಲಿನ ಆಡಳಿತವರ್ಗ ಮತ್ತು ವರ್ತಕ ಸಂಘಗಳು ನೋಡಿಕೊಳ್ಳುತ್ತಿದ್ದವು. ಭೂಮಾರ್ಗಗಳು ಮತ್ತು ನದಿಮಾರ್ಗಗಳ ಮುಖಾಂತರ ಪ್ರಮುಖ ಬಂದರುಗಳಿಗೆ ಸಂಪರ್ಕವನ್ನೇರ್ಪಡಿಸುತ್ತಿದ್ದವು.

ಹೊಯ್ಸಳರು ಕ್ರಿ. ಶ. 1116ರಲ್ಲಿ ಚೋಳರನ್ನು ಸೋಲಿಸಿ ತಲಕಾಡು ಪ್ರದೇಶವನ್ನು ಕರ್ನಾಟಕದ ವ್ಯಾಪ್ತಿಯಲ್ಲಿ ತಂದದ್ದರಿಂದ ದೂರದ ತಮಿಳುನಾಡಿನ ಬಂದರುಗಳ ಮೂಲಕ ನಡೆಯುತ್ತಿದ್ದ ವ್ಯಾಪಾರ ಹತ್ತಿರದ ಕರ್ನಾಟಕದ ಬಂದರುಗಳಿಗೆ ಬದಲಾದದ್ದನ್ನು ಗುರುತಿಸಬಹುದು. ಕರ್ನಾಟಕದ ಬಂದರುಗಳು ಮತ್ತು ರಾಜಧಾನಿಯ ನಡುವಿನ ವ್ಯಾಪಾರ ಮಾರ್ಗಗಳು ಅಂದರೆ ಮಂಗಳೂರು, ಉಪ್ಪಿನಂಗಡಿ, ಬೆಳ್ತಂಗಡಿ ನೇತ್ರಾವತಿ ಕಣವೆಯ ಮೂಲಕ ಅಂಗಡಿ, ಮೂಡಿಗೆರೆ, ಚಿಕ್ಕಮಗಳೂರು, ದೋರಸಮುದ್ರದ ಹಾದಿ ಚಾಲ್ತಿಯಲ್ಲಿತ್ತು. ಬೆಳ್ತಂಗಡಿಯಿಂದ ಅಂಗಡಿಯವರೆಗಿನ ದಾರಿ ಕಷ್ಟದಾಯಕವಾಗಿದ್ದರೂ, ಕಳ್ಳಕಾಕರ ಹಾವಳಿಯಿಂದ ಮುಕ್ತವಾಗಿದ್ದು ರಾಜ್ಯದೊಳಗಿನ ಮಾರ್ಗವಾಗಿದ್ದಿತು. ಸುರಕ್ಷಿತೆಯ ದೃಷ್ಟಿಯಿಂದ ಸುಲಭದ ಮಾರ್ಗವಾಗಿದ್ದು ಕೆಲವು ಮೈಲಿಗಳ ಕಷ್ಟದ ಹಾದಿಯಾಗಿದ್ದರೂ ಚಾಲ್ತಿಯಲ್ಲಿದ್ದಿತು.[92] ಈ ಮಾರ್ಗದ ಮಧ್ಯದಲ್ಲಿ ಅಂದಿನ ಕಾಲದಲ್ಲಿ ಈ ಪ್ರದೇಶದಲ್ಲಿ ಆಡಳಿತಕ್ಕೆ ಬಂದ ಜೈನ ಮನೆತನಗಳು ಮತ್ತು ಅವರ ಓಡಾಟಗಳು ಈ ವಾದವನ್ನು ಪುಷ್ಟೀಕರಿಸುತ್ತವೆ. ರಸ್ತೆಗಳ ನಿರ್ಮಾಣ ನಂತರದ ಕಾಲದಲ್ಲಿ ವಸಾಹತುವಿನ ಕಾಲದಲ್ಲಿ 1837ರ ಕಲ್ಯಾಣಪ್ಪನ ದಂಗೆಯ ನಂತರ ಅಭಿವೃದ್ಧಿಗೊಂಡಿತು.[93] ಸಣ್ಣ ಪ್ರಮಾಣದ ವ್ಯಾಪಾರಗಳಿಗೆ ತಲೆಯ ಮೇಲೆ, ಹೇರುಗಳ ಮೇಲೆ, ಕತ್ತೆ, ಎಮ್ಮೆ, ಕೋಣ, ದನಗಳ ಮೇಲೆ ಸರಕುಗಳನ್ನು ಹೊತ್ತು ತರುತ್ತಿದ್ದರು. ತುಂಬಾ ಸೂಕ್ಷ್ಮವಾದ ಸರಕುಗಳನ್ನು ತಲೆಯ ಮೇಲೆ ಹೊತ್ತು ತರುತ್ತಿದ್ದರು. ಉಳಿದವುಗಳನ್ನು 3 ಘಟ್ಟಗಳನ್ನು ಹತ್ತಿ ಇಳಿದು ದನಗಳ ಮೇಲೆ ಸರಕುಗಳನ್ನು ಹೇರೆತ್ತುಗಳ ಮೇಲೆ ಸಾಗಿಸುತ್ತಿದ್ದರು. ದನಗಳನ್ನು ಕೊಳ್ಳುವಿಕೆ ಮತ್ತು ಮಾರುವಿಕೆಗೆ ತೆರಿಗೆ ಇರಲಿಲ್ಲ. ಈ ರೀತಿಯ ಪ್ರತಿಯೊಂದು ವಿಷಯಗಳು ಆಂತರಿಕ ವ್ಯಾಪಾರಕ್ಕೆ ಪೂರಕವಾಗಿವೆ. ಒಳನಾಡಿನಲ್ಲಿ ಭೂಮಾರ್ಗ, ನದಿಮಾರ್ಗ, ತಲೆಹೊರೆಯಲ್ಲಿ ವ್ಯಾಪಾರ ನಡೆಯುತ್ತಿದ್ದವೆಂದು ತಿಳಿಯಬಹುದು.

ಮಧ್ಯಕಾಲದಲ್ಲಿ ಮಲೆನಾಡು ದಟ್ಟ ಮತ್ತು ದುರ್ಗಮ ಅರಣ್ಯ ಪ್ರದೇಶಗಳಿಂದ ಕೂಡಿದ್ದು, ಮಲೆನಾಡಿನಿಂದ ಕರಾವಳಿಯನ್ನು ಸಂಪರ್ಕಿಸುವ ಬಹುತೇಕ ಮಾರ್ಗಗಳು, ಕಾಲುದಾರಿಗಳು ಇಲ್ಲವೇ ಬಂಡಿದಾರಿಗಳಾಗಿದ್ದವು. ಈ ಬಗ್ಗೆ ವಿಜಯನಗರ ಶಾಸನಗಳು ಹಾಗೂ ವಿದೇಶಿ ಬರಹಗಳು, ಕಾಲುದಾರಿಗಳು ಮತ್ತು ಬಂಡಿದಾರಿಗಳನ್ನು ಪ್ರಸ್ತಾಪಿಸುತ್ತವೆ. ಕರಾವಳಿಯಿಂದ ಒಳನಾಡಿಗೆ ಪ್ರವೇಶಿಸಲು ಕಣಿವೆ ಮಾರ್ಗಗಳಿದ್ದು ದಟ್ಟ ಅರಣ್ಯ ಮತ್ತು ಕಲ್ಲು ಬೆಟ್ಟಗಳಿಂದ ಕೂಡಿದೆ. ಎಂದು ಕ್ರಿ.ಶ. 1520ರಲ್ಲಿ ಪಯಾಸ್ ತಿಳಿಸುತ್ತಾನೆ. ಈ ಅವಧಿಯಲ್ಲಿ ಬಹುತೇಕ ಸರಕುಗಳನ್ನು ಕಾವಡಿ, ತಲೆಹೊರೆ, ಹೇರೆತ್ತುಗಳು ಮತ್ತು ಎತ್ತಿನ ಬಂಡಿಗಳ ಮೂಲಕವೇ ಬಂದರು ಪಟ್ಟಣಗಳಿಗೆ ಸಾಗಿಸಲಾಗುತ್ತಿತ್ತು.

ವಿಜಯನಗರ ಆಡಳಿತಾವಧಿಯಲ್ಲಿ ಕರಾವಳಿ ಕರ್ನಾಟಕವು/ತುಳುನಾಡು ಪ್ರದೇಶಗಳು ಮಲೆನಾಡು/ಘಟ್ಟದ ಮೇಲಿನ ಪ್ರದೇಶಗಳೊಂದಿಗೆ ದೇಶಿಯ ಮತ್ತು ವಿದೇಶಿ ವ್ಯಾಪಾರಿಗಳು ವಹಿವಾಟುಗಳನ್ನು ನಡೆಸುತ್ತಿದ್ದು, ಆಗ ಬಳಕೆಯಲ್ಲಿದ್ದ ಸಾರಿಗೆ ಸಂಪರ್ಕಗಳನ್ನು ವಿದೇಶಿ ದಾಖಲೆಗಳು ಹಾಗೂ ಸ್ಥಳೀಯ ಆಧಾರಗಳು ದೃಡಪಡಿಸುತ್ತವೆ.[94] ಅಂದಿನ ಮಲೆನಾಡಿನಿಂದ ಪಶ್ಚಿಮ ಕರಾವಳಿಯನ್ನು ಸಂಪರ್ಕಿಸುವ ಮಾರ್ಗಗಳು ಕಾಡುಗಳಿಂದ ಹಾಗೂ ದುರ್ಗಮ ಮತ್ತು ಕಣಿವೆ ಪ್ರದೇಶಗಳಿಂದ ಕೂಡಿದ್ದವು.

ಈ ಅವಧಿಯಲ್ಲಿ ಆರಗ, ಮಲೆನಾಡಿನ ಭಾಗದ ಪ್ರಾಂತೀಯ ಆಡಳಿತ ಕೇಂದ್ರವಾಗಿತ್ತು. ಈ ಅವಧಿಯಲ್ಲಿ ಪಶ್ಚಿಮ ಕರಾವಳಿ/ ತುಳುನಾಡಿನೊಂದಿಗೆ ಮಲೆನಾಡಿನ ಪ್ರಮುಖ ಪಟ್ಟಣಗಳಾದ ಆರಗ, ಬಿದಿರೂರು, ಗೋವರ್ಧನಗಿರಿ, ಗೇರುಸೊಪ್ಪೆ, ಶಿರವಂತೆ, ಸಾಗರ ಇನ್ನಿತರ ಪಟ್ಟಣಗಳು ಗೇರುಸೊಪ್ಪೆಯ ಮಾರ್ಗವಾಗಿ ಹೊನ್ನಾವರ ಮತ್ತು ಭಟ್ಕಳಗಳಿಗೆ ರಸ್ತೆ ಸಂಪರ್ಕ ಹೊಂದಿದ್ದವು. ಹಾಗೆಯೇ ಕಳೂರು ಕಟ್ಟೆ, (ಹೊಸನಗರ), ಬಿದನೂರು (ನಗರ) ಇತ್ಯಾದಿ ಪಟ್ಟಣಗಳು ಹುಲಿಕಲ್ಲಿನ ಮಾರ್ಗವಾಗಿ ಕರಾವಳಿಯೊಂದಿಗೆ ರಸ್ತೆ ಸಂಪರ್ಕ ಹೊಂದಿದ್ದವು. ಹಾಗೂ ಆರಗ, ಮಹಿಷಿ, ತೀರ್ಥರಾಜಪುರ (ತೀರ್ಥಹಳ್ಳಿ), ತಲ್ಲೂರು ಇತ್ಯಾದಿ ಪಟ್ಟಣಗಳು ಹೊಸಂಗಡಿ ಮಾರ್ಗವಾಗಿ ಮಂಗಳೂರು ಬಂದರಿನೊಂದಿಗೆ ರಸ್ತೆ ಸಂಪರ್ಕ ಹೊಂದಿದ್ದವು.[95] ಕರ್ನಾಟಕದ ಬಂದರುಗಳಿಂದ ಒಳನಾಡು ಪ್ರದೇಶಗಳನ್ನು ಸಂಪರ್ಕಿಸುತ್ತಿದ್ದವು. ಮಂಗಳೂರು, ಉಡುಪಿ, ಬಾರಕೂರು, ಬಸರೂರು, ಭಟ್ಕಳ, ಶಿರಾಲಿ,

ಹೊನ್ನಾವರ ಮತ್ತು ಇತರ ಬಂದರುಗಳು ಕರ್ನಾಟಕದ ಒಳನಾಡಿನ ವ್ಯಾಪಾರ ಕೇಂದ್ರಗಳೊಂದಿಗೆ ಸಾಧಿಸಿದ್ದ ವ್ಯಾಪಾರದ ಪ್ರಗತಿಯ ಬಗೆಗೆ ಅಧ್ಯಯನ ಸಾಗುತ್ತಲಿದೆ.[96]

- ಮಂಗಳೂರು, ಉಪ್ಪಿನಂಗಡಿ, ಬೆಳ್ತಂಗಡಿ, ನೇತ್ರಾವತಿ, ಕಣಿವೆಯ ಮೂಲಕ, ಅಂಗಡಿ, ಮೂಡಿಗೆರೆ, ಚಿಕ್ಕಮಗಳೂರು, ದೋರಸಮುದ್ರದ ಹಾದಿ ಚಾಲ್ತಿಯಲ್ಲಿತ್ತು. ಬೆಳ್ತಂಗಡಿ ಯಿಂದ ಅಂಗಡಿಯವರೆಗಿನ ದಾರಿ ಕಷ್ಟದಾಯಕವಾಗಿದ್ದರೂ, ಕಳ್ಳಕಾಕರ ಹಾವಳಿಯಿಂದ ಮುಕ್ತವಾಗಿದ್ದು ರಾಜ್ಯದೊಳಗಿನ ಮಾರ್ಗವಾಗಿದ್ದಿತು. ಸುರಕ್ಷತೆಯ ದೃಷ್ಟಿಯಿಂದ ಸುಲಭದ ಮಾರ್ಗವಾಗಿದ್ದು ಕೆಲವು ಮೈಲಿಗಳ ಕಷ್ಟದ ಹಾದಿಯಾಗಿದ್ದರೂ ಚಾಲ್ತಿಯಲ್ಲಿದ್ದಿತು. ಈ ಮಾರ್ಗದ ಮಧ್ಯದಲ್ಲಿ ಅಂದಿನ ಕಾಲದಲ್ಲಿ ಈ ಪ್ರದೇಶದಲ್ಲಿ ಆಡಳಿತಕ್ಕೆ ಬಂದ ಜೈನ ಮನೆತನಗಳು ಮತ್ತು ಅದರ ಓಡಾಟಗಳು ಈ ವಾದವನ್ನು ಪುಷ್ಟೀಕರಿಸುತ್ತವೆ.

- ಮಂಗಳೂರು–ಉಪ್ಪಿನಂಗಡಿ–ಕನ್ಯಾಡಿ–ಸುಬ್ರಮಣ್ಯ–ಸಕಲೇಶಪುರ–ದೋರಸಮುದ್ರ
- ಮಂಗಳೂರು–ಉಪ್ಪಿಸಂಗಡಿ–ಉಜಿರೆ–ಶಿಶಿಲೇಶ್ವರ–ಸಕಲೇಶಪುರ–ದೋರಸಮುದ್ರ ಮಾರ್ಗವು ಚಾಲ್ತಿಯಲ್ಲಿತ್ತು
- ಉದ್ಯಾವರ–ಉಡುಪಿ–ಬಾರಕೂರು–ಕಾರ್ಕಳ–ಉಪ್ಪಿನಂಗಡಿ–ಸಕಲೇಶಪುರ–ದೋರಸಮುದ್ರ
- ಉಡುಪಿ–ಬಾರಕೂರು–ಆಗುಂಬೆ–ಶೃಂಗೇರಿ–ಎನ್.ಆರ್.ಪುರ–ಮೂಡಿಗೆರೆ–ಬೇಲೂರು–ದೋರಸಮುದ್ರ
- ಬಸರೂರು–ಶಂಕರನಾರಾಯಣ–ಹಾಲಾಡಿ–ಸಿದ್ಧಾಪುರ–ಹೊಸಅಂಗಡಿ–ಸಾಗರ–ಶಿವಮೊಗ್ಗ
- ಮಂಗಳೂರು–ಉಪ್ಪಿನಂಗಡಿ–ಪುತ್ತೂರು–ಸುಳ್ಯ–ಮಡಿಕೇರಿ–ಶ್ರೀರಂಗಪಟ್ಟಣ
- ಶಿರಾಲಿ–ಭಟ್ಕಳ–ಗೇರುಸೊಪ್ಪ–ಮಾವಿನಗುಂಡಿ–ಸಿದ್ಧಾಪುರ–ಶಿರಸಿ–ಬನವಾಸಿ
- ಹೊನ್ನಾವರ–ಗೇರುಸೊಪ್ಪ–ಜೋಗ–ಸಾಗರ–ಶಿವಮೊಗ್ಗ,

ಈ ಮಾರ್ಗಗಳು ಕರ್ನಾಟಕದ ಬಂದರುಗಳಿಂದ ಒಳನಾಡುಗಳನ್ನು ಸಂಪರ್ಕಿಸುತ್ತಿದ್ದವು. ಮಂಗಳೂರು, ಉಡುಪಿ, ಬಾರಕೂರು, ಬಸರೂರು, ಭಟ್ಕಳ, ಶಿರಾಲಿ, ಹೊನ್ನಾವರ, ಮತ್ತು ಇತರ ಬಂದರುಗಳು ಕರ್ನಾಟಕದ ಒಳನಾಡಿನ ವ್ಯಾಪಾರ ಕೇಂದ್ರಗಳೊಂದಿಗೆ ಸಾಧಿಸಿದ್ದ ವ್ಯಾಪಾರದ ಪ್ರಗತಿಯನ್ನು ಈ ಮಾರ್ಗಗಳ ಅಭಿವೃದ್ಧಿಯಿಂದ ತಿಳಿಯಬಹುದು. ಕರ್ನಾಟಕವು ತನ್ನ ನೆರೆಹೊರೆ ಪ್ರದೇಶಗಳಾದ ಚೋಳ ಮತ್ತು ಚೇರ ರಾಷ್ಟ್ರಗಳೊಂದಿಗೆ ವ್ಯಾಪಾರದ ಸಂಪರ್ಕವನ್ನು ಹೊಂದಿತ್ತು. ಕ್ರಿ.ಶ. 11ನೇ ಶತಮಾನದಲ್ಲಿ ವರ್ತಕರು ಮತ್ತು ವರ್ತಕ ಸಂಘದವರು ಕೊಂಗು ರಾಷ್ಟ್ರ ಮತ್ತು ಗಂಗರ ರಾಜಧಾನಿ ತಲಕಾಡಿನ ಸತ್ಯಮಂಗಲಂನ್ನು ಸಂಧಿಸುವ ಮಾರ್ಗವನ್ನು ಬಳಸುತ್ತಿದ್ದರು. ಈ ಮಾರ್ಗವು ಆರಂಭದಲ್ಲಿ ಚೋಳರ ದಕ್ಷಿಣ ಕರ್ನಾಟಕದ ಆಕ್ರಮಣದ ವೇಳೆಯಲ್ಲಿ ಬಳಸಿದ್ದರು. ಕಾವೇರಿಯ ಉಪನದಿಗಳಾದ ಸ್ವರ್ಣಾವತಿ ಮತ್ತು ಕಪಿಲ ಕಣಿವೆಗಳು ಕೇರಳ ಮತ್ತು ದಕ್ಷಿಣ ಕರ್ನಾಟಕಗಳ ನಡುವಿನ ಅತ್ಯುತ್ತಮ ವ್ಯಾಪಾರಿ ಹೆದ್ದಾರಿಗಳಾಗಿ ಬಳಕೆಯಾಗುತ್ತಿದ್ದವು. ಅದೇ ರೀತಿಯಲ್ಲಿ ಅವು ಕೊಯಮತ್ತೂರು ಜಿಲ್ಲೆ ಮತ್ತು ಕರ್ನಾಟಕವನ್ನು ಸಂಧಿಸುವ ಮಾರ್ಗವಾಗಿತ್ತು.[97]

## 2.12 ಸಾಗರೋತ್ತರ ವ್ಯಾಪಾರ

ಆಳುಪರು ತಮ್ಮ ಆಡಳಿತದ ಉದ್ದಕ್ಕೂ ಹಲವು ಚಕ್ರವರ್ತಿಗಳ ಕೈಕೆಳಗೆ ನಿರಂತರವಾಗಿ ಆಳ್ವಿಕೆ ನಡೆಸಿದಂತೆ ಕಂಡು ಬಂದರೂ ಅವರ ಸ್ವಾತಂತ್ರ್ಯಕ್ಕೇನೂ ದಕ್ಕೆ ಒದಗಿದಂತೆ ಕಾಣಿಸುವುದಿಲ್ಲ. ಕದಂಬ, ಪಲ್ಲವ, ಚಾಳುಕ್ಯ, ರಾಷ್ಟ್ರಕೂಟ, ಹೊಯ್ಸಳ, ಮೊದಲಾದ ವಂಶಗಳ ಚಕ್ರವರ್ತಿಗಳ ಕೈಕೆಳಗೆ ಅವರಿಂದ ಪರಾಜಿತರಾಗಿ ಸಾಮಂತರಾಗಿದ್ದರೂ ತಮ್ಮದೇ ಆದ ಸ್ವತಂತ್ರತೆಯನ್ನು ಅನುಭವಿಸಿಕೊಂಡಿದ್ದರು. ಸಾಮಂತರಾಗಿಯೇ ಇದ್ದುದರಿಂದ ಸುಮಾರು 1200 ವರ್ಷಗಳ ಕಾಲ ಸುದೀರ್ಘವಾದ ಆಡಳಿತವನ್ನು ತುಳುನಾಡಿನಲ್ಲಿ ಮುಂದುವರೆಸಿಕೊಂಡು ಹೋದರು.[98] ತುಳುನಾಡನ್ನು ಅಥವಾ ಕರ್ನಾಟಕದ ಕಡಲತೀರವನ್ನು ಆಳಿದ ಆಳುಪರು ಕಡಲ್ಗಳ್ಳರಾಗಿದ್ದರೆಂಬ[99] ಅಭಿಪ್ರಾಯ ಸಹ ಇದೆ. ಕ್ರಿ.ಶ. 5ನೇ ಶತಮಾನದಿಂದ 12ನೇ ಶತಮಾನದ ಕಾಲದವರೆಗೂ ಈ ಭಾಗವು ಕಡಲತೀರ ಕಡಲ್ಗಳ್ಳರ ಪ್ರಮುಖ ಕೇಂದ್ರವಾಗಿತ್ತೆಂದು ಅಂದಿನ ಪ್ರವಾಸಕಥನಗಳು ತಿಳಿಸುತ್ತವೆ. ಕ್ರಿ.ಶ. 1–2ನೇ ಶತಮಾನದಲ್ಲಿ ಭಾರತದ ಬಗೆಗಿನ ಪ್ರಥಮಕೃತಿಯೆಂದು ತಿಳಿದಿರುವ – '*ದಿ ಪೆರಿಪ್ಲಸ್ ಆಫ್ ಯರಿತ್ರಿಯನ್*' ಸಹ ತುಳುನಾಡಿನ ಪ್ರದೇಶದಲ್ಲಿನ ಕಡಲ್ಗಳ್ಳತನದ ಬಗ್ಗೆ

ವಿವರಗಳನ್ನು ನೀಡುತ್ತದೆ.[100] ಕ್ರಿ.ಶ. 5ನೇ ಶತಮಾನದಿಂದ ಮಾರ್ಕೋ ಪೋಲೋನ ಕಾಲದವರೆಗೆ ಈ ಭಾಗದ ಕಡಲ ತೀರ ಕಡಲ್ಗಳ್ಳರ ಪ್ರಮುಖ ಕೇಂದ್ರವಾಗಿತ್ತೆಂದು ಅಂದಿನ ಕಾಲದ ಪ್ರವಾಸಿ ಕಥನಗಳು ತಿಳಿಸುತ್ತವೆ. ಆದರೆ ಇದರ ಬಗ್ಗೆ ಸಾಕಷ್ಟು ಗೊಂದಲವಿದೆ. ಏಕೆಂದರೆ ಭಾರತೀಯ ತೀರದ ಕಡಲ್ಗಳ್ಳತನವನ್ನು ಯುರೋಪಿಯನ್ನರು ಮಾತ್ರವೇ ಉಲ್ಲೇಖಿಸಿದ್ದಾರೆ ವಿನಾ ದೇಶೀಯರಲ್ಲ. ಇಲ್ಲಿ ಭಾಷೆಯ ಗೊಂದಲವಿರಬಹುದು. ಆಯಾ ತೀರ ಪ್ರದೇಶದಲ್ಲಿ ಹಾದುಹೋಗುವಾಗ ಅವರಿಗೆ ಬೇಕುಬೇಡಗಳ ಪೂರೈಕೆಯ ಜೊತೆಗೆ ಆ ಪ್ರದೇಶದ ಸುಂಕವನ್ನು ಕೊಡಬೇಕಾಗುತ್ತದೆ. ಅದು ಸರಕುಗಳ ರೂಪದಲ್ಲಿರಬಹುದು ಅಥವಾ ಚಿನ್ನ, ಬೆಳ್ಳಿ, ನಾಣ್ಯಗಳ ರೂಪದಲ್ಲಿ ಇರಬಹುದು. ಇದನ್ನು ಸ್ಥಳೀಯ ಅಧಿಕಾರಿಗಳು ಕೇಳಿದಾಗ ಕೊಡದೆ ಇರುವ ಸಂದರ್ಭದಲ್ಲಿ ಒತ್ತಾಯಪೂರ್ವಕವಾಗಿ ಪಡೆದುಕೊಂಡಿರಬೇಕು, ಈ ದೃಷ್ಟಿಯಿಂದಲೂ ನೋಡಬಹುದು. ಇದರ ಬಗ್ಗೆ ಸಾಕಷ್ಟು ಸಂಶೋಧನೆಗಳು ನೆರವೇರಬೇಕಾಗಿದೆ. ಹಾಗಾದರಷ್ಟೇ ಹೊಸ ವಿಷಯ ಬೆಳಕಿಗೆ ಬರುತ್ತದೆ.

ಯಾವುದೇ ಒಂದು ಕರಾವಳಿ ತೀರ ತಾನು ಬೇರೆ ಪ್ರದೇಶದೊಂದಿಗೆ ವ್ಯವಹಾರವನ್ನು ನಡೆಸಬೇಕಾದರೆ ಇಲ್ಲಿ ಅದಕ್ಕೆ ಅತ್ಯುತ್ತಮವಾದಂತಹ ರಸ್ತೆ ಮಾರ್ಗಗಳಿರಬೇಕು. ಇಲ್ಲ ಅದಕ್ಕೆ ಜಲಮಾರ್ಗಗಳಿರಬೇಕು. ಕರ್ನಾಟಕದ ಕರಾವಳಿ / ತುಳುನಾಡು ಘಟ್ಟದ ಕೆಳಭಾಗದಲ್ಲಿದ್ದು ಘಟ್ಟವನ್ನು ದಾಟುವುದು ಅತ್ಯಂತ ತ್ರಾಸದಾಯಕವಾಗಿರುವುದರಿಂದ ಜಲಮಾರ್ಗವನ್ನು, ಬೇರೆ ಭೂಮಾರ್ಗವನ್ನು ಅವಲಂಬಿಸುತ್ತಿತ್ತು. ಅತ್ಯಂತ ಪ್ರಾಚೀನ ಕಾಲದಿಂದ ಕರ್ನಾಟಕದ ಬಂದರುಗಳಲ್ಲಿ ವಸತಿ ಇದ್ದುದಕ್ಕೆ ಅನೇಕ ವಿದೇಶಿ ಆಕರಗಳಲ್ಲಿ ದಾಖಲೆಗಳು ಲಭ್ಯವಿದೆ. ತುಳುನಾಡಿಗೂ ಘಟ್ಟದ ಮೇಲ್ಭಾಗದ ಬಯಲುಸೀಮೆಯೊಂದಿಗೆ ಬೆಸೆಯುವ ಮಾರ್ಗಗಳು ನಮಗೆ ದೊರೆತಿವೆ. ಬಂದರುಗಳು ಕರಾವಳಿ ತೀರವನ್ನು ಮತ್ತು ಘಟ್ಟದ ಮೇಲ್ಭಾಗವನ್ನು ಬೆಸೆಯುವುದರಿಂದ ಅತ್ಯಂತ ಮಹತ್ವಪೂರ್ಣ ಕೆಲಸವನ್ನು ನಿರ್ವಹಿಸಿವೆ. ಮತ್ತು ಬಯಲುಸೀಮೆಯಲ್ಲಿ ಸಿಕ್ಕಿರುವ ಬಹುತೇಕ ಶಾಸನಗಳಲ್ಲಿ ಕರ್ನಾಟಕದ ಬಂದರುಗಳು ವಿದೇಶದೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದವೆಂದು ದಾಖಲಿಸುತ್ತಾರೆ. ಶಾಸನಗಳ ಹಿನ್ನೆಲೆಯಲ್ಲಿ ಕರ್ನಾಟಕದ ಬಂದರುಗಳು ವಿದೇಶಿ ವ್ಯಾಪಾರಕ್ಕೆ ತಮ್ಮನ್ನು ತೊಡಗಿಸಿ ಕೊಂಡಿದ್ದವು. ಜೊತೆಗೆ ಭಾರತದ ಇತರ ಕರಾವಳಿ ತೀರದೊಂದಿಗೆ ಸಂಪರ್ಕವನ್ನು ಸಾಧಿಸುತ್ತವೆ ಎಂಬುದಕ್ಕೆ ನಮಗೆ ಆಕರಗಳು ದೊರಕುತ್ತವೆ.

ಪಶ್ಚಿಮ ಘಟ್ಟಗಳ ಕೆಳಗಿನ ಕರಾವಳಿಯಲ್ಲಿರುವ ತುಳುನಾಡು ಪ್ರಾಚೀನ ಕಾಲದಿಂದಲೂ ವಲಸಿಗರನ್ನು ಆಕರ್ಷಿಸುವ ಭೂಪ್ರದೇಶವಾಗಿತ್ತು. ಸಮುದ್ರ ಮಾರ್ಗವಾಗಿ ವಿದೇಶೀಯರು ತಲುಪಬಹುದಾದ ಈ ಭೂಪ್ರದೇಶ ವ್ಯಾಪಾರಸ್ಥರಿಗೆ ಅಗತ್ಯವಿದ್ದ ಪ್ರಾಕೃತಿಕ ಸೌಕರ್ಯಗಳನ್ನು ಹೊಂದಿತ್ತು. ಪ್ರಾಚೀನ ಕಾಲದಿಂದಲೇ ತುಳುನಾಡು ಹೊರದೇಶಗಳೊಂದಿಗೆ ಸಂಪರ್ಕ ಸಾಧಿಸಿದ್ದನ್ನು ಪ್ರಾಚೀನ ಲಿಖಿತ ಆಧಾರಗಳು ಸಹ ಕ್ರಿಸ್ತಪೂರ್ವ ಅಂತ್ಯ ಮತ್ತು ಕ್ರಿಸ್ತಶಕದ ಪ್ರಾರಂಭದ ಕಾಲದಿಂದಲೇ ನಿಖರವಾಗಿ ಗುರುತಿಸುತ್ತವೆ. ಕರ್ನಾಟಕದ ಕಡಲತೀರದ ಬಗೆಗೆ ಪ್ರಥಮ ಉಲ್ಲೇಖ ಗ್ರೀಕ್ ದೇಶದ ಪ್ಲಿನಿಯ 'ಪ್ರಾಗೈತಿಹಾಸಿಕ ಚರಿತ್ರೆಯಲ್ಲಿ ದೊರೆಯುತ್ತದೆ.ಈತನು ತನ್ನ ಗ್ರಂಥದಲ್ಲಿ 'ಮುಜೈರಿಸ್' ಎಂಬ ಬಂದರನ್ನು ಉಲ್ಲೇಖಿಸುತ್ತಾನೆ. ಅದು ಕರ್ನಾಟಕದ ಮಂಗಳೂರೆಂದು ಹಲವರು ಅಭಿಪ್ರಾಯ ಪಟ್ಟಿದ್ದಾರೆ. ಟಾಲೆಮಿಯ 2ನೇ ಶತಮಾನ ಸಹ ಉಲ್ಲೇಖಿಸಿರುವ 'ನಿತ್ರೇಸ'ವನ್ನು ನೇತ್ರಾವತಿಯ ಮುಖಜ ಭೂಮಿಯಲ್ಲಿರುವ ಮಂಗಳೂರೆಂದು ಗುರುತಿಸಲಾಗಿದೆ. ಪ್ಲಿನಿ ಸಹ ಇದನ್ನು 'ನಿತ್ರಾಸ್'ಎಂದು ಗುರುತಿಸುತ್ತಾನೆ. 'ಕಾಸ್‌ಮಾಸ್' ಈ ಬಂದರನ್ನು 'ಮ್ಯಾಂಗರೋಥ್' ಎಂದು ಗುರುತಿಸುತ್ತಾನೆ. ಟಾಲೆಮಿಯ ಪ್ರಕಾರ ಈ ಪ್ರದೇಶದಲ್ಲಿ ಕಡಲ್ಗಳ್ಳರ ಹಾವಳಿ ಅಧಿಕವಾಗಿತ್ತೆಂದು ತಿಳಿದು ಬರುತ್ತದೆ. 'ಪೆರಿಪ್ಲಸ್ ಆಫ್ ಎರಿಥ್ರಿಯನ್ ಸೀ' ಗ್ರಂಥಕರ್ತೃ ಕರ್ನಾಟಕದ ಬಂದರುಗಳಾದ ಕಾರವಾರ, ಹೊನ್ನಾವರಗಳನ್ನು ಗುರುತಿಸುತ್ತಾನೆ.[101] ಈ ಪಶ್ಚಿಮ ಕರಾವಳಿ ಪ್ರದೇಶದ ವ್ಯಾಪಾರವನ್ನು ಗ್ರೀಕ್ ಮತ್ತು ರೋಮನ್ ಬರಹಗಾರರು ಹಲವಾರು ವ್ಯಾಪಾರ ಕೇಂದ್ರಗಳು ಮತ್ತು ಬಂದರುಗಳೊಂದಿಗೆ ಉಲ್ಲೇಖಿಸಿದ್ದಾರೆ.[102] ಗ್ರೀಕ್ ಮತ್ತು ರೋಮನ್ ಬರಹಗಾರರು ತಮ್ಮ ವಿವರಣೆಗಳ ಆಧಾರದ ಮೇಲೆ ಪ್ರಸ್ತಾಪಿಸಿದ ಬಂದರುಗಳನ್ನು ತುಳುನಾಡಿನಲ್ಲಿ ಅಸ್ತಿತ್ವದಲ್ಲಿರುವ ಬಂದರುಗಳೊಂದಿಗೆ ಗುರುತಿಸಬಹುದು. ಕ್ರಿ.ಶ. 2ನೇ ಶತಮಾನದ ಮಧ್ಯಭಾಗದ ಗ್ರೀಕ್ ಭೂಗೋಳಶಾಸ್ತ್ರಜ್ಞನಾದ ಟಾಲೆಮಿ, ಭಾರತ, ಮತ್ತು ಈಜಿಪ್ಟ್ ನಡುವಿನ ವ್ಯಾಪಾರ ಸಂಪರ್ಕವನ್ನು ಪಶ್ಚಿಮ ಕರಾವಳಿ ಪ್ರದೇಶದ ಮೂಲಕ ಉಲ್ಲೇಖಿಸುತ್ತಾನೆ.

ಈಜಿಪ್ಟ್‌ನವರು ಉಣ್ಣೆ, ಲಿನಿನ್ ಬಟ್ಟೆ, ವೈನ್ ಮತ್ತು ಬುಲಿಯನ್‌ಗಳನ್ನು ಭಾರತಕ್ಕೆ ರಫ್ತು ಮಾಡುತ್ತಿದ್ದರು ಮತ್ತು ಪುನಃ ಇಲ್ಲಿಂದ ಮಸಾಲೆಗಳನ್ನು, ರತ್ನಗಳು, ರೇಷ್ಮೆ, ಮೆಣಸು, ದಂತ, ಹತ್ತಿ ಮತ್ತು ಆಮೆ ಚಿಪ್ಪುಗಳನ್ನು ಪಡೆಯುತ್ತಿದ್ದರು.[103] ರತ್ನಗಳು, ರೇಷ್ಮೆ ಮತ್ತು ಹತ್ತಿ ಹೊರತುಪಡಿಸಿ ಉಳಿದ ಉತ್ಪನ್ನಗಳು ತುಳುನಾಡಿನಿಂದ ಬಂದವು. ರತ್ನಗಳು, ರೇಷ್ಮೆ ಮತ್ತು

ಹತ್ತಿಯನ್ನು ಕರ್ನಾಟಕದ ಘಟ್ಟದ ಮೇಲಿರುವ ಪ್ರದೇಶಗಳಿಂದ ರಫ್ತು ಮಾಡಲು ತುಳುನಾಡಿನಂತಹ ಕರಾವಳಿ ಬಂದರುಗಳಿಗೆ ತಂದರು ಎಂದು ಸಮರ್ಥವಾಗಿ ಹೇಳಬಹುದು. ಆದ್ದರಿಂದ ಕ್ರಿ. ಪೂ. 4000ದ ಮೊದಲೇ ಪಶ್ಚಿಮ ಕರಾವಳಿ ಪ್ರದೇಶವು ದೇಶ ವಿದೇಶಗಳ ನಡುವಿನ ವ್ಯಾಪಾರದ ಸಂಪರ್ಕ ಅಸ್ತಿತ್ವದಲ್ಲಿದೆ ಎಂದು ಸೂಚಿಸಬಹುದು. ಸ್ಟರಕ್ ಮಾತನ್ನು ನಂಬುವುದಾದರೆ ಖಂಡಿತವಾಗಿಯೂ ಕ್ರಿ.ಶ. ಎರಡನೇ ಶತಮಾನದ ನಂತರ ತುಳುನಾಡು ಪಾಶ್ಚಿಮಾತ್ಯ ಜಗತ್ತಿನಲ್ಲಿ ವ್ಯಾಪಾರ ಮತ್ತು ವಾಣಿಜ್ಯ ಸಂಬಂಧಗಳನ್ನು ಗ್ರೀಕ್ ಮತ್ತು ರೋಮನ್ ಬರಹಗಾರರಿಂದ ಸಾಕ್ಷ್ಯ ಮಾಡಿದೆ. ಅಂದಿನಿಂದ ಈ ಪ್ರದೇಶದ ವ್ಯಾಪಾರ ಮತ್ತು ವಾಣಿಜ್ಯವು ಅದನ್ನು ಅನುಭವಿಸಿದ ಸ್ವಾಭಾವಿಕ ಪ್ರಯೋಜನದಿಂದಾಗಿ ಪ್ರವರ್ಧಮಾನಕ್ಕೆ ಬಂದಿತು. ತುಳುನಾಡವರಿಗೆ ಕ್ರಿ.ಶ. ಎರಡನೆಯ ಶತಮಾನದಲ್ಲೇ ರೋಮ್ ಸಾಮ್ರಾಜ್ಯದೊಡನೆ ವ್ಯಾಪಾರ ವಹಿವಾಟು ಇದ್ದದ್ದು ಕಾಣಬಹುದು.

ಕ್ರಿ.ಶ. 1429ರ ಮೂಡುಬಿದಿರೆಯ ಶಾಸನವು[104] ಚೀನಾ ರೇಷ್ಮೆ ಖರೀದಿಯನ್ನು ಉಲ್ಲೇಖಿಸುತ್ತದೆ. ಇದು ಚೀನೀಯರ ವ್ಯಾಪಾರದ ಆಸಕ್ತಿಯಾಗಿದ್ದು, ನೆರೆಹೊರೆಯೊಂದಿಗೆ ಮತ್ತು ಆಫ್ರಿಕಾದೊಂದಿಗೆ ಅದರಲ್ಲೂ ವಿಶೇಷವಾಗಿ ಭಾರತದ ಪಶ್ಚಿಮ ಕರಾವಳಿಯೊಂದಿಗೆ ತನ್ನ ಸಂಬಂಧವನ್ನು ನಿರ್ಧರಿಸುತ್ತದೆ. ಚೀನೀಯರ ಸಮಕಾಲೀನ ಐತಿಹಾಸಿಕ ದಾಖಲೆಗಳು ಅವರು ದಕ್ಷಿಣ ಭಾರತದಲ್ಲಿ ಹೇರಳವಾದ ಉತ್ಪನ್ನಗಳನ್ನು ಸಂಗ್ರಹಿಸಲು ಉತ್ಸುಕರಾಗಿದ್ದರು ಎಂಬುದನ್ನು ಸೂಚಿಸುತ್ತವೆ. ಅಲ್ಲಿ ಭಾರತೀಯ ಸಾಗರ ಪ್ರದೇಶದಲ್ಲಿ ಲಭ್ಯವಿರುವ ಕೆಲವು ಉತ್ಪನ್ನಗಳನ್ನು ಖರೀದಿಸುವ ಉದ್ದೇಶದಿಂದ ಚೀನ ವಿಶೇಷ ಕಾರ್ಯಾಚರಣೆಯನ್ನು ನಿಲ್ಲಿಸಿತು. ಇದರ ಕಾರ್ಯವು ಮೇಲಿನ ಪ್ರದೇಶವನ್ನು ಅನ್ವೇಷಿಸಲು ಆಗಿತ್ತು.[105] ಕರ್ನಾಟಕದ ಬಗೆಗಿನ ಹಾಗೂ ನಾಣ್ಯ, ಶಾಸ್ತ್ರೀಯ ಅವಶೇಷಗಳ ಅಧ್ಯಯನವು ಚೀನಾದೊಂದಿಗೆ ಕೆಲವು ರೀತಿಯ ವ್ಯಾಪಾರ ಸಂಪರ್ಕಗಳು ಕ್ರಿ.ಪೂ.2ನೇ ಶತಮಾನದಲ್ಲಿ ಜನಬಳಕೆಯಲ್ಲಿತ್ತು ಎಂದು ಸೂಚಿಸುತ್ತದೆ.[106] ಅದಾಗ್ಯೂ ಚಿತ್ರ ಅಸ್ಪಷ್ಟವಾಗಿದೆ. ಇದು ಕ್ರಿ.ಪೂ.7ನೆಯ ಶತಮಾನದಿಂದ ಹೊರಹೊಮ್ಮಿತು. ಚೀನೀ ಮೂಲಗಳಲ್ಲಿ ಒಂದಾದ ಪಾಶ್ಚಾತ್ಯ ಭಾರತದಿಂದ ಬಂದ ಹಡಗು ಚೀನಾಕ್ಕೆ ವಿಶಿಷ್ಟವಾದ, ವಿಭಿನ್ನವಾದ ರಾಕ್ ಸ್ಫಟಿಕದ ಕನ್ನಡಿಯನ್ನು ರಫ್ತುಮಾಡಲಾಗಿದೆ ಎಂದು ಹೇಳುತ್ತದೆ. ವಿಚಿತ್ರ ಕನ್ನಡಿ (Peculiar Mirror) ಚೀನಾದ ವ್ಯಾಪಾರಿಗಳನ್ನು ಆಕರ್ಷಿಸಿತು[107]

13ನೇ ಶತಮಾನದ ಮಧ್ಯಭಾಗದಲ್ಲಿ ಚೀನಿಯರ ವ್ಯಾಪಾರಿ ಹಡಗುಗಳು ಕ್ವಿಲೋನ್‌ಗೆ ಭೇಟಿ ನೀಡಿ ಅಲ್ಲಿಂದ ಉತ್ತರದ ಕಡೆಗೆ ಮಂಗಳೂರು, ಹೊನ್ನಾವರ ಮತ್ತು ಗೋವಾಕ್ಕೆ ತೆರಳುತ್ತಿದ್ದವು. ಮತ್ತು, ಚೀನಾದ ವಾರ್ಷಿಕ ವರದಿಯೊಂದು ಭಾರತದ ಪಶ್ಚಿಮ ಕರಾವಳಿಯ ಅನೇಕ ಬಂದರುಗಳಾದ ಮಂಗಳೂರು ಮತ್ತು ಹೊನ್ನಾವರಗಳೊಂದಿಗೆ ತಮ್ಮ ವ್ಯಾಪಾರ ಸಂಬಂಧವನ್ನು ತಿಳಿಸುತ್ತದೆ.[108] ಈ ಬಂದರುಗಳಲ್ಲಿರುವ ವ್ಯಾಪಾರದ ಸರಕುಗಳೆಂದರೆ ಸ್ಯಾಟಿನ್ ಬಟ್ಟೆ, ಚೀನಿಪಾತ್ರೆಗಳು (ಅವುಗಳನ್ನು ಪಿಂಗಾಣಿಯ ಪಾತ್ರೆಗಳೆಂದೂ ಕರೆಯುವುದಿದೆ), ನೀಲಿ ಮತ್ತು ಬಿಳಿ ಜಾರ್ (ಚೈನಿ ಬೆಂಗಾಳಿ), ಕಬ್ಬಿಣದ ಅದಿರು, ಬಣ್ಣದ ಮಣಿಗಳು, ಲವಂಗಗಳು, ಏಲಕ್ಕಿ ಮತ್ತು ಕಸ್ತೂರಿ.

ಸ್ಥಳೀಯ ಮೂಲಗಳು ಕರಾವಳಿ ಕರ್ನಾಟಕದ ಬಂದರುಗಳಲ್ಲಿ ಚೀನಿಯರ ವ್ಯಾಪಾರದ ಬಗ್ಗೆ ಕೆಲವು ಆಸಕ್ತಿದಾಯಕ ಸಂಕ್ಷಿಪ್ತ ಮಾಹಿತಿಯನ್ನು (ಬಿಟ್ಸ್‌ಗಳನ್ನು) ಉಲ್ಲೇಖಿಸುತ್ತವೆ. ಇದಕ್ಕೆ ಬೆಂಬಲವಾಗಿ ಶರವು ಮಹಾಗಣಪತಿ ಮಹಿಮೆ ಎಂಬ ಗ್ರಂಥದಲ್ಲಿ ಉಲ್ಲೇಖಿಸಲಾದ ಮಂಗಳೂರು ಬಂದರಿನಲ್ಲಿರುವ ಚೀನಿ ವ್ಯಾಪಾರದ ಮಾಹಿತಿಯನ್ನು ಉಲ್ಲೇಖಿಸುತ್ತವೆ. ಈ ಕೃತಿ ಕನ್ನಡ ಭಾಷೆಯಲ್ಲಿದೆ ಮತ್ತು ಅದರ ಸಂಯೋಜನೆಯ (Composition) ದಿನಾಂಕ ಇನ್ನೂ ತಿಳಿದಿಲ್ಲ. ಇದು ದೊಡ್ಡ ಚೀನಿ ಹಡಗುಗಳ ಆಗಮನದಿಂದ ಬೃಹತ್ Mastಗಳು ಮತ್ತು ಹಡಗುಗಳ ಸಂಖ್ಯೆ ಮಂಗಲವತಿಪುರಂ (Mangalore)ಗೆ ಬಂದದ್ದು ಎಂದು ಹೇಳುತ್ತದೆ. ಪ್ರಯಾಣದ ಸಮಯದಲ್ಲಿ ತಮ್ಮ ದೊಡ್ಡ ಹಡಗುಗಳು ನೇತ್ರಾವತಿಯ ನದಿಯ ಮುಖಜ ಭೂಮಿಯಲ್ಲಿ (ಮುಖಾಂತರ) ನೆಲೆಗೊಂಡಿವೆ. ಈ ನಿರ್ಣಾಯಕ ಪರಿಸ್ಥಿತಿಯಲ್ಲಿ ಚೀನಿ ನಾಯಕರು ಮಂಗಳೂರಿನ ರಾಜನ ಸಹಾಯವನ್ನು ಬಯಸಿದರು. ಈ ಪತ್ರವು ನಾಯಕರಿಗೆ ಮತ್ತು ಹಡಗುಗಳನ್ನು ತೀರಕ್ಕೆ ತರಲು ನೆರವಾಯಿತು. ಅದೇ ಗ್ರಂಥವು, ಸ್ಥಳೀಯ ಜನರು ಚಿನ್ನದ ಮಿಶ್ರಣ, ಮಣ್ಣು ಮತ್ತು ಇತರ ಸರಕುಗಳನ್ನು ಹಡಗಿನಲ್ಲಿ ಖರೀದಿಸಿದ್ದಾರೆಂದು ಹೇಳುತ್ತದೆ. 13ನೇ ಶತಮಾನದ ಅಂತ್ಯದ ವೇಳೆಗೆ ಈ ಘಟನೆ ನಡೆದಿದೆ ಎಂದು ತೋರುತ್ತದೆ.[109]

ಕೆಲವು ಶಾಸನಗಳ ಅಧ್ಯಯನವು ಕರಾವಳಿ ಕರ್ನಾಟಕದ ಚೀನಿ ವ್ಯಾಪಾರಕ್ಕೆ ಸಂಬಂಧಿಸಿದೆ ಎಂಬುದನ್ನು ಗಮನಿಸುವುದು ಆಸಕ್ತಿದಾಯಕವಾಗಿದೆ. ಉದಾಹರಣೆಗೆ 1430ರಲ್ಲಿ ಚೀನಿ ಬಟ್ಟೆಯನ್ನು ಖರೀದಿಸುವ ಪ್ರಸ್ತಾಪ ಮೂಡುಬಿದರೆ ಶಾಸನಗಳಲ್ಲಿ

ಒಂದಾಗಿದೆ. ಕರಾವಳಿ ಕರ್ನಾಟಕದ ಬಂದರುಗಳಲ್ಲಿ ವಿದೇಶೀ ಮೂಲಗಳು ಚೀನಿ ವ್ಯಾಪಾರ ಚಟುವಟಿಕೆಗಳನ್ನು ಸಾಮಾನ್ಯವಾಗಿ ಮಾತನಾಡುತ್ತವೆ. ಉದಾಹರಣೆಗೆ 16ನೇ ಶತಮಾನದ ಆರಂಭಿಕ ದಶಕದ ಪೋರ್ಚುಗೀಸ್ ದಾಖಲೆಗಳೊಂದರಲ್ಲಿ ಚೀನಿಯ ರೇಷ್ಮೆಯನ್ನು ಹೊನ್ನಾವರದಲ್ಲಿ ಖರೀದಿಸಿದ ಬಗ್ಗೆ ಪ್ರಸ್ತಾಪವಿದೆ. ತಾಮ್ರ, ತವರ ವರ್ಮಿಲಿಯನ್ ಇತ್ಯಾದಿಗಳು ವಿನಿಮಯವಾಗಿವೆ.[110]

ಕೆಲವು ಜಾನಪದ ಸಾಹಿತ್ಯ ಮತ್ತು ಸ್ಥಳೀಯ ಸಮುದಾಯಗಳು ಕರಾವಳಿ ಕರ್ನಾಟಕದ ಚೀನಿಯರ ವ್ಯಾಪಾರದ ಬಗ್ಗೆ ಆಸಕ್ತಿದಾಯಕ ಮಾಹಿತಿಗಳನ್ನು ಒದಗಿಸುತ್ತವೆ. ತುಳು ಪಾಡ್ದನದ ಜಾನಪದ ಹಾಡುಗಳಲ್ಲಿ ಒಂದು ಮಕಾವೊ(ಚೀನಾ)ದೊಂದಿಗೆ ಸ್ಥಳೀಯ ವ್ಯಾಪಾರಿಗಳ ವ್ಯಾಪಾರವನ್ನು ಉಲ್ಲೇಖಿಸುತ್ತದೆ.[111] ಅದೇ ರೀತಿ ಸ್ಥಳೀಯ ಸಂಪ್ರದಾಯವು ಬಸ್ರೂರು ಬಂದರಿನಲ್ಲಿ ಚೀನೀ ವ್ಯಾಪಾರ ಚಟುವಟಿಕೆಗಳನ್ನು ನಮಗೆ ತಿಳಿಸುತ್ತದೆ. ಇದು ಕರಾವಳಿ ಕರ್ನಾಟಕದಲ್ಲಿನ ಶ್ರೀಮಂತ ಬಂದರುಗಳಲ್ಲಿ ಒಂದಾಗಿದೆ. ಚೀನಾದ ದೊಡ್ಡ ಹಡಗುಗಳು ಚೀನಾದಿಂದ, ಆಷಾಢ (ಜುಲೈ, ಆಗಸ್ಟ್) ತಿಂಗಳಲ್ಲಿ ಈ ಮೇಲೆ ತಿಳಿಸಲಾದ ಬಂದರಿಗೆ ತಲುಪಿದವು ಎಂದು ಅದು ಹೇಳುತ್ತದೆ. ಶುಂಠಿ, ಕಬ್ಬು, ತೆಂಗಿನಕಾಯಿ ಇತ್ಯಾದಿಗಳಿಗೆ ಚೀನೀ ನಾವಿಕರು ಇಲ್ಲಿಗೆ ಬಂದರು. ಇವುಗಳನ್ನು ಚೀನೀ ರೇಷ್ಮೆ ವರ್ಣರಂಜಿತ ನಾಳಗಳು ಮತ್ತು ವಿವಿಧ ಗ್ಲಾಸ್‌ಗಳಿಗೆ ವಿನಿಮಯ ಮಾಡಿಕೊಳ್ಳಲಾಯಿತು. ಅಂತಹ ಸಮುದ್ರಯಾನದಲ್ಲಿ ಚೀನೀ ಕ್ಯಾಪ್ಟನ್, ಸ್ಥಳೀಯ ದೇವತೆಯಾದ ಪಂಜುರ್ಲಿಯನ್ನು ಅಪಹಾಸ್ಯ ಮಾಡಿದ್ದಾನೆ. ಇದರಿಂದಾಗಿ ಈ ದೇವತೆ ಕೋಪಗೊಂಡಿದ್ದರಿಂದ ಚೀನಿಯರ ಹಡಗು ಸಮುದ್ರದಲ್ಲಿ ಮುಳುಗಿತು. ಅಂತಿಮವಾಗಿ ಚೀನೀ ನಾಯಕನು ಪಂಜುರ್ಲಿಯ ಅಟೆಂಡೆಂಟ್ ದೇವತೆಯಾಗಿದೆ ಎಂದಿದ್ದಾನೆ. ವರ್ಷಗಳಲ್ಲಿ ಸೇವಕರು ದೇವರನ್ನು ಚಿನ್‌ಭೂತಾ ಎಂದು ಸ್ಥಳೀಯ ಜನರಿಂದ ಪೂಜಿಸಲಾಗುತ್ತದೆ. ಇದಕ್ಕೆ ಪೂರಕವಾಗಿ ಬಸ್ರೂರಿನಲ್ಲಿರುವ ಚೀನೀ ಭೂತಾರಾಧನೆ.

ಅಧ್ಯಯನ ಒಂದರ ಪ್ರಕಾರ ಕರ್ನಾಟಕದೊಂದಿಗೆ ಚೀನಿ ಸಂಪರ್ಕವು ನಿರಂತರವಾಗಿಲ್ಲ ಮತ್ತು ಅದರ ಮಾಹಿತಿಯು ಚದುರಿ ಹೋಗಿದೆ. ಚೀನಿ ಸಂಪರ್ಕವು ಅನೇಕ ವೇಳೆ ವ್ಯಾಪಾರದ ಆಸಕ್ತಿಯಿಂದ ಪ್ರಭಾವಿತವಾಗಿತ್ತು. ಕರಾವಳಿ ಕರ್ನಾಟಕದಲ್ಲಿ ಕೆಲವು ಉತ್ಪನ್ನಗಳ ಲಭ್ಯತೆಯ ಕಾರಣದಿಂದಾಗಿ ಖರೀದಿಸಲು ಚೀನಾದವರು ಇಲ್ಲಿಗೆ ಬಂದರು,

ಏಕೆಂದರೆ ಅವುಗಳು ಬಹಳ ಬೇಕಾಗಿದ್ದವು. ಅಂತೆಯೇ ಚೀನಾದ ಸರಕುಗಳು ಕರ್ನಾಟಕದ ಜನರನ್ನು ಆಕರ್ಷಿಸಿತು. ಕರಾವಳಿ ಕರ್ನಾಟಕದೊಂದಿಗೆ ಚೀನಿಯರ ವ್ಯಾಪಾರದ ಸಂಪರ್ಕವು ಕೇರಳದಲ್ಲಿ ಮುಂದುವರೆದಿದೆ ಹಾಗೂ ಚೀನಿ ಮೂಲಗಳಿಂದ ತಿಳಿದಿರುವಂತೆ ಕೇರಳದಲ್ಲಿ ಅಗತ್ಯ ಉತ್ಪನ್ನಗಳ ಕೊರತೆ ಕಂಡುಬಂದಿತ್ತು.[112] ಈ ಸಂದರ್ಭದಲ್ಲಿ ಚೀನಿಯರ ವ್ಯಾಪಾರಿ ಹಡಗುಗಳು ಕರಾವಳಿ ಕರ್ನಾಟಕದ ಬಂದರುಗಳಿಗೆ ಅಗತ್ಯವಿರುವ ಉತ್ಪನ್ನಗಳನ್ನು ಖರೀದಿಸಲು ಸಾಕಷ್ಟು ಹಣವನ್ನು ಪಡೆದುಕೊಂಡಿವೆ. ಕೆಲವು ಸಂದರ್ಭಗಳಲ್ಲಿ ಮಲಬಾರ್ ವ್ಯಾಪಾರಿಗಳು, ಕರಾವಳಿ ಕರ್ನಾಟಕ ಮತ್ತು ಚೀನಾದಲ್ಲಿನ ವ್ಯಾಪಾರಿಗಳ ನಡುವಿನ ವಹಿವಾಟು ವ್ಯವಹಾರಗಳಲ್ಲಿ ಮಧ್ಯವರ್ತಿಗಳಾಗಿ ಸೇವೆ ಸಲ್ಲಿಸಿದರು. 16ನೇ ಶತಮಾನದ ಮೊದಲ ಎರಡು ದಶಕಗಳಲ್ಲಿ, ಮಲಬಾರ್‌ನಿಂದ ಬಂದ ಕರಕುಶಲ ವಸ್ತುಗಳು ಹೊನ್ನಾವರ, ಭಟ್ಕಳ, ಬಸ್ರೂರು, ಮಂಗಳೂರು ಮತ್ತು ಕುಂಬಳೆ ಬಂದರುಗಳನ್ನು ಭೇಟಿ ಮಾಡಿತ್ತು. ಅಲ್ಲಿ ಅವರ ಕರಕುಶಲ ತೆಂಗಿನಕಾಯಿ, ಕೊಪ್ರಸ್, ಪಾಮ್‌ಎಣ್ಣೆ, ಕಪ್ಪು ಅಕ್ಕಿ ಮತ್ತು ಕಾಳುಮೆಣಸುಗಳಿಂದ ತುಂಬಿತ್ತು. ನಂತರ ಮಲಬಾರ್‌ನಲ್ಲಿ ಬಂದರುಗಳಿಗೆ ಕರೆದೊಯ್ಯಲಾಯಿತು. ಕರಾವಳಿ ಕರ್ನಾಟಕದ ಬಂದರುಗಳಿಂದ ಮಲಬಾರ್ ವ್ಯಾಪಾರಿಗಳು, ಎಲಿಮಾಲ ಬಂದರುಗಳಲ್ಲಿ, ವಲ್ಲಿ ಪಟ್ಟಣ, ಕೊಡಂಗಲೂರು ನಂತರ ಕಣ್ಣನೂರು, ಕ್ಯಾಲಿಕಟ್ ಮತ್ತು ಕೊಚ್ಚಿನ್‌ಗಳಿಂದ ತಂದ ಉತ್ಪನ್ನಗಳ ವ್ಯಾಪಾರವನ್ನು ಚೀನಾ ನಡೆಸಿತು. ಹೀಗಾಗಿ ಕೇರಳದ ಪ್ರದೇಶವು ಚೀನಾ ಮತ್ತು ಕರಾವಳಿ ಕರ್ನಾಟಕದ ನಡುವಿನ ವ್ಯಾಪಾರ ವಹಿವಾಟಿನಲ್ಲಿ ತನ್ನ ಪ್ರಮುಖ ಪಾತ್ರ ವಹಿಸಿತ್ತು. ಕರ್ನಾಟಕದೊಂದಿಗೆ ಚೀನಾ ಸಂಪರ್ಕದ ಪ್ರಭಾವವು ಕೃಷಿಯ ಮತ್ತು ಜವಳಿ ಚಟುವಟಿಕೆಗಳ ಮೇಲೆ ಪ್ರಭಾವ ನೀಡಿತು. ಚೀನಿಕುಂಬಳ ಎಂದು ಕರೆಯಲ್ಪಡುವ ಕುಂಬಳದ ಬೆಳೆಯುವಿಕೆಯು ಚೀನಿ ಸಂಪರ್ಕದ ಫಲಿತಾಂಶವಾಗಿದೆ. ಕರ್ನಾಟಕದಲ್ಲಿನ ರೇಷ್ಮೆ ಉತ್ಪನ್ನಗಳು ಪ್ರಚೋದನೆಯನ್ನು ಪಡೆಯಿತು. ಕರ್ನಾಟಕದೊಂದಿಗಿನ ಚೀನಾ ಸಂಪರ್ಕವು ನಂತರದ ಜನರ ಜಾನಪದ ನಂಬಿಕೆಯನ್ನು ಪ್ರಭಾವಿಸಿತು. ಕರಾವಳಿ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಚೀನಿ ಭೂತಗಳ ಆರಾಧನೆಯಿಂದ ಇದು ನಮಗೆ ತಿಳಿದಿದೆ.

ಹೀಗೆ ತುಳುನಾಡು ವಿದೇಶಗಳೊಂದಿಗೆ ಹೊಂದಿದ್ದ ವ್ಯಾಪಾರ ವಹಿವಾಟಿನ ಬಗ್ಗೆ ಹಲವಾರು ದಾಖಲೆಗಳು ದೊರೆಯುತ್ತವೆ. ಇದರ ಜೊತೆಗೆ ಸ್ಥಳೀಯ ಜನಪದ ಸಾಹಿತ್ಯವೂ

ಕೂಡ ವ್ಯಾಪಾರದ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. ಅದರಲ್ಲಿ 'ಬೊಬ್ಬರ್ಯ' ಪಾಡ್ದನವು ಒಂದಾಗಿದೆ. ಇದು ಮುಸ್ಲಿಂ ಕತೆಯನ್ನೊಳಗೊಂಡಿದೆ. ಮುಸ್ಲಿಂರು ವ್ಯಾಪಾರಿಗಳಾಗಿದ್ದು, ಕಡಲಿನಲ್ಲಿ ವ್ಯಾಪಾರಕ್ಕೆ ಹೋಗುತ್ತಿದ್ದರು. ಇರಾನ್ ಮತ್ತು ಅರೇಬಿಯಾದ ವ್ಯಾಪಾರಸ್ಥರು ಮೊದಲನೆಯ ಸಹಸ್ರಮಾನದ ಮಧ್ಯಭಾಗದಲ್ಲಿ ತುಳುದೇಶದೊಡನೆ ಸಂಪರ್ಕ ಹೊಂದಿದ್ದರೆಂದು ತಿಳಿಸಿದ್ದಾರೆ. ಹಾಗೆಯೇ ರಾಷ್ಟ್ರಕೂಟರ ಕಾಲದಲ್ಲಿ (ಕ್ರಿ.ಶ. 8ನೇ ಶತ) ಕರ್ನಾಟಕದಲ್ಲಿ ನೆಲೆಸಿದ್ದ ಮುಸ್ಲಿಂರು ತುಳುನಾಡನ್ನು ಪ್ರವೇಶಿಸಿರಬೇಕು. ತುಳುವರೊಡನೆ ರಕ್ತಸಂಬಂಧ ಬೆಳೆಸಿದ್ದಿರಬೇಕು. 'ಬೊಬ್ಬರ್ಯ' ಪಾಡ್ದನದಲ್ಲಿ ಬೊಬ್ಬರ್ಯ ಭೂತವನ್ನು ಮುಸ್ಲಿಂ ಗಂಡಸಿಗೆ ಹುಟ್ಟಿದವನು ಮತ್ತು ಮೇಲಿನ ಇತಿಹಾಸದ ಆಧಾರದ ಮೇಲೆ 'ಬೊಬ್ಬರ್ಯ' ಪಾಡ್ದನವು ರಚನೆಯಾದ ಕಾಲವು ಸುಮಾರು ಕ್ರಿ.ಶ. 10ನೇ ಶತಮಾನಕ್ಕಿಂತ ಪ್ರಾಚೀನವಾದುದೆಂದು ಹೇಳಬಹುದು. ಇವರು ಹಡಗಿನಲ್ಲಿ ರಾಗಿ, ನವಣೆ, ಅಕ್ಕಿ, ಭತ್ತ, ಗೋಧಿ, ಕಡಲೆ, ತೆಂಗಿನಕಾಯಿ, ಹೊಗೆಸೊಪ್ಪು ಇವೆಲ್ಲಾವನ್ನು ಸಾಗರೋತ್ತರ ವ್ಯಾಪಾರ ಮಾಡುತ್ತಿದ್ದರೆಂದು ಬೊಬ್ಬರ್ಯ ಪಾಡ್ದನದಲ್ಲಿ ಉಲ್ಲೇಖಗಳಿವೆ. ಬೊಬ್ಬರ್ಯನ ತಾಯಿ ಮತಾಂತರಕ್ಕೆ ಮೊದಲು ಜೈನ ಹೆಣ್ಣಾಗಿದ್ದಳೆಂದು ಪ್ರತೀತಿ ಇರುವುದರಿಂದ ಇಲ್ಲಿ ಸೆಟ್ಟಿ (ಶ್ರೇಷ್ಠಿ) ಎಂಬುದುಕ್ಕೆ ತುಳು ಪಾಡ್ದನಗಳಲ್ಲಿ ವ್ಯಾಪಾರಿ ಮತ್ತು ವ್ಯಾಪಾರಗಳ ಕುರಿತ ಉಲ್ಲೇಖಗಳಿವೆ. ಆದರೆ ಇದು ಸ್ಪಷ್ಟವಾಗಿ ಯಾವ ಕಾಲದ್ದು ಎಂದು ತಿಳಿಯುವುದಿಲ್ಲ. ಇಲ್ಲಿನ ವ್ಯಾಪಾರವು ಒಳನಾಡಿನದ್ದು ಮತ್ತು ಸಾಗರೋತ್ತರವಾದದ್ದು.[106] ಸಾಮಾನ್ಯವಾಗಿ ವಿಜಯನಗರ ಮತ್ತು ಅನಂತರದ ಕಾಲಘಟ್ಟದ್ದು ಎಂದು ಊಹಿಸಬಹುದು. ಏಕೆಂದರೆ ಪಂಜುರ್ಲಿ ಪಾಡ್ದನದಲ್ಲಿ ವಿಜಯನಗರದ ಪ್ರಸ್ತಾಪವಿದೆ. ಕಲ್ಕುಡ, ಕಲ್ಲುರ್ಟಿ ಪಾಡ್ದನವು ಮಧ್ಯಕಾಲೀನ ಕರ್ನಾಟಕದ ಅರಸು ಮನೆತನಗಳ ಬಗ್ಗೆ ತಿಳಿಸುತ್ತವೆ. ದೈವಗಳ ಬಗ್ಗೆ ಶಾಸನಗಳು ಸುಮಾರು 14ನೇ ಶತಮಾನದ ಮಧ್ಯಭಾಗದಿಂದ ಉಲ್ಲೇಖಿಸುತ್ತವೆ.[113] ಅಕ್ಕಿ ಭತ್ತಗಳಂತಹ ದಿನನಿತ್ಯದ ಜೀವನೋಪಯೋಗಿ ವಸ್ತುಗಳತ್ತ ವಾಣಿಜ್ಯ ವ್ಯಾಪಾರವು ಹೆಚ್ಚು ಆಸಕ್ತಿಯನ್ನು ತೋರಿದ್ದನ್ನು ಸಂಜಯ್ ಸುಬ್ರಹ್ಮಣ್ಯಮ್ ಗುರ್ತಿಸಿದ್ದಾರೆ.[114] ಇಲ್ಲಿನ ಜನಸಾಮಾನ್ಯರಿಗೆ ಕಡಿಮೆ ಖರ್ಚಿನಲ್ಲಿ ಸಿಗುವಂತಾದ್ದು. ಜೊತೆಗೆ ತುಳುನಾಡಿನ ಪ್ರಮುಖವಾದ ಕೃಷಿಯೇ ಭತ್ತವಾಗಿದ್ದು, ಇಲ್ಲಿನ ಜನರಿಗೆ ಸುಲಭವಾಗಿ ಕೈಗೆಟಕುವಂತಾದುದಾಗಿರಬೇಕು. ಪ್ರತಿನಿತ್ಯದ ಆಹಾರದ ವಸ್ತುವಾಗಿ ಈ ಅಕ್ಕಿಯನ್ನು ಬಳಸುತ್ತಿದ್ದರಿಂದ ಹಾಗೆಯೇ ಬಹಳ ದೀರ್ಘಕಾಲದವರೆಗೂ ಶೇಖರಿಸಿಟ್ಟುಕೊಳ್ಳು ವುದರಿಂದ ಅಕ್ಕಿಗೆ ಹೆಚ್ಚು ಬೇಡಿಕೆ ಉಂಟಾಯಿತು. ವಿಜಯನಗರ ಕಾಲದಲ್ಲಿ ಕರ್ನಾಟಕದ

ಕರಾವಳಿ ಪ್ರದೇಶದಲ್ಲಿ ಅಕ್ಕಿ ಭತ್ತದ ವ್ಯವಸಾಯ ಹಾಗೂ ಉತ್ಪಾದನೆ ಸಾಕಷ್ಟು ಹೆಚ್ಚಿತೆಂದೂ, ಹಾಗೆಯೇ ಬೇಡಿಕೆ ಇರುವುದರಿಂದ ರಫ್ತು ವ್ಯಾಪಾರದ ಮುಖ್ಯ ವಸ್ತುವಾಯಿತೆಂದು ತಿಳಿಯಬಹುದು. ಪೂರ್ವ ಕರಾವಳಿ ಹಾಗೂ ಕಾವೇರಿ ನದಿ ಮುಖಜ ಭೂಮಿಯಿಂದಲೂ ಅಕ್ಕಿ ಮಲಬಾರಿನ ಪಟ್ಟಣಗಳಿಗೆ ರಫ್ತಾಗಲು ತುಳುನಾಡಿನ ಬಂದರುಗಳಿಗೆ ಒಳನಾಡಿನ ವ್ಯಾಪಾರದ ಮೂಲಕ ಬರುತ್ತಿತ್ತು. ಇದು ಇತಿಹಾಸಕಾರರ ಗಮನಕ್ಕೆ ಬಂದಿದೆ. ಜಾನಪದವು ಮೌಖಿಕವಾಗಿರುವುದರಿಂದ ನಿರ್ದಿಷ್ಟ ಮಾಹಿತಿಗೆ ಉಪಯುಕ್ತವಲ್ಲ. ಆದರೆ ಅನುಭವಗಳ ಗ್ರಹಿಕೆ ಹಾಗೂ ಅವುಗಳ ಬಗ್ಗೆ ಸಮಾಜವು ಆಡಿದ ಪ್ರತಿಕ್ರಿಯೆಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ಸಹಕಾರಿ.[115]

ಈ ಎಲ್ಲಾ ದಾಖಲೆಗಳು ಪ್ರಾರಂಭಿಕ ದಿನಗಳಲ್ಲಿ ಕರ್ನಾಟಕದ ಕಡಲತೀರ ಸಮುದ್ರಮಾರ್ಗದ ವ್ಯಾಪಾರವನ್ನು ಹೊರದೇಶಗಳೊಂದಿಗೆ ನಡೆಸುತ್ತಿದ್ದಿತೆಂದು ನಿಖರವಾಗಿ ತಿಳಿಸುತ್ತವೆ.[116] ಪ್ರಾಚೀನ ಕಾಲದಲ್ಲಿ ವ್ಯಾಪಾರ ವಾಣಿಜ್ಯ ವ್ಯವಹಾರಗಳ ಕೊಡುಗೆ ಅಪಾರ. ರಾಜಕೀಯ ಆಡಳಿತಾಧಿಕಾರ ಕೇಂದ್ರೀಕೃತಗೊಳ್ಳುತ್ತಾ ಬಂದಂತೆ ಪಟ್ಟಣಗಳ ವಿಸ್ತರಣೆ, ವ್ಯಾಪಾರದ ಅಭಿವೃದ್ಧಿಗೆ ಕಾರಣವಾಯಿತು. ಪ್ರಜೆಗಳಿಂದ ಕಂದಾಯ, ತೆರಿಗೆ, ಸುಂಕ, ಸಾಮಂತರಿಂದ ಸಂಗ್ರಹಿಸಲಾದ ಕಪ್ಪಕಾಣಿಕೆಗಳು, ಶತ್ರುಗಳನ್ನು ದೋಚಿ ಸಂಗ್ರಹಿಸಿದ ಸಂಪತ್ತು, ಕೆಲವೊಂದು ರಾಜ್ಯಗಳಲ್ಲಿ ದೇವಸ್ಥಾನಗಳಲ್ಲಿ ಒಟ್ಟಾದ ಕಾಣಿಕೆಗಳು ಕೂಡ ರಾಜಬೊಕ್ಕಸವನ್ನೇ ಸೇರುತ್ತಿದ್ದವು. ರಾಜ್ಯಾಡಳಿತ ನಡೆಸಲು ಮತ್ತು ರಾಜ್ಯದ ರಕ್ಷಣೆ ಮಾಡಲು ಸಿಬ್ಬಂದಿ, ಅಧಿಕಾರಿಗಳು, ಸೈನಿಕರು, ಕಾವಲುಗಾರರು, ಅರಮನೆಯ, ದಾಸದಾಸಿಯರು, ಆಸ್ಥಾನಿಕರು, ಮಂತ್ರಿಗಳು, ಸೇನಾಪತಿಗಳು, ಪಾಳೆಗಾರರು ಇವರೆಲ್ಲಾ ಸಾಮಾನ್ಯವಾಗಿ ರಾಜಧಾನಿಯಲ್ಲಿರುತ್ತಿದ್ದರು; ಇಲ್ಲವೇ ಸಂದರ್ಶಿಸಲು ಬರುತ್ತಿದ್ದವರು ರಾಜಬೊಕ್ಕಸದಿಂದ ಹಣ ಪಡೆದು ನಗರದಲ್ಲಿ ಐಷಾರಾಮದ ಜೀವನ ನಡೆಸುತ್ತಿದ್ದರು. ಇವರ ಸುಖ ಜೀವನಕ್ಕೆ ಬೇಕಾದ ಆವಶ್ಯಕ ವಸ್ತುಗಳನ್ನು ತಂದು ಮಾರಾಟ ಮಾಡಿ ಲಾಭ ಪಡೆಯಲು ವಣಿಕರು/ಶ್ರೇಷ್ಠಿಗಳು ಕಾದು ಕುಳಿತಿರುತ್ತಿದ್ದರು. ವ್ಯಾಪಾರಿಗಳು ಹೆಚ್ಚಾಗಿ ವಿದೇಶಿಯರು ಹಾಗೂ ಮುಸಲ್ಮಾನ ರಾಗಿದ್ದರು. ಮಂಗಳೂರು, ಮಲ್ಪೆ, ಬಾರಕೂರು, ಬಸರೂರು, ಗಂಗೊಳ್ಳಿ, ಹಂಗಾರಕಟ್ಟೆ, ಉದ್ಯಾವರ, ಮುಲ್ಕಿ, ಉಳ್ಳಾಲ, ಕುಂಬಳೆ ತುಳುನಾಡಿನ ಪ್ರಸಿದ್ಧ ಬಂದರುಗಳಾಗಿದ್ದವು. ಕರಾವಳಿಯುದ್ದಕ್ಕೂ ಹರಡಿರುವ ಹಲವಾರು ನದಿಗಳು ಒಳಪ್ರದೇಶದಿಂದ ಸರಕು ಸಾಗಾಣಿಕೆಗೆ

ಅನುಕೂಲಕರವಾಗಿದ್ದವು. ಅಗತ್ಯವಿದ್ದಲ್ಲಿ ಎತ್ತಿನ ಗಾಡಿಗಳನ್ನು ಉಪಯೋಗಿಸಲಾಗುತಿತ್ತು.[117] ಕರಾವಳಿಯ ಹಲವಾರು ಪ್ರಾಕೃತಿಕ ಬಂದರುಗಳು ಸಾಗರ ತೀರದ ದೂರದ ಪಟ್ಟಣಗಳಿಗೆ ಹಾಗೂ ವಿದೇಶಕ್ಕೆ ಇಲ್ಲಿನ ಕೃಷಿ ಉತ್ಪನ್ನಗಳನ್ನು ರಫ್ತು ಮಾಡಲು ಉಪಯುಕ್ತವಾಗಿದ್ದವು. ಬಾರಕೂರಿನ (ಕೋಡಿಬೆಂಗ್ರೆ) ಬಂದರಿಗೆ ಮಲಬಾರ್, ಓರ್ಮುಜ್, ಏಡನ್, ಕ್ವಹೀರ್, ಗೋವಾ, ಮುಂತಾದ ಊರುಗಳಿಂದ ಅನೇಕ ಹಡಗುಗಳು ಬರುತ್ತಿದ್ದುವು. ಕಡಂದಲೆಯ ಅಕ್ಕಿ ಮೊಸ್ರಾಲಿನಿಂದ ದೋಣಿ ಮೂಲಕ ಮೂಲ್ಕಿಗೆ ಸಾಗಿಸಲ್ಪಟ್ಟು, ಅಲ್ಲಿಂದ ಹೊರಪ್ರದೇಶಕ್ಕೆ ರಫ್ತಾಗುತ್ತಿತ್ತು. ಕುಂಬಳೆ, ಗಂಗೊಳ್ಳಿ, ಉದ್ಯಾವರ ಮುಂತಾದ ಸಣ್ಣ ಬಂದರುಗಳಿಂದಲೂ ವ್ಯಾಪಾರ ನಡೆಯುತಿತ್ತು. ಮಂಗಳೂರು ಮತ್ತು ಬಸರೂರು ಕರಾವಳಿಯ ಪ್ರಮುಖ ಬಂದರುಗಳಾಗಿದ್ದವು. ಬೈಂದೂರಿನಿಂದ ಒಳ್ಳೆಯ ಅಕ್ಕಿ ಭಟ್ಕಳದಲ್ಲಿ ಮಾರಾಟವಾಗುತ್ತಿತ್ತು. ಕುಂಬಳೆಯಿಂದ ಮಸ್ಕತಿ ಅಕ್ಕಿ ಮಾಲ್ದೀವಿಗೆ ಹೋಗುತಿತ್ತು. ಇತರ ಬಂದರುಗಳಲ್ಲೂ (ಮಸ್ಕತಿ) ಅಕ್ಕಿಯೇ ವ್ಯಾಪಾರದ ಮುಖ್ಯ ಸಾಮಗ್ರಿಯಾಗಿತ್ತು. ತೆಂಗಿನಕಾಯಿ, ತೆಂಗಿನನಾರು, ತೆಂಗಿನೆಣ್ಣೆ, ಗಂಧದೆಣ್ಣೆ, ಕರಿಮೆಣಸು ಇತ್ಯಾದಿ ವಸ್ತುಗಳಿಗೂ ಉತ್ತಮ ಬೇಡಿಕೆಯಿರುತ್ತಿತ್ತು. ಕುದುರೆ, ಕರ್ಜೂರ, ಮುತ್ತುರತ್ನಗಳನ್ನು ಆಮದುಮಾಡಿಕೊಳ್ಳುತಿದ್ದರು. ಬಹಳ ಪ್ರಾಚೀನ ಕಾಲದಿಂದಲೇ ಮೌರ್ಯರು ಮತ್ತು ಶಾತವಾಹನರು ವ್ಯಾಪಾರ ವಾಣಿಜ್ಯ ಚಟುವಟಿಕೆಗಳಿಗೆ ಪ್ರೋತ್ಸಾಹ ಕೊಟಿದ್ದರು. ನಂತರದ ಅರಸರು ಕೃಷಿಕಾರ್ಯಗಳಿಗೆ ಹೆಚ್ಚಿನ ಒತ್ತು ಕೊಟ್ಟಿದ್ದರು. ಕ್ರಿ.ಶ. 10–11ನೇ ಶತಮಾನದಲ್ಲಿ ಜೈನರ ಪ್ರವೇಶ, ತುಳುನಾಡಿನಲ್ಲಿ ಆರ್ಥಿಕ ಚಟುವಟಿಕೆಗಳ ಬೆಳವಣಿಗೆಗೆ ಹೆಚ್ಚಿನ ಮಟ್ಟದಲ್ಲಿ ನೆರವಾಯಿತು. ಇದೇ ಸಮಯದಲ್ಲಿ ಗೋವಾ ಮತ್ತು ಮಹಾರಾಷ್ಟ್ರ ಪ್ರದೇಶದಿಂದ ಕೊಂಕಣಿಗರೂ ವ್ಯಾಪಾರೋದ್ದೇಶಕ್ಕಾಗಿ ತುಳುನಾಡಿಗೆ ಬಂದರು. ಕ್ರಿ.ಶ. 10ನೇ ಶತಮಾನದ ನಂತರ ವ್ಯಾಪಾರ ಚಟುವಟಿಕೆಗಳು ಹೆಚ್ಚಾಗಿ ಸಂತೆ ಸೇರುತಿದ್ದ ಜಾಗಗಳಲ್ಲಿ, ಸಣ್ಣಪುಟ್ಟ ನಗರ ಪಟ್ಟಣಗಳು ತುಳುನಾಡಿನಾದ್ಯಂತ ತಲೆಯೆತ್ತಿದ್ದವು.

11–12ನೇ ಶತಮಾನಕ್ಕೆ ಸೇರಿದ ಗೆನಿಜಾ ದಾಖಲೆಗಳು ತಿಳಿಸುವಂತೆ, ಭಾರತದಿಂದ ರಫ್ತಾಗುತ್ತಿದ್ದ ಸಾಗರೋತ್ತರ ವ್ಯಾಪಾರದಲ್ಲಿ ಪ್ರಮುಖವಾದ ಸರಕುಗಳೆಂದರೆ, ಸಂಭಾರ ಪದಾರ್ಥಗಳು, ಸುವಾಸನಾ ದ್ರವ್ಯಗಳು ಮತ್ತು ವೈದ್ಯಕೀಯ ಗಿಡಮೂಲಿಕೆಗಳು, ಭಾರತದ ರೇಷ್ಮೆ ಮತ್ತು ಹತ್ತಿಯ ಬಟ್ಟೆಗಳು, ಪಾದರಕ್ಷೆಗಳು, ಮುತ್ತು, ಮಣಿಗಳು, ಕಬ್ಬಿಣ ಮತ್ತು ಉಕ್ಕು, ಹಿತ್ತಾಳೆ ಮತ್ತು ಕಂಚಿನ ಪಾತ್ರೆಗಳು, ಚರ್ಮವಸ್ತುಗಳು, ಉಷ್ಣವಲಯದ ಹಣ್ಣು ಹಂಪಲುಗಳೂ, ಮೋಮ ಇತ್ಯಾದಿಗಳು ಪ್ರಮುಖವಾದವು.[118]

ತುಳುನಾಡಿನ ಜನ ಅನಾದಿಕಾಲದಿಂದಲೂ ವ್ಯಾಪಾರ ಚತುರರು. ತಮ್ಮಲ್ಲಿ ಲಭ್ಯವಿರುವ ಪ್ರಾಕೃತಿಕ ಮೂಲ ಸೌಕರ್ಯಗಳನ್ನು ಆರ್ಥಿಕ ಲಾಭಕ್ಕೆ ಉಪಯೋಗಿಸಿಕೊಳ್ಳುವುದರಲ್ಲಿ ನಿಸ್ಸೀಮರು. ಅರಬ್ಬೀ ಸಮುದ್ರದ ತೀರದುದ್ದಕ್ಕೂ ಇರುವ ರೇವುಗಳು, ಜಲಯಾನ ಮಾರ್ಗಗಳು, ಸುತ್ತಮುತ್ತದ ಪ್ರದೇಶಗಳಲ್ಲಿರುವ ಪ್ರಾಕೃತಿಕ ಸಂಪತ್ತು ಮತ್ತು ಆ ಪ್ರದೇಶಗಳಲ್ಲಿರುವ ಸುಲಭ ಸಂಪರ್ಕ ಮಾರ್ಗಗಳನ್ನು ಉಪಯೋಗಿಸಿಕೊಂಡು ಇಲ್ಲಿನ ಜನ ಅಂತರ್ದೇಶೀಯ ಹಾಗೂ ಅಂತಾರಾಷ್ಟ್ರೀಯ ವ್ಯಾಪಾರ ವ್ಯವಹಾರಗಳನ್ನು ಅಭಿವೃದ್ಧಿ ಪಡಿಸಿಕೊಂಡರು. ರಾಜ್ಯ ಬೊಕ್ಕಸಕ್ಕೂ ಹೆಚ್ಚಿನ ಆದಾಯ ಗಳಿಕೆಯಾಗುತಿತ್ತು. ವ್ಯಾಪಾರೋದ್ದೇಶಕ್ಕಾಗಿ ಹೊರಗಿನಿಂದ ಬಂದ ಶ್ರೇಷ್ಠಿಗಳು, ಹಂಜುಮಾನರು, ನಖರದವರು – ಬಂದರು ಪ್ರದೇಶಗಳಲ್ಲಿ ಠಿಕಾಣಿ ಹೂಡುತ್ತಿದ್ದರು. ಶ್ರೀಮಂತರಾಗಿದ್ದ ಇವರಿಗೆ ಬೇಕಾದ ಜೀವನ ಸೌಕರ್ಯಗಳಿದ್ದವು. ಹಣ ಮಾಡಲು ಒಳ್ಳೆಯ ಅವಕಾಶವಿತ್ತು. ಸಾಗಾಣಿಕೆಯ ವ್ಯವಸ್ಥೆಗೆ ಗಾಡಿಗಳು/ಕೂಲಿಗಳು, ಸರಕಾರದ ಸುಂಕ ವಸೂಲಿ ಕಟ್ಟೆಗಳು, ಉಳಕೊಳ್ಳಲು ಛತ್ರಗಳು, ನೀರುಣಿಸುವ ಅಡ್ಡೆಗಳು ಎಲ್ಲೆಲ್ಲೂ ಇರುತಿದ್ದವು. ಶಿಥಿಲಾವಸ್ಥೆಯಲ್ಲಿರುವ ಪ್ರಾಚೀನ ಕಾಲದ ಸುಂಕದ ಕಟ್ಟೆಗಳು ಮತ್ತು ಪಂಚಾಯತಿ ಕಟ್ಟೆಗಳು ಈಗಲೂ ಅಲ್ಲಲ್ಲಿ ಕಾಣಸಿಗುತ್ತವೆ. ಹಂಗಾರಕಟ್ಟೆ, ಕಲ್ಯಾಣಪುರ – ಬಾರ್ಕೂರನ್ನು ಸಮುದ್ರ ಮಾರ್ಗವಾಗಿ ತಲುಪುವ ಮೊದಲು ಸಿಕ್ಕುವ ವಾಣಿಜ್ಯ ಕೇಂದ್ರಗಳಾಗಿದ್ದವು.[119] ಕುಂದಾಪುರ, ಗಂಗೊಳ್ಳಿ, ಬಸರೂರಿನ ಜೊತೆ ಅಭಿವೃದ್ಧಿ ಹೊಂದಿದ ನೆರೆಕೆರೆಯ ಬಂದರು ಪಟ್ಟಣಗಳಾಗಿವೆ.

ಇದೇ ಬಗೆಯ ರಾಜಕೀಯ ಇಚ್ಛಾಶಕ್ತಿಯು ವಿದೇಶೀಯ ವ್ಯಾಪಾರದ ಮೇಲೆ ಸಹ ಪ್ರಭಾವ ಬೀರಿರುವುದನ್ನು ತಳ್ಳಿಹಾಕುವಂತಿಲ್ಲ. ಎರಡನೆ ಪುಲಿಕೇಶಿಯು ಕಡಲ ಮಾರ್ಗದ ಮೇಲೆ ಹೊಂದಿದ್ದ ಹಿಡಿತದಿಂದಾಗಿ ಸಮುದ್ರ ಮಾರ್ಗವಾಗಿಯೇ ಪರ್ಶಿಯಾದ ಅರಸ ಎರಡನೆಯ ಖುಸ್ರುವಿನ ಆಸ್ಥಾನಕ್ಕೆ ತನ್ನ ರಾಯಭಾರಿಯನ್ನು ಕಳುಹಿಸಿದ್ದನೆಂದು ಅಭಿಪ್ರಾಯ ಪಡುತ್ತಾರೆ.[120] ಈ ಹಿನ್ನಲೆಯಲ್ಲಿ ಗಮನಿಸಿದಾಗ ಒಂದು ಪ್ರದೇಶದ ವ್ಯಾಪಾರ–ವಹಿವಾಟು ಅಲ್ಲಿನ ರಾಜಕೀಯ ಸುಸ್ಥಿತಿಯನ್ನು ಅವಲಂಬಿಸಿದ್ದಿತೆಂದು ತಿಳಿದುಬರುತ್ತದೆ.

ಬಸರೂರಿನಿಂದ ವಿದೇಶಗಳಿಗೆ ವ್ಯಾಪಾರ ಸಂಪರ್ಕವಿದ್ದುದನ್ನು ಕಾಣಬಹುದು. ಇಲ್ಲಿನ ವ್ಯಾಪಾರಸ್ಥರು ಕೃಷಿಯೊಂದಿಗೆ ವ್ಯಾಪಾರ ವೃತ್ತಿಯನ್ನು ಅವಲಂಬಿಸಿದ್ದರು. ಉದಾಹರಣೆಗೆ ಹಲರು, ನಖರ, ನಾಡವರು, ಗೌಡಸರಸ್ವತರು. ಇವರು ಸ್ವಯಂ ವ್ಯವಸಾಯಗಾರರು

ಆಗಿದ್ದರು. ಆ ಸಂದರ್ಭದಲ್ಲಿ ವಿಶೇಷವಾಗಿ, ಸಂಭಾರಪದಾರ್ಥಗಳು, ಅಕ್ಕಿ, ಅದರಲ್ಲೂ ವಿಶೇಷವಾಗಿ ಮಸ್ಕತಿ ಅಕ್ಕಿ ಪರ್ಷಿಯನ್ ದೇಶಗಳಿಗೆ ರಫ್ತುಮಾಡುತಿದ್ದರು. ನೇರವಾದ ವ್ಯಾಪಾರ ಸಂಪರ್ಕ ಬಸರೂರು ಮತ್ತು ಪರ್ಷಿಯನ್ ದೇಶಗಳೊಡನೆ ಇತ್ತು. ಹಾಗೂ ಬಾಂಬೆಯೊಂದಿಗೂ ವ್ಯಾಪಾರ ನಡೆಯುತ್ತಿತ್ತು. ಇವರೆಲ್ಲಾ ಸಗಟುವ್ಯಾಪಾರಿಗಳಾಗಿದ್ದರು. ಇವರು ವಜ್ರ, ಚಿನ್ನದ ವ್ಯಾಪಾರವನ್ನು ಕೂಡಾ ನಡೆಸುತ್ತಿದ್ದರು. ಇವೆಲ್ಲಾ ಟಿಪ್ಪುಸುಲ್ತಾನ ಕಾಲದವರೆಗೂ ಮುಂದುವರೆದಿತ್ತು. ಆನಂತರ ಹೊಳೆಗಳಲ್ಲಿ ಹೂಳು ತುಂಬಿದ್ದರಿಂದ, ಆ ನಾಡದೋಣಿಗಳು ಬರುವುದು ನಿಂತಿದ್ದರಿಂದ ಗಂಗೊಳ್ಳಿ ಹೊರಬಂದರಿನಲ್ಲಿ ವ್ಯಾಪಾರ ನಡೆಸುತ್ತಿದ್ದರು. ನಾಡಹಡಗುಗಳು ಗಂಗೊಳ್ಳಿಯಲ್ಲಿ ರಫ್ತು ವ್ಯಾಪಾರ ನಡೆಸುತ್ತಿದ್ದರು. ಜೊತೆಗೆ ಬಸರೂರಿನ ಬಂದರಿನಲ್ಲಿಯೂ ಈ ಸಮಯದಲ್ಲಿ ವ್ಯಾಪಾರ ನಿಲ್ಲಲು ಪ್ರಮುಖ ಕಾರಣ. ಅಳಿವೆಯಲ್ಲಿ ಹೂಳು ತುಂಬಿದ್ದರಿಂದ ಆಳ ಕಡಿಮೆ ಆದ್ದರಿಂದ ಹಡಗುಗಳು ಮುಂದೆ ಬರಲು ಸಾಧ್ಯವಾಗಲಿಲ್ಲ..[121] ವಿದೇಶಿ ಪ್ರಯಾಣಿಕರಾದ ಯಾಕುತ್ (ಕ್ರಿ ಶ 1179–1229), ಅಬ್ದುಲ್ ಫಿದಾ (ಕ್ರಿ.ಶ.1273–1331), ಮತ್ತು ಇಬನ್ ಬಟೂಟ್ (ಕ್ರಿ.ಶ 1335)ರ ಕೃತಿಗಳು, ಪ್ರಮುಖ ವ್ಯಾಪಾರ ಕೇಂದ್ರಗಳು ಮತ್ತು ಈ ಪ್ರದೇಶದಲ್ಲಿನ ವ್ಯಾಪಾರ ವರ್ಗಗಳ ಪರಿಸ್ಥಿತಿಗಳನ್ನು ಉಲ್ಲೇಖಿಸುತ್ತವೆ.[122] ವ್ಯಾಪಾರವು ಮುಖ್ಯವಾಗಿ ಕೃಷಿ ಉತ್ಪನ್ನಗಳಲ್ಲಿ ಅಕ್ಕಿ, ತೆಂಗಿನಕಾಯಿ, ಕಬ್ಬು ಮತ್ತು ವಿವಿಧ ರೀತಿಯ ದ್ವಿದಳ ಧಾನ್ಯಗಳಲ್ಲಿ ನಡೆಸಲ್ಪಟ್ಟಿತು. ಕಾಳುಮೆಣಸು ಪ್ರಸಿದ್ಧ ವಾಣಿಜ್ಯ ಬೆಳೆಯಾಗಿತ್ತು. ಇದು ಜಿಲ್ಲೆಯ ಗಣನೀಯ ವಿದೇಶೀ ವಿನಿಮಯವನ್ನು ತಂದಿತು. ಗೋಧಿ, ಕಡಲೆಬೇಳೆ, ಉದ್ದಿನಬೇಳೆ, ಹೆಸರುಬೇಳೆ, ಎಳ್ಳು, ಮತ್ತು ಬೆಲ್ಲಗಳಂತಹ ಸರಕುಗಳು ಕರ್ನಾಟಕಗಳ ಘಟ್ಟಗಳ ಮೇಲಿರುವ ಪ್ರದೇಶಗಳಲ್ಲಿ ದೊರೆಯುತ್ತವೆ.[123] ತುಳುನಾಡು ಪ್ರಪಂಚದ ವಿವಿಧ ದೇಶಗಳೊಂದಿಗೆ ವಿಶಾಲವಾದ ವಾಣಿಜ್ಯ ಸಂಬಂಧಗಳನ್ನು ಹೊಂದಿತ್ತು. ತುಳುನಾಡು ಪ್ರಧಾನವಾಗಿ ಒಂದು ಕೃಷಿ ಪ್ರದೇಶವಾಗಿತ್ತು ಮತ್ತು ಅದರ ಹೆಚ್ಚುವರಿ ಉತ್ಪನ್ನಗಳು ಮತ್ತು ಮಸಾಲೆಗಳು, ವಿದೇಶಿ ಮಾರುಕಟ್ಟೆಗಳಲ್ಲಿ ಹೆಚ್ಚಿನ ಬೇಡಿಕೆಯಿತ್ತು. ಹಲವಾರು ವಾಣಿಜ್ಯ ಕೇಂದ್ರಗಳು, ರಫ್ತು ಮತ್ತು ಆಮದುಗಳ ಎರಡೂ ಸೌಲಭ್ಯಗಳನ್ನು ಹೊಂದಿದ್ದು ತುಳುನಾಡಿನಲ್ಲಿ ಅಭಿವೃದ್ಧಿಗೆ ಬಂದವು ಮತ್ತು ಇದರ ಪರಿಣಾಮವಾಗಿ ಈ ಕೇಂದ್ರಗಳ ಮೂಲಕ ವಿದೇಶಿ ವ್ಯಾಪಾರವನ್ನು ನಡೆಸಲಾಯಿತು. ಆಂತರಿಕ ವಹಿವಾಟು ಗಮನಾರ್ಹವಾದ ಪ್ರಗತಿಯನ್ನು ದಾಖಲಿಸಿದೆ. ವ್ಯಾಪಾರಿಗಳಾದ ಬಲಂಜುಸ್, ಗವರಸ್, ನಾನಾದೇಸಿ, ಬಣಜಿಗಳು, ಕೊಮಟಿಗಳು, ವ್ಯಾಪಾರಿಗಳು ತಮ್ಮದೇ ಆದ ಸ್ಥಳೀಯ

ಸಂಘಟನೆಗಳು ಅಥವಾ ವ್ಯಾಪಾರ ಸಂಘಗಳನ್ನು ರಚಿಸಿದರು ಮತ್ತು ಯುರೋಪಿಯನ್ ಮಾರುಕಟ್ಟೆಗಳಲ್ಲಿ ಅಪೂರ್ವ ಬೇಡಿಕೆಯಿರುವ ಅಗತ್ಯ ಸರಕುಗಳ ರಕ್ಷಣೆಗಾಗಿ ಅವರು ವಿದೇಶಿ ವ್ಯಾಪಾರಿಗಳೊಂದಿಗೆ ಸಹ ಕಾರ್ಯ ನಿರ್ವಹಿಸಿದರು. ಹಾಗಾಗಿ ಕೃಷಿ, ವ್ಯಾಪಾರ ಮತ್ತು ವಾಣಿಜ್ಯವು ಜನರ ಆರ್ಥಿಕ ಜೀವನದಲ್ಲಿ ಪ್ರಮುಖ ಪಾತ್ರ ವಹಿಸಿವೆ. ವಿದೇಶಗಳೊಂದಿಗೆ ನಡೆಸಲ್ಪಟ್ಟ ವ್ಯಾಪಾರದ ಸ್ವರೂಪ ಮತ್ತು ಪರಿಮಾಣವನ್ನು ಅರ್ಥ ಮಾಡಿಕೊಳ್ಳಲು, ಪಶ್ಚಿಮ ಕರಾವಳಿಯ ವ್ಯಾಪಾರದ ಪ್ರಾಚೀನತೆಯನ್ನು ತಿಳಿಯಲು ಅಪೇಕ್ಷಣೀಯವಾಗಿದೆ.[124] ಪಶ್ಚಿಮ ಕರಾವಳಿಯ ಸರಕುಗಳು ದಾಲ್ಚಿನ್ನಿ, ಕ್ಯಾಸಿಯ ದಂತ, ಹಾಗೂ ಪ್ರಾಣಿಪಕ್ಷಿಗಳಾದ ಮಂಗಗಳು ಮತ್ತು ನವಿಲನ್ನು ರಾಜ ಸೊಲೊಮನ್ ಆಮದು ಮಾಡಿಕೊಂಡಿದ್ದನು,[125] ರೋಮನ್ ವ್ಯಾಪಾರದ ಕಾಲದಿಂದಲೂ ಭಾರತದ ವಿದೇಶೀ ವ್ಯಾಪಾರವು ನಿರ್ಯಾತ ಪ್ರಧಾನವಾಗಿತ್ತು. ಅಂದರೆ ವಿದೇಶಿಗರು ಭಾರತೀಯ ವಸ್ತುಗಳನ್ನು ತಮ್ಮ ಮಾರುಕಟ್ಟೆಗಳಲ್ಲಿ ಮಾರಿ ಲಾಭವನ್ನು ಮಾಡಿಕೊಳ್ಳುವ ಪ್ರೇರಣೆಯಿಂದ ಇಲ್ಲಿಗೆ ಖುದ್ದಾಗಿ ಬರುತ್ತಿದ್ದರು. ಭಾರತದಿಂದ ಒಯ್ಯತಕ್ಕ ಸರಕುಗಳ ದೊಡ್ಡ ಪಟ್ಟಿಯನ್ನೇ ತಂದು ಅವನ್ನು ಇಲ್ಲಿ ಖರೀದಿಸುತ್ತಿದ್ದರು. ಭಾರತದಲ್ಲಿ ತಮ್ಮ ದೇಶದಿಂದ ತಂದು ವಿನಿಮಯ ಮಾಡುವ ಸರಕುಗಳ ಬೇಡಿಕೆಯ ಪ್ರಮಾಣ ಹಾಗೂ ಮೌಲ್ಯವು ಅತ್ಯಲ್ಪವಾದುದರಿಂದ ವ್ಯತ್ಯಾಸವನ್ನು ಬಂಗಾರ, ಬೆಳ್ಳಿಯ ನಾಣ್ಯಗಳನ್ನು ಕೊಟ್ಟು ಸರಿದೂಗಿಸುತ್ತಿದ್ದರು. 16–17ನೆಯ ಶತಮಾನದಲ್ಲಿ ಈ ಶೈಲಿಯ ವ್ಯಾಪಾರವು ಅತಿರೇಕದ ಹಂತವನ್ನು ತಲುಪಿದ್ದನ್ನು ನೋಡುತ್ತೇವೆ. ಅಂದರೆ ಯುರೋಪಿನ ಮಾರುಕಟ್ಟೆಗಳಲ್ಲಿ ಹಲವಾರು ರಾಷ್ಟ್ರಗಳು ಲಾಭದ ಪೈಪೋಟಿಗೆ ಬಿದ್ದು ಕಾಳುಮೆಣಸಿನಂಥ ಸರಕುಗಳಿಂದ ಗಿರಾಕಿಗಳನ್ನು ಗರಿಷ್ಠ ಪ್ರಮಾಣದಲ್ಲಿ ವಿಸ್ತರಿಸಿದರು. ಹಾಗಾಗಿ ಈ ವ್ಯಾಪಾರದ ಲಾಭವು ಅಂತಿಮವಾಗಿ ಯುರೋಪಿನ ಮಾರುಕಟ್ಟೆಯ ಚಿಲ್ಲರೆ ವ್ಯಾಪಾರದಲ್ಲಿಯೇ ಹುಟ್ಟಬೇಕಾಗಿತ್ತು. ಯುರೋಪಿನ ಹಾಗೂ ಅಮೇರಿಕದ ಮಾರುಕಟ್ಟೆಯಲ್ಲಿ ಕಾಳು ಮೆಣಸಿಗೆ, ಬಟ್ಟೆಗೆ ಹಾಗೂ ಇತರ ಭಾರತೀಯ ಸರಕುಗಳಿಗೆ ಎಷ್ಟು ಬೇಡಿಕೆಯಿತ್ತೆಂದರೆ ಪೈಪೋಟಿಗೆ ಬಿದ್ದ ಯುರೋಪಿನ ವ್ಯಾಪಾರಿಗಳು ಭಾರತೀಯ ಕರಾವಳಿಯಲ್ಲಿ ಆದಷ್ಟೂ ಹೆಚ್ಚು ಬೆಲೆಗೆ ಅದನ್ನು ಖರೀದಿಸ ತೊಡಗಿದರು. ಯುರೋಪಿನಿಂದ ಹರಿದು ಬಂದ ಬೆಳ್ಳಿ ಬಂಗಾರಗಳು ಭಾರತದ ಇತರ ಪ್ರದೇಶಗಳಿಗೆ ಕಾಳುಮೆಣಸಿನ ಖರೀದಿಯ ಮೂಲಕ ಕನ್ನಡ ಕರಾವಳಿಗೂ ಹರಿದವು. ಹಾಗಾಗಿ ಕಾಳುಮೆಣಸಿನ ವ್ಯಾಪಾರ ಅಧಿಕ ಲಾಭ ತಂದುಕೊಟ್ಟಿತು. ಈ ಸಂಪತ್ತಿನಲ್ಲಿ ಬಹುಭಾಗವು ಮಲೆನಾಡು ಹಾಗೂ ಕರಾವಳಿ ರಾಜರ ವ್ಯಾಪಾರಿಗಳ, ವೃತ್ತಿಪರರ ಹಾಗೂ

ಕೃಷಿಕರ, ಲಾಭಾಂಶ ರೂಪದಲ್ಲಿ ಹರಿದು ಬಂದಿತು. ಹಾಗಾಗಿ ಈ ಪ್ರದೇಶದ ರಾಜ್ಯಗಳ ಕೃಷಿ ಹಾಗೂ ವಾಣಿಜ್ಯ ವಿಸ್ತರಣೆಯ ಹಿಂದಿನ ಪ್ರೇರಣೆಗಳನ್ನು ಹಾಗೂ ದುರ್ಗಮ ಮಲೆನಾಡಿನಲ್ಲಿ ಒಮ್ಮೆ ಪ್ರವರ್ಧಮಾನಕ್ಕೆ ಬಂದು ಅಳಿದುಹೋಗಿರುವ ವಸತಿಗಳ ಅವಶೇಷಗಳನ್ನು ಸಾಗರೋತ್ತರ ವ್ಯಾಪಾರದ ಈ ಆಯಾಮದ ಹಿನ್ನೆಲೆಯಿಂದ ನೋಡಿದಾಗ ಅವು ಅರ್ಥಪೂರ್ಣವಾಗುತ್ತವೆ.[126] ವಿದೇಶಗಳೊಂದಿಗೆ ಕರ್ನಾಟಕದ ಬಾಹ್ಯ ವ್ಯಾಪಾರದ ಪರಿಮಾಣವು ಬಹುಶಃ ಪರಿಷ್ಕೃತ ಹಂತದಲ್ಲಿ ಹೆಚ್ಚಾಗಿದೆ. ಅಬ್ದುಲ್ ರಜಾಕ್ ಪ್ರಕಾರ, ವಿಜಯನಗರ ಸಾಮ್ರಾಜ್ಯವು 300 ಸಮುದ್ರ ಬಂದರುಗಳನ್ನು ಹೊಂದಿದ್ದು ಭಾರತೀಯ ಸಾಗರ, ಮಲಯ, ಬರ್ಮಾ, ಚೀನಾ, ಅರೇಬಿಯಾ, ಪರ್ಷಿಯಾ, ದಕ್ಷಿಣ ಆಫ್ರಿಕಾ, ಅಬಿಸ್ಸಿನಿಯಾ, ಮತ್ತು ಪೋರ್ಚುಗಲ್ ದ್ವೀಪಗಳೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿತ್ತು.[127] ಒಳನಾಡಿನ ಭಾಗಗಳಿಂದ ಬಂದ ಕೃಷಿ ಉತ್ಪನ್ನಗಳನ್ನು ಅಂಕೋಲಾ, ಮಿರ್ಜಾನ್, ಹೊನ್ನಾವರ, ಭಟ್ಕಳ, ಬೈಂದೂರು, ಬಾರ್ಕೂರು, ಬಸ್ರೂರು, ಮಂಗಳೂರು ಮತ್ತು ಕುಂಬಳೆಗಳಂತಹ ಕರಾವಳಿ ಪಟ್ಟಣಗಳಿಗೆ ಕವಡಿಗಳು (ಭುಜದ ಮೇಲೆ ಹೊತ್ತೊಯ್ಯುವ ದೊಡ್ಡ ಬೆತ್ತ), ಹೆಡ್‌ಲೋಡುಗಳು (ತಲೆ ಲೋಹ), ಪ್ಯಾಕ್ ಕುದುರೆಗಳು, ಪ್ಯಾಕ್ ಬುಲ್‌ಗಳು ಮತ್ತು ಕತ್ತೆ ಮುಖಾಂತರ ಸಾಗಿಸಲಾಗುತ್ತಿತ್ತು.[128] ಅಕ್ಕಿ, ಸಕ್ಕರೆ, ಮಸಾಲೆಗಳು ಮತ್ತು ಹತ್ತಿ ಉಡುಪುಗಳನ್ನು ಪೋರ್ಚುಗೀಸ್ ವರ್ತಕರು ಈ ಕರ್ನಾಟಕ ಬಂದರುಗಳಲ್ಲಿ ಖರೀದಿಸಿ ವಿದೇಶಗಳಿಗೆ ಸಾಗಿಸುತ್ತಿದ್ದರು.[129] ಬಸ್ರೂರು, ಬಾರ್ಕೂರು ಮತ್ತು ಮಂಗಳೂರು ಬಂದರುಗಳ ಮುಖಾಂತರ ಮಾಲ್ಡೀವ್ ದ್ವೀಪಗಳಿಗೆ ಏಡೆನ್ ಮತ್ತು ಒರ್ಮಜ್‌ಗೆ ಅಕ್ಕಿಯನ್ನು ರಫ್ತು ಮಾಡುತ್ತಿದ್ದವು.[130] ವಿಜಯನಗರ ಅವಧಿಯಲ್ಲಿ ಮಸಾಲೆಗಳು ಪ್ರಮುಖವಾದ ವಸ್ತುವಾಗಿ ರೂಪುಗೊಂಡ ವಿದೇಶಿ ವ್ಯಾಪಾರದ ಬಹುತೇಕ ಭಾಗವು ಅರಬ್ಬರು ಮತ್ತು ಪೋರ್ಚುಗೀಸರ ಕೈಯಿಂದ ಜಾರಿಗೆ ಬಂದಿತು. ಭಾರತೀಯ ಮಾರುಕಟ್ಟೆಯಿಂದ ಅರಬ್ಬರನ್ನು ಓಡಿಸಲು ಪೋರ್ಚುಗೀಸರು ಯಶಸ್ವಿಯಾದರು. ಪೋರ್ಚುಗೀಸರು ಮಂಗಳೂರು, ಬಾರ್ಸೆಲೂರು, (ಬಾರಕೂರು) ಮತ್ತು ಹೊನ್ನಾವರದಲ್ಲಿ ಭಂಡಸಾಲೆಗಳನ್ನು ಹೊಂದಿದ್ದರು.

ಪೇಯಿಸ್ ತನ್ನ ವೃತ್ತಾಂತದಲ್ಲಿ ಹೇಳುವಂತೆ, ಕರಾವಳಿಯಲ್ಲಿ ಹಲವಾರು ಶಾಂತಿಯುತವಾಗಿರುವ ಬಂದರುಗಳಿವೆ ಮತ್ತು ಅವುಗಳಲ್ಲಿ ಕೆಲವು ಕಡೆ ಕಾರ್ಖಾನೆಗಳನ್ನು

ಹೊಂದಿವೆ. ಅವುಗಳೆಂದರೆ ಅಂಕೋಲ, ಮಿರ್ಜಾನ್ ಹೊನ್ನಾವರ, ಭಟ್ಕಳ, (Betecalla) ಮಂಗಳೂರು, ಬಸ್ರೂರು (Bracetora) ಮತ್ತು ಬಾರ್ಕೂರು.[131] (Bacanora) 1503ರಲ್ಲಿ ವಾಸ್ಕೋಡಗಾಮ ಗಮನಿಸಿದಂತೆ ಅನೇಕ ಮಾರೀಶ್ (Moorish) ಹಡಗುಗಳು ಭಟ್ಕಳ ಬಂದರಿನಲ್ಲಿ ಲಂಗರು ಹಾಕಿದವು. ಇದು ಅಕ್ಕಿಯನ್ನು ತುಂಬಿಸಲು ಉತ್ತಮ ಬಂದರಾಗಿತ್ತು ಹಾಗು ಭಟ್ಕಳದ ಮುಖ್ಯಸ್ಥನ ನಿಯೋಗಿಗೆ ಅವರ ನಾಲ್ಕು ಷರತ್ತುಗಳು ಹೀಗಿವೆ:

1) ಮುಖ್ಯಸ್ಥನು ಪೋರ್ಚುಗೀಸ್‌ಗೆ ಗೌರವ ಸಲ್ಲಿಸಬೇಕು.

2) ಪ್ರಧಾನರು ಯಾವುದೇ ಇತರ ಶಕ್ತಿಯೊಂದಿಗೆ ಮೆಣಸು ವ್ಯಾಪಾರ ಮಾಡಬಾರದು.

3) ಮುಖ್ಯಸ್ಥನು ಟರ್ಕರನ್ನು ಕರೆತರಬಾರದು.

4) ಅವರು ಕ್ಯಾಲಿಕಟ್‌ನೊಂದಿಗೆ ವ್ಯವಹರಿಸುವಂತಿಲ್ಲ.[132]

ವಾಸ್ಕೋಡಗಾಮನ ಎರಡನೆಯ ಷರತ್ತು ಆಸಕ್ತಿದಾಯಕವಾಗಿದೆ. ಏಕೆಂದರೆ ಇದು ಆರಂಭದಲ್ಲಿ ಪೋರ್ಚುಗೀಸರು ಹೇಗೆ ಕಾಳುಮೆಣಸು ಪಡೆದುಕೊಳ್ಳಲು ಆಸಕ್ತಿ ಹೊಂದಿದ್ದಾರೆಂದು ತೋರಿಸುತ್ತದೆ. ಅದು ಆ ಕಾಲದಲ್ಲಿ ಒಂದು ಅಮೂಲ್ಯವಾದದ್ದು ಮತ್ತು ದೊಡ್ಡ ಲಾಭಗಳನ್ನು ತಂದಿತು. ಹೀಗಾಗಿ ಭಾರತದ ಪಶ್ಚಿಮ ಕರಾವಳಿಯಲ್ಲಿ ಕಾಳುಮೆಣಸಿನ ವ್ಯಾಪಾರದ ಏಕಸ್ವಾಮ್ಯವನ್ನು ಭದ್ರಪಡಿಸಿಕೊಳ್ಳಲು ಪೋರ್ಚುಗೀಸ್ ಈ ನೀತಿ ಯಾವಾಗಲೂ ಇತ್ತು. ಪೋರ್ಚುಗೀಸ್ ಪ್ರಾಬಲ್ಯದಿಂದ ಇದು ಸಾಧ್ಯವಾಯಿತು. ಆದರೆ ಡಚ್ ಮತ್ತು ಇಂಗ್ಲೀಷ್ ಮುಂತಾದ ಇತರ ಪಾಶ್ಚಾತ್ಯ ಶಕ್ತಿಗಳು ಕಾಳುಮೆಣಸನ್ನು ಸಂಗ್ರಹಿಸಲು ಪ್ರಾರಂಭಿಸಿದಾಗ ಕರ್ನಾಟಕದ ಬಂದರುಗಳಲ್ಲಿ ಅವುಗಳ ಪೈಕಿ ಪೈಪೋಟಿ ಅನಿವಾರ್ಯ ವಾಗಿತ್ತು. ಅಕ್ಕಿ ಮತ್ತು ಸಕ್ಕರೆಯ ರಫ್ತು ಭಟ್ಕಳದಲ್ಲಿ ವರ್ತೇಮಾ ಗಮನಕ್ಕೆ ಬಂದಿದೆ. 16ನೇ ಶತಮಾನದ ಆರಂಭದಲ್ಲಿ ಪೋರ್ಚುಗೀಸರು ಭಟ್ಕಳದೊಂದಿಗೆ ಹತ್ತಿರದ ಸಂಬಂಧ ಹೊಂದಿದ್ದರು. ಅದು ಅಕ್ಕಿ ಮತ್ತು ಲವಂಗಗಳ ಮುಖ್ಯ ನಿರ್ವಾಹಕರಾಗಿದ್ದರು. ಭಟ್ಕಳದಿಂದ ಪೋರ್ಚುಗೀಸ್ ಹಡಗುಗಳು ಈ ಸರಕುಗಳನ್ನು ಸಾಗಿಸುತ್ತಿದ್ದವು ಮತ್ತು ಅವರು ತಮ್ಮ ಕಾರ್ಖಾನೆಗಳನ್ನು ಹೊಂದಿದ್ದರು. ಬಾರ್ಬೊಸ ಪ್ರಕಾರ, ಭಟ್ಕಳ ಹಲವಾರು ವಿಧದ ಸರಕುಗಳ ವ್ಯವಹಾರದಲ್ಲಿ ತೊಡಗಿಸಿಕೊಂಡಿದೆ. ಪ್ರತಿ ವರ್ಷ ಓರ್ಮುಸಿನಿಂದ ಬಂದ ಹಡಗು, ಭಟ್ಕಳಕ್ಕೆ ಬಂದು ಇಲ್ಲಿ ಮೆಣಸು, ಮಸಾಲೆಗಳು, ಪುಡಿ ಸಕ್ಕರೆ ಮತ್ತು ಬಿಳಿ ಅಕ್ಕಿಯನ್ನು ಬಂದರಿನ ಮುಖಾಂತರ ಕೊಂಡೊಯ್ಯುತಿತ್ತು. ಮೈರೋಬ್ಯಾಲನ್ಸ್ (Myrobalans-ಟಿಂಬರ್)ಗಳನ್ನು

ವಿಶೇಷವಾಗಿ ಭಟ್ಕಳದ ವ್ಯಾಪಾರಿಗಳಿಂದ ಸಂರಕ್ಷಿಸಲಾಯಿತು. ಏಕೆಂದರೆ ಇದು ಅರೇಬಿಯಾ ಮತ್ತು ಪರ್ಷಿಯಾದಲ್ಲಿ ಮಾರುಕಟ್ಟೆ ಉತ್ತಮವಾದ ಬೇಡಿಕೆ ಹೊಂದಿತ್ತು. ಪೋರ್ಚುಗೀಸ್ ಆಗಮನದ ಮೊದಲು ಕರ್ನಾಟಕದ ವ್ಯಾಪಾರಿಗಳು ಮತ್ತು ವಿದೇಶಿ ಗ್ರಾಹಕರ ನಡುವೆ ಮೂರರು ಮಧ್ಯವರ್ತಿಗಳಾಗಿದ್ದರು.[133]

1530ರಲ್ಲಿ ಕೊಚ್ಚಿನ್ ನಾಯಕನಾಗಿರುವ Affonso Mexia ಅವರ ವರದಿಯಲ್ಲಿನ ಒಂದು ಸಾರವನ್ನು ಉಲ್ಲೇಖಿಸುವುದು ಅವಶ್ಯವಾಗಿದೆ. ಅವರು ಈ ವರದಿಯನ್ನು ಪೋರ್ಚುಗಲ್‌ನ ರಾಜನಿಗೆ ಬರೆದರು (ದಿನಾಂಕ 15 ಜನವರಿ 1530)– “ಭಟ್ಕಳ ಮತ್ತು ಗೋವಾ ನಡುವೆ ಕೆಲವು ಸ್ಥಳಗಳಿವೆ. ಮಿರ್ಜಾನ್ ಮತ್ತು ಅಂಕೋಲಾದಿಂದ ವಾರ್ಷಿಕವಾಗಿ 5000 ಕ್ರುಸಡೋಸ್ (Crusados) ಮೌಲ್ಯದ ಕಾಳುಮೆಣಸನ್ನು ಡಿಯು, ಒರ್ಮಜ್ ಮತ್ತು ಜೆಡ್ಡಾ ಪ್ರದೇಶಕ್ಕೆ ಮೂರಿಶ್ ಹಡಗುಗಳ ಮೂಲಕ ಸಾಗಿಸಲಾಯಿತು. ಈ ಸ್ಥಳಗಳು ಗೆರುಸೊಪ್ಪಾ ರಾಣಿಯ ಆಳ್ವಿಕೆಯಲ್ಲಿದೆ. ಈ ರಾಜ್ಯ ನರಸಿಂಗನ (ವಿಜಯನಗರ) ರಾಜನಿಗೆ ಒಳಪಟ್ಟಿರುತ್ತದೆ[134] ಹೀಗಾಗಿ ಆರಂಭದಲ್ಲಿ ಪೋರ್ಚುಗೀಸ್ ಕರ್ನಾಟಕ ಅಧಿಕಾರಿಗಳೊಂದಿಗೆ ಸಂಪರ್ಕವನ್ನು ಹೊಂದಿದ್ದವು. ಮತ್ತು ಕಾಳುಮೆಣಸಿನ ವ್ಯಾಪಾರದ ಏಕಸ್ವಾಮ್ಯವನ್ನು ಭದ್ರಪಡಿಸುವ ಪ್ರಾಥಮಿಕ ಉದ್ದೇಶವಾಗಿತ್ತು. ಅವರು ಕರ್ನಾಟಕದ ವ್ಯಾಪಾರಿಗಳಿಂದ ಕಡಿಮೆ ಬೆಲೆಗೆ ಮಸಾಲೆಗಳನ್ನು ಖರೀದಿಸಿದರು ಮತ್ತು ಪರ್ಷಿಯಾದ ಮಾರುಕಟ್ಟೆಯಲ್ಲಿ ಹೆಚ್ಚಿನ ಬೆಲೆಗೆ ಮಾರಾಟ ಮಾಡಿದರು.[135]

ಕರಾವಳಿ ಕರ್ನಾಟಕ ರೇವುಗಳಲ್ಲಿ ನಡೆಸಿದ ಸಾಗರೋತ್ತರ ವ್ಯಾಪಾರಗಳನ್ನು ಕೇರಳದ ಜಾನಪದ ಕೃತಿಗಳಾದ ಪಾಟ್ಟುಗಳು ಹಾಗೂ ಕೆಲವರು ಮಲೆಯಾಳಿ ವರ್ತಕರು ತಿಳಿಸುತ್ತಾರೆ. ವಿದೇಶಿ ಪ್ರವಾಸಿಗರ ವರದಿಗಳು, ದಾಖಲೆಗಳು ಆ ಕಾಲದ ಸಾಗರೋತ್ತರ ಚಟುವಟಿಕೆಗಳ ಕುರಿತಾಗಿ ಕೆಲವು ಅಮೂಲ್ಯ ಮಾಹಿತಿಗಳನ್ನು ನೀಡುತ್ತವೆ. ವಿದೇಶಿ ದಾಖಲೆಗಳಲ್ಲಿ ಪೋರ್ಚುಗೀಸ್ ದಾಖಲೆಗಳು ಅಗ್ರಗಣ್ಯ ಸ್ಥಾನವನ್ನು ಗಳಿಸಿವೆ. ಇವರ ದಾಖಲೆಗಳನ್ನು ಅಧ್ಯಯನಿಸುವಲ್ಲಿ ಬಿ. ಎಸ್. ಶಾಸ್ತ್ರಿಯವರು ಹೆಚ್ಚಿನ ಶ್ರಮ ವಹಿಸಿದ್ದಾರೆ. ಈ ಲೇಖನದಲ್ಲಿ ತಿಳಿಸುವ ಪೋರ್ಚುಗೀಸ್ ದಾಖಲೆಗಳ ಮಾಹಿತಿಯನ್ನು ಈ ವಿದ್ವಾಂಸರ ಸಹಕಾರದಿಂದ ಪಡೆದಿದೆ.

ಅಲೆಗ್ಸಾಂಡರ್ ಹ್ಯಾಮಿಲ್ಟನ್[136] ಪ್ರಕಾರ ಎಲ್ಲಾ ಕೆನರಾ ಆಡಳಿತಗಳಲ್ಲಿ ಮಂಗಳೂರಿನ ವ್ಯಾಪಾರ ಮಹೋನ್ನತವಾಗಿತ್ತು. ಅದಾಗ್ಯೂ ಇದು 16ನೇ ಶತಮಾನದ ಅಂತ್ಯದಲ್ಲಿ ತನ್ನ ಪ್ರಾಮುಖ್ಯ ಕಳೆದುಕೊಂಡಿತು. ಅಬ್ದುಲ್ ರಜಾಕ್‌ರವರ ಮಲ್ನಾಡ್ ಪ್ರದೇಶವನ್ನು ಎಂಪೋರಿಯಂ ಎಂದು ಸಂಬೋಧಿಸಿದ್ದಾನೆ. ಮಂಗಳೂರು ಮಲಬಾರ್ ಕರಾವಳಿಯ ಹೊರ ಠಾಣೆಯಾಗಿತ್ತು.[137] ಮಲಬಾರ್‌ಗೆ ಮಂಗಳೂರಿನಿಂದ ಮುಖ್ಯವಾಗಿ ರಫ್ತಾಗುತ್ತಿದ್ದದ್ದು ಕಪ್ಪು ಅಕ್ಕಿ. ಇದು ಬಿಳಿಅಕ್ಕಿ ಮತ್ತು ಮೆಣಸಿಗಿಂತ ಉತ್ತಮ ಮತ್ತು ಹೆಚ್ಚು ಆರೋಗ್ಯಕರವಾಗಿದೆ. ಕುಂಬಳೆಯಿಂದಲೂ ಕಪ್ಪುಅಕ್ಕಿಯನ್ನು ಮಾಲ್ಡೀವ್ ದ್ವೀಪಗಳು ಮತ್ತು ಮಲಬಾರ್‌ಗೆ ರಫ್ತು ಮಾಡಲಾಗುತ್ತಿತ್ತು. ಇದಕ್ಕೆ ಪ್ರತಿಯಾಗಿ ಮಾಲ್ಡೀವ್ ದ್ವೀಪಗಳಿಂದ ತೆಂಗಿನಕಾಯಿಯ ಸಿಪ್ಪೆಗಳಿಂದ ಮಾಡಿದ ತೆಂಗಿನ ನಾರು ದೊರೆಯಿತು. ಕಪ್ಪು ಅಕ್ಕಿ ಅಗ್ಗವಾಗಿತ್ತು. ಆದ್ದರಿಂದ ಮಲಬಾರಿಗಳು ಅವುಗಳನ್ನು ದೊಡ್ಡ ಪ್ರಮಾಣದಲ್ಲಿ ಕೊಂಡೊಯ್ಯಲು ಶಕ್ತರಾಗಿದ್ದರು. ಮತ್ತು ಅವುಗಳನ್ನು ಬಡವರಿಗೆ ಮಾರಾಟ ಮಾಡುತ್ತಿದ್ದರು. ಮತ್ತು ಅಕ್ಕಿ ಅವರ ಪ್ರಧಾನ ಆಹಾರವಾಗಿತ್ತು. ಆದ್ದರಿಂದ ಸಾಮಾನ್ಯವಾಗಿ ಇದನ್ನು ತುಳುನಾಡು ಪ್ರದೇಶ ಎಂದು ಹೇಳಬಹುದು. ಒಟ್ಟಾರೆಯಾಗಿ ಮಲಬಾರ್ ಮಾಲ್ಡೀವ್ ದ್ವೀಪಗಳು, ಅರೇಬಿಯಾ, ಪರ್ಷಿಯಾ, ಏಡೆನ್ ಮತ್ತು ಮೆಕ್ಕಾಗಳೊಂದಿಗೆ ಅಕ್ಕಿ, ಮೆಣಸು, ತೆಂಗಿನ ಎಣ್ಣೆ, ತೆಂಗಿನ ನಾರು (ಕಾಯಿರ್), ಬೆಲ್ಲ, ಸಕ್ಕರೆ, ಕಬ್ಬಿಣ, ತಾಮ್ರ, ಕುದುರೆಗಳು ಮತ್ತು ಮುತ್ತುಗಳಂತಹ ಸರಕುಗಳನ್ನು ವ್ಯಾಪಾರ ಮಾಡುತ್ತಾರೆ.

ಅರಬ್ಬಿ ಕಡಲ ತೀರದ ಮಂಗಳೂರು, ಕಾಸರಗೋಡು, ಮಂಜೇಶ್ವರ, ಕುಂದಾಪುರ, ಗಂಗೊಳ್ಳಿ, ಭಟ್ಕಳ, ಹೊನ್ನಾವರ, ಕುಮುಟ, ಗೋಕರ್ಣ ಮತ್ತು ಕಾರವಾರ ಬಂದರಿನ ಮೂಲಕ ವಿದೇಶಿ ವ್ಯಾಪಾರ ನಡೆಯುತ್ತಿತ್ತು. 17ನೇ ಶತಮಾನದ ವೇಳೆಗೆ –ತುಳುನಾಡಿನಿಂದ ಬಹುಪಾಲು ಅಕ್ಕಿ ಗೋವಾಕ್ಕೆ ರಫ್ತಾಗುತ್ತಿತ್ತು. ಮಧ್ಯವರ್ತಿಗಳಾಗಿ ಸಾರಸ್ವತರಾದ ರಾಮ ಕಿಣಿ ಹಾಗೂ ವಿಠಲ ನಾಯಕರಂತವರು ಬಸ್ರೂರಿನಲ್ಲಿದ್ದರು ಎನ್ನುವುದನ್ನು ಸಂಜಯ್ ಸುಬ್ರಹ್ಮಣ್ಯಮ್ ವಿವರಿಸುತ್ತಾರೆ.[138]

**ತುಳುನಾಡು ಆಗ್ನೇಯ ಏಷ್ಯಾ ರಾಷ್ಟ್ರದೊಂದಿಗೂ** ಕೂಡವ್ಯಾಪಾರ ಸಂಬಂಧವನ್ನು ಹೊಂದಿತ್ತು. ಆಗ್ನೇಯ ಏಷ್ಯಾ ರಾಷ್ಟ್ರದಿಂದ ಮಧ್ಯವರ್ತಿಗಳು/ವ್ಯಾಪಾರಿಗಳು ತುಳುನಾಡಿಗೆ ಬರುತ್ತಿದ್ದರು. ಬಂದವರು ಸಾಂಭಾರ ಪದಾರ್ಥಗಳನ್ನು ಹಾಗೂ ಔಷಧಿಗಳನ್ನು ತರುತ್ತಿದ್ದರು.

ಇವೆಲ್ಲಾ ತುಂಬಾ ಸೂಕ್ಷ್ಮವಾಗಿ ಕೊಡುಕೊಳ್ಳುವಿಕೆಯಂತೆ ನಡೆಯುತ್ತಿದ್ದವು. ಕಚ್ಚಾವಸ್ತುಗಳನ್ನು ತರಿಸಿಕೊಳ್ಳುತ್ತಿದ್ದರು. ಉದಾ: ಕರ್ಪೂರ, ಪಚ್ಚೆ ಕರ್ಪೂರ –ಇವೆಲ್ಲಾ ಸೌತ್ ಈಸ್ಟ್ ಏಷ್ಯಾ (ಜಾವಾ, ಸುಮಾತ್ರಾ, ಕಾಂಬೋಡಿಯ, ಬರ್ಮಾ)ದಿಂದ ಬರುತ್ತಿದ್ದವು. ಜೊತೆಗೆ ಮಸಾಲೆಗಳು ಬರುತ್ತಿದ್ದವು. ವಿಶೇಷವಾಗಿ ಶ್ರೀಲಂಕಾದಿಂದ ಲವಂಗ ಮತ್ತು ಚಂದನ ಮರದ ದಿಮ್ಮಿಗಳು ಬರುತ್ತಿತ್ತು. ತುಳುನಾಡಿನಿಂದ ಇವುಗಳನ್ನು ಕೂಡ ರಫ್ತು ಮಾಡಲಾಗುತ್ತಿತ್ತು. ಇಲ್ಲಿಂದ ಹೆಚ್ಚಾಗಿ ರಫ್ತು ಮಾಡುತ್ತಿದ್ದ ಸರಕುಗಳೆಂದರೆ, ಶುಂಠಿ, ಕರಿಮೆಣಸು, ದಾಲ್ಚಿನಿ, ಏಲಕ್ಕಿ, ಚಕ್ಕೆ, ಅಡಿಕೆ, ತೆಂಗಿನಕಾಯಿ, ತೆಂಗಿನ ಎಣ್ಣೆ, ಅಕ್ಕಿ ಹಾಗೂ ಘಟ್ಟದ ಮೇಲಿನ ಪ್ರದೇಶವಾದ ಕಾವೇರಿ ಮುಖಜ ಭೂಮಿಯಲ್ಲಿ (ಕಪಿಲಾ ಕಾವೇರಿ) ಉತ್ತಮ ತಳಿಯ ಅಕ್ಕಿ ಉತ್ಪಾದನೆಯಾಗುತ್ತಿತ್ತು. ಅದನ್ನು ತುಳುನಾಡಿಗೆ ಕಳುಹಿಸುತ್ತಿದ್ದರು. ಜೊತೆಗೆ ಬೆಲ್ಲ (ಗಟ್ಟಿಬೆಲ್ಲ) ಬಿಳಿಅಕ್ಕಿಯನ್ನು ತುಳುನಾಡಿಗೆ ಕಳುಹಿಸುತ್ತಿದ್ದರು. ಇವುಗಳು ಏಡನ್‌ವರೆಗೂ ರಫ್ತಾಗುತ್ತಿದ್ದವು. ಮಲಬಾರ್–ಕೊಂಕಣದಲ್ಲಿಯೂ ಕೊಡುಕೊಳ್ಳುವಿಕೆಯನ್ನು ಕಾಣಬಹುದು.[139] ಕ್ರಿ.ಶ 16ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಬೆಳೆಯುವ ಉತ್ತಮ ಗುಣಮಟ್ಟದ ಅಕ್ಕಿಯನ್ನು ಬಸರೂರು, ಬಾರಕೂರು ಮತ್ತು ಮಂಗಳೂರು ಬಂದರುಗಳ ಮೂಲಕ ಮಾಲ್ಡೀವ್ಸ್, ಏಡನ್ ಮತ್ತು ಒರ್ಮಾಜ್‌ಗಳಿಗೆ ರವಾನಿಸಲಾಗುತ್ತಿತ್ತು.[140] ಮಲಬಾರ್ ವ್ಯಾಪಾರಕ್ಕೆ ಸಂಪರ್ಕ ಕಲ್ಪಿಸುವಾಗ ತುಳುನಾಡಿಗೆ ಮಲಬಾರ್‌ನಿಂದ ಸಣ್ಣಪ್ರಮಾಣದಲ್ಲಿ ತೆಂಗಿನಕಾಯಿಯನ್ನು ತರಿಸಿಕೊಳ್ಳುತ್ತಿದ್ದವು. ಇಲ್ಲಿ ತೆಂಗಿನಕಾಯಿ ಬಳಕೆ ಹೆಚ್ಚು ದಿನನಿತ್ಯದ ಬಳಕೆಯಲ್ಲಿ ತೆಂಗಿನಎಣ್ಣೆ ಕೂಡ ಬರುತ್ತಿತ್ತು.

ಆರಂಭದಲ್ಲಿ ಅರಬ್ ಮತ್ತು ಪೋರ್ಚುಗೀಸ್ ವರ್ತಕರುಗಳಿಗೆ ವಾಣಿಜ್ಯ ಪೈಪೋಟಿಗಳು ನಡೆದಿದ್ದು, ಭಾರತೀಯ ಮಾರುಕಟ್ಟೆಯಿಂದ ಅರಬ್ಬರನ್ನು ಹೊರಹಾಕುವಲ್ಲಿ ಪೋರ್ಚುಗೀಸರು ಯಶಸ್ವಿಯಾಗಿದ್ದರು. ವಿದೇಶೀ ವ್ಯಾಪಾರಿಗಳು ಮತ್ತು ಸಮಕಾಲೀನ ಶಾಸನಗಳು, ಉಲ್ಲೇಖಿಸುವಂತೆ ಈ ಮಾರ್ಗಗಳು ಅತ್ಯಂತ ದುರ್ಗಮವಾಗಿದ್ದವು ಮತ್ತು ಅಪಾಯಕಾರಿಯೂ ಆಗಿದ್ದು ರಕ್ಷಣೆಯ ದೃಷ್ಟಿಯಿಂದ ವ್ಯಾಪಾರಿಗಳು 100ರಿಂದ 500ರಷ್ಟು ಸಂಖ್ಯೆಯಲ್ಲಿ ಗುಂಪಾಗಿ ಪ್ರಯಾಣಿಸುತ್ತಿದ್ದರು. ವರ್ತಕರ ಸರಕುಗಳು ಹಾಗೂ ಪ್ರಾಣ ರಕ್ಷಣೆಗಾಗಿ ಮಲೆನಾಡಿನ ಸದೃಡ ಶರೀರದ ಜನರನ್ನು ಅಂಗರಕ್ಷಕರನ್ನಾಗಿ ನೇಮಿಸಿ ಕೊಳ್ಳುತ್ತಿದ್ದರು. ಅನೇಕ ಸನ್ನಿವೇಶಗಳಲ್ಲಿ ಈ ಅಂಗರಕ್ಷಕರು ಹೆದ್ದಾರಿಯ ಕಳ್ಳರೊಂದಿಗೆ ಹೋರಾಡಿ ಮರಣ ಹೊಂದಿದ್ದು ಅವರ ಜ್ಞಾಪಕಾರ್ಥವಾಗಿ, ವೀರಗಲ್ಲುಗಳನ್ನು ಕೆತ್ತಿಸಿದ್ದು,

ಮೃತರ ಬಂಧುಗಳಿಗೆ ಭೂದಾನ ಮಾಡಿರುವ ಉದಾಹರಣೆಗಳಿವೆ. ವಿಜಯನಗರ ಸಾಮ್ರಾಜ್ಯವು ಉಚ್ಛ್ರಾಯ ಸ್ಥಿತಿಯಲ್ಲಿದಾಗ ಪಶ್ಚಿಮ ಸಮುದ್ರ ತೀರದಿಂದ ಒಳನಾಡಿಗೆ ನೇರ ಸಂಪರ್ಕವನ್ನು ಕಲ್ಪಿಸುವ ವ್ಯಾಪಾರೀ ಮಾರ್ಗಗಳು ಕನ್ನಡ ಕರಾವಳಿ ಹಾಗೂ ಮಲೆನಾಡುಗಳನ್ನು ಹಾದು ಹೋಗುತ್ತಿದ್ದವು ಎಂಬುದು ಆ ಕಾಲದ ವಿದೇಶೀ ಪ್ರವಾಸಿಗರ ಕಥನದಿಂದ ವ್ಯಕ್ತವಾಗುತ್ತದೆ. 16ನೇ ಶತಮಾನದ ನಂತರ ಪಾಶ್ಚಾತ್ಯ ವ್ಯಾಪಾರದ ಅಗತ್ಯಗಳನ್ನು ಪೂರೈಸುವ ಸಂಪನ್ಮೂಲಗಳನ್ನು ಬೆಳೆಸುತ್ತಾ ಸಮೃದ್ಧವಾಗತೊಡಗಿತು. ಈ ಕಾರ್ಯವು ಇಲ್ಲಿನ ಸ್ಥಾನಿಕ ಪ್ರಭುತ್ವಗಳ ನಿರ್ಮಾಣದ ಜೊತೆ ಜೊತೆಗೇ ನಡೆಯಿತು. ವಿದೇಶೀ ವ್ಯಾಪಾರದಲ್ಲಿ ಒಂದು ಮುಖ್ಯ ಸರಕೆಂದರೆ, ಕಾಳುಮೆಣಸಾಗಿತ್ತು.

ವಿಜಯನಗರ ಕಾಲದ ಮಲೆನಾಡು ದಟ್ಟ ಅರಣ್ಯಗಳಿಂದ ಕೂಡಿದ್ದು ಅತ್ಯಂತ ದುರ್ಗಮ ಬೆಟ್ಟ ಮತ್ತು ಕಣಿವೆಗಳ ಮೂಲಕ ಕಾಲುದಾರಿ ಮತ್ತು ರಸ್ತೆಗಳ ಮೂಲಕ ಪಶ್ಚಿಮ ಕರಾವಳಿಯೊಂದಿಗೆ ಸಂಪರ್ಕಹೊಂದಿತ್ತು. ಇದೇ ಮಾರ್ಗವಾಗಿ ವಿದೇಶೀಯರು ಒಳನಾಡನ್ನು ಪ್ರವೇಶಿಸಿ ವಿದೇಶೀ ಸಂಸ್ಕೃತಿ ಪರಿಚಯಿಸಿದರು. ಮಲೆನಾಡಿನ ಪ್ರಮುಖ ವಾಣಿಜ್ಯ ಬೆಳೆಗಳಾದ ಮೆಣಸು, ಏಲಕ್ಕಿ ಇತ್ಯಾದಿ ಸಂಭಾರವಸ್ತುಗಳು ವಿದೇಶೀಯರ ಆಕರ್ಷಣೆಗೆ ಕಾರಣವಾಗಿದ್ದು, ವಿದೇಶೀ ಮಾರುಕಟ್ಟೆಯಲ್ಲಿ ಭಾರೀ ಬೇಡಿಕೆ ಪಡೆದಿದ್ದವು.

ಭಾರತದಿಂದ ಈ ವ್ಯಾಪಾರಿಗಳು ಯುರೋಪಿಗೆ ಸಾಗಿಸುತ್ತಿದ್ದ ರಫ್ತು ಪದಾರ್ಥಗಳಲ್ಲಿ ಎರಡು ಪ್ರಕಾರದವುಗಳನ್ನು ಗುರುತಿಸಬಹುದು. ಕೃಷಿ ಹಾಗೂ ಅರಣ್ಯ ಉತ್ಪಾದನೆಗಳು – ಮುಖ್ಯವಾಗಿ ಕಾಳುಮೆಣಸು ಹಾಗೂ ಗುಡಿ ಕೈಗಾರಿಕಾ ಉತ್ಪಾದನೆಗಳು – ಮುಖ್ಯವಾಗಿ ಬಟ್ಟೆ. ಮೊದಲನೆಯ ಪ್ರಕಾರದ ಉತ್ಪಾದನೆಯಲ್ಲಿ ಮಲೆನಾಡು ಹಾಗೂ ಕರಾವಳಿ ಪ್ರದೇಶಗಳು ತಮ್ಮ ಪ್ರಾಧಾನ್ಯವನ್ನು ಉಳಿಸಿಕೊಂಡಿದ್ದವು. ಎರಡನೆಯ ಪ್ರಕಾರದ ಉತ್ಪಾದನೆಯಲ್ಲಿ ಒಳನಾಡಿನ ಹಳ್ಳಿಗಳು ಹಾಗೂ ಪಟ್ಟಣಗಳು ಪ್ರಾಧಾನ್ಯವನ್ನು ಪಡೆದಿದ್ದವು. ಆದರೆ ಇವೆರಡರ ವ್ಯಾಪಾರದಲ್ಲೂ ಅಂತಿಮವಾಗಿ ಕರಾವಳಿ ಪ್ರದೇಶದ ವ್ಯಾಪಾರೀ ಸಮುದಾಯಗಳೇ ನಿರ್ಣಾಯಕವಾಗಿದ್ದವು. ಪೋರ್ಚುಗೀಸರು ವ್ಯಾಪಾರವನ್ನು ಪ್ರಾರಂಭಿಸಿದ ನಂತರ ಭಾರತದ ಸಂಭಾರ ಪದಾರ್ಥಗಳಿಗೆ ಯುರೋಪಿನ ಹಾಗೂ ಹೊಸದಾಗಿ ಅನ್ವೇಷಿಸಿದ ಅಮೇರಿಕಾದ ಭಾಗಗಳ ಮಾರುಕಟ್ಟೆಯಲ್ಲಿ ಬೇಡಿಕೆಯನ್ನು ನಿರ್ಮಿಸತೊಡಗಿದರು. ಅದರಲ್ಲಿ ಕಾಳುಮೆಣಸಿನ ವ್ಯಾಪಾರವು ಅತ್ಯಂತ ಲಾಭದಾಯಕವಾಗಿದ್ದುದನ್ನು ಕಂಡುಕೊಂಡರು. ಯುರೋಪಿನ

ವ್ಯಾಪಾರಿಗಳಿಗೆ ಕಾಳುಮೆಣಸಿನ ಬೇಡಿಕೆಯು 16ನೇ ಶತಮಾನದುದ್ದಕ್ಕೂ ಏರುತ್ತಲೇ ಹೋಯಿತು. ಕೇವಲ ಕಾಳುಮೆಣಸನ್ನೇ ಪ್ರಧಾನವಾಗಿಟ್ಟುಕೊಂಡು ಪಶ್ಚಿಮ ಕರಾವಳಿಯಲ್ಲಿ ವ್ಯಾಪಾರ ನಡೆಸಿದರು. ಯುರೋಪಿನ ಕಾಳುಮೆಣಸಿನ ವ್ಯಾಪಾರದಲ್ಲಿ ಪೋರ್ಚುಗೀಸರ ಏಕಸ್ವಾಮ್ಯವಿತ್ತು. ಇದನ್ನು ಮನಗಂಡ ಡಚ್ಚರು, ಇಂಗ್ಲಿಷರು ಕೂಡ ಪೈಪೋಟಿಗಿಳಿದು ಪಶ್ಚಿಮ ಕರಾವಳಿಗೆ ಲಗ್ಗೆಯಿಟ್ಟರು. ಅದರ ಪರಿಣಾಮವಾಗಿ ಯುರೋಪಿನಲ್ಲಿ ಅಭೂತಪೂರ್ವವಾಗಿ ಮೆಣಸಿನ ಮಾರುಕಟ್ಟೆ ವಿಸ್ತಾರವಾಯಿತು. 1620ರಿಂದ 1670ರ ಅವಧಿಯಲ್ಲಿ ಯುರೋಪಿಗೆ ಸಾಗಾಟವಾಗುತ್ತಿದ್ದ ಕಾಳುಮೆಣಸಿನ ಪ್ರಮಾಣದಲ್ಲಿ ಮೂರು ಪಟ್ಟು ಹೆಚ್ಚಳವಾದುದನ್ನು ಇತಿಹಾಸಕಾರರು ದಾಖಲಿಸಿದ್ದಾರೆ.

ಈ ಹೊಸ ಅವಕಾಶಕ್ಕೆ ಸ್ಪಂದಿಸಿದ ಪಶ್ಚಿಮ ಕರಾವಳಿಯ ರಾಜ್ಯಗಳು ಹಾಗೂ ಕೃಷಿಕರು ಕಾಳುಮೆಣಸಿನ ಉತ್ಪಾದನೆಯನ್ನು ಹೆಚ್ಚಿಸತೊಡಗಿದರು. 15ನೇ ಶತಮಾನದಲ್ಲಿ ವ್ಯಾಪಾರಿಗಳಿಗೆ ಪೂರೈಕೆ ಮಾಡುತ್ತಿದ್ದ ದೊಡ್ಡ ಮಾರುಕಟ್ಟೆಗಳು ಮಲಬಾರು ತೀರದಲ್ಲಿದ್ದರೆ 16ನೆಯ ಶತಮಾನದಲ್ಲಿ ಯುರೋಪಿಗೆ ಸಾಗುತ್ತಿದ್ದ ಕಾಳುಮೆಣಸಿನ ಸಿಂಹಪಾಲು ತುಳುನಾಡಿನಿಂದಲೇ ಪೂರೈಕೆಯಾಗುತ್ತಿತ್ತು. ಅದರಲ್ಲೂ ಹೊನ್ನಾವರ ಪ್ರದೇಶದಲ್ಲಿ ಸಿಗುತ್ತಿದ್ದ ಕಾಳುಮೆಣಸು ಕರಾವಳಿಯಲ್ಲೇ ಅತ್ಯುತ್ತಮವಾದುದಾಗಿತ್ತೆಂದು ಹಾಗೂ ರಫ್ತಾಗುತ್ತಿತ್ತೆಂಬ ಎಂಬ ವಿಷಯವನ್ನು ವಿದೇಶೀ ದಾಖಲೆಗಳು ತಿಳಿಸುತ್ತವೆ. ಹಾಗೂ ಇಲ್ಲಿನ ಖರೀದಿ ಹೆಚ್ಚು ಲಾಭದಾಯಕವಾಗಿದ್ದುದರಿಂದ ವಿದೇಶೀ ವ್ಯಾಪಾರಿಗಳು ಇದಕ್ಕೆ ಹೆಚ್ಚು ಆದ್ಯತೆಯನ್ನು ನೀಡುತ್ತಿದ್ದರು ಎಂಬುದಾಗಿಯೂ ತಿಳಿದುಬರುತ್ತದೆ. ರಫ್ತಿನ ಪ್ರಮಾಣವನ್ನು ಹೆಚ್ಚಿಸುವ ಅವಕಾಶಗಳು ಹಾಗೂ ಪ್ರಲೋಭನೆಗಳು 17ನೇ ಶತಮಾನದಲ್ಲಿ ತುರೀಯಾವಸ್ಥೆ ತಲುಪಿದಂತೆಲ್ಲ ಇಲ್ಲಿ ಮೆಣಸಿನ ಕೃಷಿಯನ್ನು ಕೂಡ ವಿಸ್ತರಿಸಲಾಯಿತು. ಘಟ್ಟ ಪ್ರದೇಶದ ಅಡವಿಗಳು ಮೆಣಸಿನ ಕಾನುಗಳಾದವು. ಬುಕಾನನ್ನನು[137] 19ನೆಯ ಶತಮಾನದ ಪ್ರಾರಂಭದಲ್ಲಿ ಉತ್ತರ ಕನ್ನಡ ಜಿಲ್ಲೆಯಾದ್ಯಂತ ಇಂಥ ಮೆಣಸಿನ ಕಾನುಗಳ ಅವಶೇಷಗಳನ್ನು ವೀಕ್ಷಿಸಿದ್ದನ್ನು ದಾಖಲಿಸುತ್ತಾನೆ. ಇಂದಿಗೂ ಈ ಭಾಗದಲ್ಲಿ ಕಾನುಗಳಲ್ಲಿ ಮೆಣಸಿನ ಬಳ್ಳಿಗಳು ಉಳಿದುಕೊಂಡು ಬಂದಿದ್ದನ್ನು ನೋಡಬಹುದು. ಅಂದರೆ ಘಟ್ಟ ಪ್ರದೇಶದ ಅಡವಿಗಳು ಮೆಣಸಿನ ತೋಟಗಳಾದವು. ಕರ್ನಾಟಕ ಮಲೆನಾಡು, ಅದರಲ್ಲೂ ಕೆಳದಿ, ಬಿಳಗಿ, ಗೇರುಸೊಪ್ಪೆ ಹಾಗೂ ಸೋದೆ ರಾಜ್ಯಗಳು ಇಂಥ ಕಾಳುಮೆಣಸಿನ ಉತ್ಪಾದನಾ

ವಲಯಗಳನ್ನು ಹಾಗೂ ಮಾರಾಟವನ್ನು ತಮ್ಮ ಸ್ವಾಮ್ಯದಲ್ಲಿ ತಂದುಕೊಂಡು ವಿದೇಶೀ ವ್ಯಾಪಾರಿಗಳ ಜೊತೆಗೆ ವ್ಯವಹಾರ ನಡೆಸಿ ಲಾಭವನ್ನು ಕಂಡುಕೊಳ್ಳತೊಡಗಿದವು. ಕಾಳುಮೆಣಸಿನ ಕಾರಣಕ್ಕಾಗಿ ಕೆಳದಿ ಹಾಗೂ ಗೇರುಸೊಪ್ಪೆಯ ಅರಸುಮನೆತನಗಳ ನಡುವೆ ನಡೆದ ಯುದ್ಧಗಳು ಎಲ್ಲರಿಗೂ ತಿಳಿದ ವಿಷಯ.

ಕ್ರಿ.ಶ 17ನೇ ಶತಮಾನದಲ್ಲಿ ಫಾಸ್ಟರ್ ಮತ್ತು ಫಾವೆಟ್ ಎಂಬ ಬ್ರಿಟಿಷ್ ಬರಹಗಾರರು ಸಂಪಾದಿಸಿದ ದಾಖಲೆಗಳ ಪ್ರಕಾರ ಕರಾವಳಿ ಕರ್ನಾಟಕದ ಮಂಗಳೂರು, ಬಸರೂರು, ಭಟ್ಕಳ. ಹೊನ್ನಾವರ, ಮತ್ತು ಕಾರಾವಾರಗಳಲ್ಲಿ ಅಕ್ಕಿ, ಮೆಣಸು, ನಾರು, ತೆಂಗು, ಕಬ್ಬು, ಏಲಕ್ಕಿ ಇವುಗಳಿಗೆ ಉತ್ತಮ ಬೇಡಿಕೆಯಿದ್ದು, ಅವುಗಳು ವಿದೇಶಗಳಿಗೆ ರಫ್ತಾಗುತ್ತಿದ್ದವು ಎನ್ನುವುದನ್ನು ದೃಢಪಡಿಸುತ್ತವೆ.

ಪೋರ್ಚುಗಲ್ ಪ್ರವಾಸಿಗನಾಗಿದ್ದ ಬಾರ್ಬೋಸ (ಕ್ರಿ.ಶ 1514–1516) ವಿಜಯನಗರದ ರಾಜಧಾನಿಗೆ ಭೇಟಿ ನೀಡಿದ್ದನು. ಹೊನ್ನಾವರದಲ್ಲಿ ಅಕ್ಕಿ ವ್ಯಾಪಾರ, ತೆಂಗಿನಕಾಯಿ, ಎಣ್ಣೆ, ಜಾಗ್ರಾ ಮತ್ತು ತಾಳೆಯ ಮರದ ಹೆಂಡ ದೊರೆಯುತ್ತದೆ. ಅಂದಿನ ಭಟ್ಕಳ ಭಾರೀ ವಾಣಿಜ್ಯ ಕೇಂದ್ರವಾಗಿದ್ದು ಶ್ರೀಮಂತಿಕೆ ಊರು ಆಗಿತ್ತು ಎಂದು ತಿಳಿಸುತ್ತಾನೆ. ಇಲ್ಲಿಂದ ಬಿಳಿ ಅಕ್ಕಿ, ಬೂಸಾ, ಸಕ್ಕರೆ, ಕಬ್ಬಿಣ ಮತ್ತು ಔಷಧಿಗಳು ಒರ್ಮೋಜ್‌ಗೆ ರವಾನೆಯಾಗುತ್ತದೆ. ಮಂಗಳೂರಿನ ಭಾಗದಲ್ಲಿ ಹೆಚ್ಚಾಗಿ ಕಂದು ಬಣ್ಣದ ಕುಚ್ಚಲು ಅಕ್ಕಿ ಬಳಸುತ್ತಿದ್ದು, ಅದು ಅಗ್ಗವಾಗಿದ್ದು ಬಿಳಿ ಅಕ್ಕಿಗಿಂತ ಆರೋಗ್ಯಕರವಾದುದು. ಕುಂಬಳೆ ಪಶ್ಚಿಮ ಕರಾವಳಿಯ ಬಂದರು ಪಟ್ಟಣವಾಗಿದ್ದು, ಕರಿ ಅಕ್ಕಿ ಇಲ್ಲಿಂದ ಮಲಬಾರ್ ಮತ್ತು ಮಾಲ್ಡೀವ್ಸ್ ಹೋಗುತ್ತಿತ್ತು. ಅಕ್ಕಿ, ತೆಂಗಿನಕಾಯಿ, ಮೆಣಸು, ಉಪ್ಪು, ಅಡಿಕೆ, ಏಲಕ್ಕಿ, ಗೋಧಿ, ಕುದುರೆಗಳು ಇತ್ಯಾದಿ ರಪ್ತು ಮಾಡುವ ಪ್ರಮುಖ ವಸ್ತುಗಳಾಗಿವೆ.[141] ಪಶ್ಚಿಮ ಕರಾವಳಿ ಹಲವಾರು ನೈಸರ್ಗಿಕ ಬಂದರುಗಳನ್ನು ಹೊಂದಿದ್ದು ಅವುಗಳಲ್ಲಿ ಭಟ್ಕಳ ಅಂತಾರಾಷ್ಟ್ರೀಯ ವಾಣಿಜ್ಯ ಕೇಂದ್ರವಾಗಿತ್ತು. ಹಾಗೆಯೇ ಹೊನ್ನಾವರ, ಮಿರ್ಜಾನ್, ಬಸರೂರು, ಮಂಗಳೂರು, ಕಾಸರಗೋಡು ಮತ್ತು ಕಾರವಾರ ಮೂಲಕ ವಿದೇಶೀ ವ್ಯಾಪಾರ ವಹಿವಾಟುಗಳು ನಡೆಯುತ್ತಿದ್ದವು. ಈ ಬಂದರುಗಳ ಮುಖಾಂತರ ಪಶ್ಚಿಮ ಕರಾವಳಿ ಪ್ರವೇಶಿಸುವ ವಿದೇಶೀಯರು ಕರಾವಳಿ ಮತ್ತು ಒಳನಾಡಿನ ಪ್ರಮುಖ ಪಟ್ಟಣಗಳಾದ ಭಟ್ಕಳ, ಮಂಗಳೂರು, ಹೊನ್ನಾವರ, ಬೈಂದೂರು, ಬಾರಕೂರು, ಬಸರೂರು, ಕುಂಬಳೆ, ಮಿರ್ಜಾನ್, ಮಂಜೇಶ್ವರ, ಕಾಸರಗೋಡು, ಕಾರ್ಕಳ, ಮೂಡುಬಿದಿರೆ,

ಕಳಸ, ಸಾಗರ, ಚಂದಾವರ, ಬನವಾಸಿ, ಇತ್ಯಾದಿ ಪಟ್ಟಣಗಳೊಂದಿಗೆ ವ್ಯಾಪಾರ ಸಂಪರ್ಕ ಹೊಂದಿದ್ದರು.

ಕೃಷಿ ಉತ್ಪಾದನೆಯಲ್ಲಿ ವಿದೇಶಿ ವಹಿವಾಟು ಸಂಬಂಧಪಟ್ಟಂತೆ ಭಟ್ಕಳ, ಮಂಗಳೂರು ಮತ್ತು ಹೊನ್ನಾವರ ಮುಂತಾದ ಕರ್ನಾಟಕ ಬಂದರುಗಳಿಂದ ರಫ್ತು ಮಾಡಲ್ಪಟ್ಟ ಅತ್ಯಂತ ಪ್ರಮುಖ ಸರಕೆಂದರೆ, ಮೆಣಸು. ಇದು ಭಾರತ ಮತ್ತು ಹೊರದೇಶದಲ್ಲಿ ಉತ್ತಮ ಮಾರುಕಟ್ಟೆಯನ್ನು ಹೊಂದಿತ್ತು. ಹಿಂದಿನ ಕಾಲದಿಂದಲೂ ಕರ್ನಾಟಕ ಇತರ ದೇಶಗಳೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿತ್ತು. ಆದರೆ ನಂತರದ ಅವಧಿಯಲ್ಲಿ ಈ ಸಂಪರ್ಕ ತೀವ್ರವಾಯಿತು. ಒಳನಾಡಿನ ವ್ಯಾಪಾರ, ವಾಣಿಜ್ಯ ಮತ್ತು ಪಶ್ಚಿಮದ ಸಾಗರ ವ್ಯಾಪಾರದಲ್ಲಿ ಕರ್ನಾಟಕವು ಒಂದು ವಿಶಿಷ್ಟ ಪಾತ್ರವನ್ನು ವಹಿಸಿದೆ. ಮೆಣಸು ಮತ್ತು ಇತರ ಮಸಾಲೆಗಳು ಕೃಷಿ ಉತ್ಪನ್ನಗಳನ್ನು ಬಹುಪಾಲು ಅಭಿವೃದ್ಧಿಗೊಳಿಸಿದವು. ಜೊತೆಗೆ ಗುಲ್ವಾಡಿ ಸಣ್ಣಕ್ಕಿಯನ್ನು ಪರ್ಷಿಯಾ ದೇಶಕ್ಕೆ ರಫ್ತುಮಾಡುತ್ತಿದ್ದರು, ಈ ಅಕ್ಕಿಗೆ ಭಾರೀ ಬೇಡಿಕೆ ಇತ್ತು. ಜೊತೆಗೆ ಏಲಕ್ಕಿ, ಲವಂಗ, ಕಾಳುಮೆಣಸು, ದಾಲ್ಚಿನ್ನಿ, ಇವೆಲ್ಲಾ ಪರ್ಷಿಯಾ ದೇಶಕ್ಕೆ ರಫ್ತಾಗುತ್ತಿದ್ದವು. ಬಸರೂರಿನಿಂದ ಮಸ್ಕತ್‌ಗೆ ಅಕ್ಕಿ ರಫ್ತಾಗುತಿತ್ತು. ಇದಕ್ಕೆ ಮಸ್ಕತಿ ಅಕ್ಕಿ ಎಂದು ಕರೆಯಲಾಗಿದೆ. ಪರ್ಷಿಯ ದೇಶಗಳಲ್ಲಿ ಈ ಅಕ್ಕಿಗೆ ಭಾರೀ ಬೇಡಿಕೆ ಇತ್ತು.

ಶಿಕಾರಿಪುರದ ಕ್ರಿ. ಶ. 1054ರ ಶಾಸನವು ಕರ್ನಾಟಕದ ವರ್ತಕರು ಭೂಮಾರ್ಗವಾಗಿ ಮತ್ತು ಜಲಮಾರ್ಗವಾಗಿ ವ್ಯಾಪಾರ ನಡೆಸುತ್ತಿದ್ದುದನ್ನು ಉಲ್ಲೇಖಿಸುತ್ತದೆ. ಬೆಳಗೊಳದ ವರ್ತಕರು ಕರ್ನಾಟಕದ ಬಂದರುಗಳೊಂದಿಗೆ ಹೊಂದಿದ್ದ ವ್ಯಾಪಾರ ಸಂಪರ್ಕವನ್ನು ಉಲ್ಲೇಖಿಸುತ್ತದೆ. ವಿದೇಶೀ ಯಾತ್ರಿ ಮಾರ್ಕೋಪೋಲೊನು ತನ್ನ ಪ್ರವಾಸಿಕಥನದಲ್ಲಿ ಉಲ್ಲೇಖಿಸಲಾದ ಬಂದರುಗಳನ್ನು ಅತ್ಯಂತ ಚುರುಕಾದ ವಿದೇಶ ವ್ಯಾಪಾರ ತಾಣಗಳಾಗಿದ್ದವೆಂದು ತಿಳಿಸುತ್ತಾನೆ. ಈ ಎಲ್ಲಾ ಸಾಂದರ್ಭಿಕ ಹಾಗೂ ನೇರದಾಖಲೆಗಳು ಹೊಯ್ಸಳರ ಕಾಲದಲ್ಲಿ ಕರ್ನಾಟಕದ ಬಂದರುಗಳೂ ಅರಬಿಯಾ, ಪರ್ಶಿಯಾ, ಚೀನಾ, ರೋಮ್, ಗ್ರೀಕ್ ಮತ್ತು ಹಿಂದೂ ಮಹಾಸಾಗರದ ಇತರೆ ರಾಷ್ಟ್ರಗಳೊಂದಿಗೆ ವ್ಯಾಪಾರ ಸಂಪರ್ಕ ಸಾಧಿಸಿದ್ದನ್ನು ಖಚಿತಪಡಿಸುತ್ತವೆ. ಮೂರನೆಯ ಬಲ್ಲಾಳನು ಚಿಕ್ಕತಾಯಿದೇವಿಯನ್ನು ವಿವಾಹವಾಗಿ, ಸಾಗರದ ನೆರೆಯ ನಾಡಿನ ಮತ್ತು ಹೊಯ್ಸಳ ಸಾಮ್ರಾಜ್ಯದ ಸಂಬಂಧಕ್ಕೆ ಮಹತ್ವವಾದ ಕೊಡುಗೆಯನ್ನು ನೀಡಿದನು. ಇದು ಮುಂದೆ ವಿಜಯನಗರ ಸಾಮ್ರಾಜ್ಯದ

ಕಾಲದಲ್ಲಿ ಕರ್ನಾಟಕದ ಕಡಲತೀರ ನಡೆಸಿದ ವಿದೇಶಿಯ ವ್ಯಾಪಾರಕ್ಕೆ ಉತ್ತಮ ಬುನಾದಿಯನ್ನು ಒದಗಿಸಿತು.[142]

## 2.13 ಬಂದರುಗಳ ಮಹತ್ವ

ವಿದೇಶಿ ವ್ಯಾಪಾರ ಮತ್ತು ಸಂಪರ್ಕಗಳನ್ನು ಚರ್ಚಿಸುವಾಗ ಪ್ರಮುಖ ಪಾತ್ರ ವಹಿಸಿದ ಬಂದರುಗಳು ಮತ್ತು ವಿದೇಶಿ ವ್ಯಾಪಾರ ಮತ್ತು ಸಂಪರ್ಕಗಳನ್ನು ನಡೆಸುವಲ್ಲಿ ಭಾರತೀಯರಿಗೆ ಸಹಾಯ ಮಾಡಿದ್ದವು. ಆದರೆ ಇದು ಬಂದರುಗಳ ಸಂಪೂರ್ಣ ಇತಿಹಾಸವನ್ನು ನಮಗೆ ಒದಗಿಸುವುದಿಲ್ಲ. ಆದ್ದರಿಂದ ಸಾಮಾನ್ಯವಾಗಿ, ಭಾರತದ ಪಶ್ಚಿಮ ಕರಾವಳಿಯ ಮುಖ್ಯ ಬಂದರುಗಳ ಸಂಕ್ಷಿಪ್ತ ಇತಿಹಾಸವನ್ನು ಮತ್ತು ನಿರ್ದಿಷ್ಟವಾಗಿ ತುಳುನಾಡಿನ ಬಂದರುಗಳ ಮಹತ್ವವನ್ನು ಒದಗಿಸಲು ಈ ಅಧ್ಯಯನದಲ್ಲಿ ಪ್ರಯತ್ನವನ್ನು ಮಾಡಲಾಗಿದೆ. ಕಡಲ ವ್ಯಾಪಾರವನ್ನು ನಡೆಸಲು ಉತ್ತಮವಾದ ನಾಗರಿಕ ಸೌಲಭ್ಯಗಳನ್ನು ಒದಗಿಸುವ ಯಾವುದೇ ಬಂದರು, ಪಟ್ಟಣ ಸೂಕ್ತವಾದ ಸಂವಹನ ವ್ಯವಸ್ಥೆಯಿಂದ ಉತ್ತಮ ವಾಣಿಜ್ಯ ಚಟುವಟಿಕೆಗಳಿಂದ ಬೆಂಬಲಿತವಾಗಿರುವ ಸರಕುಗಳು ಮತ್ತು ಅವುಗಳ ಗುಣಲಕ್ಷಣಗಳ ಸುರಕ್ಷತೆ, ಒಳನಾಡಿನೊಂದಿಗೆ ಉತ್ತಮ ಅಂತಾರಾಷ್ಟ್ರೀಯ ವ್ಯಾಪಾರ ಕೇಂದ್ರವಾಗಿ ಬೆಳೆಯುತ್ತದೆ. ಪಶ್ಚಿಮ ಕರಾವಳಿಯು ತನ್ನ ಸಮುದ್ರ ಮಂಡಳಿಯಲ್ಲಿ ಅಂತಹ ಕೇಂದ್ರಗಳನ್ನು ಹೊಂದಿತ್ತು. ಆ ವ್ಯಾಪಾರ ಕೇಂದ್ರಗಳು ಬಂದರು ಪಟ್ಟಣವಾಗಿ ಏಕರೂಪವಾಗಿ ಕಾರ್ಯನಿರ್ವಹಿಸುತ್ತಿದ್ದವು.

ದೋಣಿಗಳು, ಹಡಗುಗಳು, ಆಶ್ರಯ ಅಥವಾ ಲಂಗರು ಹಾಕಿದ ಸ್ಥಳಗಳನ್ನು ಬಂದರು ಎಂದು ಕರೆಯಲಾಗುತ್ತಿತ್ತು. ಭಾರತದ ಪಶ್ಚಿಮ ಕರಾವಳಿಯಲ್ಲಿರುವ ಇಂತಹ ಬಂದರುಗಳು ಕರ್ನಾಟಕದ ವ್ಯಾಪ್ತಿಯಲ್ಲಿದೆ. ಭರೂಚ್ ಮತ್ತು ಮಂಗಳೂರು ನಡುವಿನ ಬಂದರುಗಳ ಬಗ್ಗೆ ಹೆಚ್ಚಿನ ಮಾಹಿತಿ ಲಭಿಸಿವೆ.[143]. ರಾಷ್ಟ್ರಕೂಟ ಪತನದ ನಂತರ ದಕ್ಷಿಣ ಭಾರತದ ರಾಜಕೀಯ ಸ್ಥಿತಿ ಮತ್ತು ದಕ್ಷಿಣದಲ್ಲಿ ಗಣನೀಯ ಪ್ರಮಾಣದಲ್ಲಿ ಬದಲಾಯಿತು. ಕಲ್ಯಾಣ ಚಾಲುಕ್ಯರು ರಾಷ್ಟ್ರಕೂಟರನ್ನು ವಶಪಡಿಸಿಕೊಂಡರು. ದಕ್ಷಿಣ ದೇವಗಿರಿಯ ಸೇವುಣರು ಸ್ವತಂತ್ರ ಆಡಳಿತದ ಕುಟುಂಬಕ್ಕೆ ಏರಿತು. ಕಲ್ಯಾಣ ಚಾಲುಕ್ಯರು ಮತ್ತು ದ್ವಾರಸಮುದ್ರದ ಹೊಯ್ಸಳರುಗಳು ಸಂಕೀರ್ಣ ರಾಜಕೀಯ ಪರಿಸ್ಥಿತಿಗಳಿಗೆ ಗಣನೀಯವಾಗಿ ಕೊಡುಗೆ ನೀಡಿದ್ದಾರೆ. ಮತ್ತು ಭಾರತದ ಕಡಲ ಆಕ್ರಮಣ ಪರೋಕ್ಷವಾಗಿ ದಕ್ಷಿಣ ಭಾರತದ

ಸಮುದ್ರ ತೀರದ ವ್ಯಾಪಾರವನ್ನು ಮತ್ತು ನಿರ್ದಿಷ್ಟವಾಗಿ ಕರ್ನಾಟಕದ ಮೇಲೆ ಪ್ರಭಾವ ಬೀರಿತು. ಕ್ರಿ. ಶ. 10ನೇ ಶತಮಾನದಿಂದ ತದನಂತರ ಅರಬ್ಬರು ಭಾರತೀಯ ಸಮುದ್ರದ ಕಡಲ ವ್ಯಾಪಾರದ ಮಾಸ್ಟರ್ಸ್ ಆದರು. ಈ ಅವಧಿಯಲ್ಲಿ ದಕ್ಷಿಣ ಭಾರತೀಯ ಕಡಲ ವ್ಯಾಪಾರದ ಅಭಿವೃದ್ಧಿಗೆ ಸ್ಥಳೀಯ ವ್ಯಾಪಾರಿಗಳು ಗಣನೀಯ ಕೊಡುಗೆ ನೀಡಿದರು. ದೇವಗಿರಿಯ ಯಾದವರು ಮತ್ತು ಕೊಂಕಣದ ಸಿಲಾಹಾರಗಳು ನೌಕಾಬಲವನ್ನು ಕಾಪಾಡಿಕೊಂಡಿದ್ದರು. ಆದರೆ ಒಂದು ವಿಷಯ ನಿಶ್ಚಿತವಾಗಿದೆ. ಅವುಗಳ ನಿರ್ವಹಣೆಯ ನೌಕಾಪಡೆಯು ಆವಶ್ಯಕತೆಗಳನ್ನು ಪೂರೈಸುವ ಸಾಮರ್ಥ್ಯವನ್ನು ಹೊಂದಿದೆ. ದೇಶೀಯ ಮತ್ತು ವಿದೇಶೀಯ ದಾಖಲೆಗಳು ಕನ್ನಡಿಗರು ಇತರ ದೇಶಗಳೊಂದಿಗೆ ಕಡಲ ವ್ಯಾಪಾರದ ಸಂಪರ್ಕಗಳನ್ನು ಹೊಂದಿದ್ದರು ಎಂದು ಸಾಬೀತುಪಡಿಸಲು ಹೆಚ್ಚಿನ ಪುರಾವೆಗಳನ್ನು ಒದಗಿಸುತ್ತವೆ. ರಾಷ್ಟ್ರಕೂಟರ ಕಾಲದಲ್ಲಿ ಪಶ್ಚಿಮದ ಕರಾವಳಿಗೆ ಆಗಮಿಸಿದ ಅರಬ್ಬರು ಕರ್ನಾಟಕದ ಅಥವಾ ದಕ್ಷಿಣ ಕೊಂಕಣ ಬಂದರುಗಳಾದ ಕಾರವಾರ, ಹೊನ್ನಾವರ, ಭಟ್ಕಳ, ಬಸರೂರು, ಬಾರಕೂರು, ಮಂಗಳೂರು ಪ್ರದೆಶಗಳಲ್ಲಿ ನೆಲೆಸಿ ಈ ಪ್ರದೇಶದ ವ್ಯಾಪಾರದ ಅಭಿವೃದ್ಧಿಗೆ ಕಾರಣರಾದರು. ಆದರೆ ಹೊಯ್ಸಳರು ಪ್ರವರ್ಧಮಾನಕ್ಕೆ ಬಂದನಂತರ ಕರ್ನಾಟಕದ ಕಡಲತೀರದಲ್ಲಿ ರಾಜಕೀಯ ಬದಲಾವಣೆಗಳಾದವು. ದೋರಸಮುದ್ರ ಹೊಯ್ಸಳರ ರಾಜಧಾನಿಯಾಗಿ ಮಾರ್ಪಟ್ಟಿತ್ತು. ರಾಜಧಾನಿಗೆ ಹತ್ತಿರದ ಬಂದರುಗಳಲ್ಲಿ ವಿದೇಶಿಯ ದೇಶಿಯ ವ್ಯಾಪಾರಿಗಳು ಬಂದು ನೆಲೆಸಿದ್ದಲ್ಲದೆ ಇಲ್ಲಿನ ವ್ಯಾಪಾರ ವಹಿವಾಟಿನ ಮೇಲೆ ಅಧಿಕವಾದ ಪ್ರಭಾವ ಬೀರಿದ್ದರು. ಸಂಪರ್ಕ ಮಾರ್ಗಗಳಲ್ಲಿ ನಿರಂತರವಾಗಿ ನಡೆಯುತ್ತಿದ್ದ ಸೈನಿಕ ಮತ್ತು ರಕ್ಷಿತ ವ್ಯಾಪಾರಿಗಳ ಓಡಾಟ ಇಲ್ಲಿನ ಕಳ್ಳಕಾಕರ ಹಾವಳಿಯನ್ನು ಅತ್ಯಂತ ಕನಿಷ್ಠಮಟ್ಟಕ್ಕೆ ಇಳಿಸಿದ್ದಿತು. ಇವೆಲ್ಲವೂ ಹೊಯ್ಸಳರು ತಮ್ಮ ರಾಜಧಾನಿಯನ್ನು ದಕ್ಷಿಣದ ಭಾಗದಲ್ಲಿ ಹೊಂದಿದ್ದರ ಪರಿಣಾಮವಾಗಿತ್ತು.

ಉತ್ತರ ಕನ್ನಡದ ಅಂದರೆ ಗೋವಾದ ದಕ್ಷಿಣದಿಂದ ಭಟ್ಕಳದವರೆಗಿನ ಕರ್ನಾಟಕದ ಕರಾವಳಿ ತೀರ ಅತ್ಯಂತ ಪ್ರಾಚೀನ ಕಾಲದಿಂದಲೂ ಹೊರದೇಶದೊಂದಿಗೆ ವ್ಯಾಪಾರ ಮತ್ತು ವಹಿವಾಟನ್ನು ನಡೆಸುತ್ತಿದ್ದರೂ ಅದರ ಅಧ್ಯಯನ ಸಮರ್ಪಕವಾಗಿ ನೆರವೇರಿಲ್ಲ. ಕೆಲ ವಿದ್ವಾಂಸರು ಕರಾವಳಿ ಕಡಲ ತೀರದ ಉದ್ದಕ್ಕೂ ಇರುವ ಬಂದರುಗಳನ್ನು ಅವುಗಳು ಕೆಲವು

ಹೊರನಾಡಿನ ವ್ಯಾಪಾರ ಮಾರ್ಗ ಕುರಿತು ಅಧ್ಯಯನ ಮಾಡಿದ್ದಾರೆ. ಬಂದರು ಮತ್ತು ಬಂದರುಗಳ ಹಿನ್ನಾಡುಗಳ ನಡುವಿನ ಬಗೆಗಿನ ಅಧ್ಯಯನ ಅತ್ಯಲ್ಪವೆಂದೇ ಹೇಳಬೇಕು.

ಅ. ಸುಂದರರವರ ಹೊನ್ನಾವರ ಸುತ್ತಮುತ್ತಲಿನ ಕ್ಷೇತ್ರಕಾರ್ಯ ಮತ್ತು ಎಸ್. ಆರ್. ರಾವ್‌ರವರ ಸಂಶೋಧನೆಗಳು ಹೊನ್ನಾವರ ಬಂದರು ಮತ್ತು ಅದರ ಹಿನ್ನಾಡು ಹರಪ್ಪ ಸಂಸ್ಕೃತಿಯೊಂದಿಗೆ ಸಂಪರ್ಕ ಹೊಂದಿತ್ತೆಂದು ಸಾಧಿಸುವಲ್ಲಿ ಸಾಕಷ್ಟು ಮಹತ್ವಪೂರ್ಣವಾಗಿದೆ. ಇದಲ್ಲದೇ ಬನವಾಸಿಯಲ್ಲಿ ದೊರೆತ ರೋಮನ್ ನಾಣ್ಯದ ಅಚ್ಚು ವಡಗಾಂವ್ ಮಾಧವಪುರದಲ್ಲಿ ದೊರೆತಿರುವ ರೋಮನ್ ನಾಣ್ಯಗಳು ಸಹ ಇದೇ ಬಂದರಿನ ಮೂಲಕ ಬಂದಿರಬಹುದೆಂದು ಊಹಿಸಬಹುದಾಗಿದೆ. ಕಾರಣ ಈ ಪ್ರದೇಶ ಸಾತವಾಹನೀಯ ಆಳ್ವಿಕೆಯ ಎಲ್ಲೆಯಲ್ಲಿರುವುದರಿಂದ ಪೆರಿಪ್ಲಸ್ ಆಫ್ ಎರಿತ್ರಿಯನ್ ಸೀ ಈ ಬಂದರನ್ನು ಮತ್ತು ಇತರ ಸಾತವಾಹನರ ಕಾಲದ ಬಂದರನ್ನು ಉಲ್ಲೇಖಿಸಿರುವುದರಿಂದ ಈ ತೀರ್ಮಾನಕ್ಕೆ ಬರಬಹುದಾಗಿದೆ.[144] ಒನೂರಿಗೆ (ಹೊನ್ನಾವರ) ಮಂಗಳೋರ್ (ಮಂಗಳೂರು) ಇಲ್ಲಿಂದ ಅಕ್ಕಿ ರವಾನೆಯಾಗುತ್ತಿತ್ತು. ಪರ್ಷಿಯಾದಿಂದ ಬಂದ ಕುದುರೆಗಳನ್ನು ಕನೊನೋರಿಗಿನ (ಕನ್ನಾನೂರು) ಬಂದರಿನಲ್ಲಿ ಇಳಿಸುತ್ತಿದ್ದರು ಪ್ರತಿಯೊಂದು ಕುದುರೆಗೆ 25 ಡಕೆಟುಗಳಷ್ಟು ಸುಂಕ ಕೊಡಬೇಕು. ಹೀಗೆ ಸುಂಕ ತೀರಿದ ನಂತರ ಕುದುರೆಗಳನ್ನು ನರಸಿಂಗನ ರಾಜ್ಯಕ್ಕೆ ಕಳುಹಿಸುತ್ತಿದ್ದರು. ಇದರಿಂದ ನೇರವಾಗಿ ಕುದುರೆಗಳು ಇಲ್ಲಿಗೆ ಬರುತ್ತಿರಲಿಲ್ಲ. ಜೊತೆಗೆ ಅಲ್ಲಿನ ಸಾಕಷ್ಟು ಆದಾಯವು ಸುಂಕದ ರೀತಿಯಲ್ಲಿ ದೊರೆಯುತ್ತಿತ್ತು[145] ಭಟ್ಕಲ್, ಬಸ್ರೂರು ಮತ್ತು ಇತರ ಒಳನಾಡಿನ ಪಟ್ಟಣಗಳಿಗೆ ಒಬ್ಬ ರಾಜನಿದ್ದಾನೆ ಉಳಿದ ನಾಲ್ಕು ಬಂದರುಗಳಲ್ಲಿ ಬಂದರಿನ ಮುಖ್ಯಸ್ಥರು ಇದ್ದಾರೆ. ಇವರೆಲ್ಲ ನರಸಿಂಗನಿಗೆ ಅಧೀನರಾಗಿದ್ದು ಕಂದಾಯ ಕವಳಿಗೆಗಳನ್ನು ಸಲ್ಲಿಸುತ್ತಿದ್ದಾರೆ. ಭಟ್ಕಲ್ ರಾಜ್ಯ ಒಳನಾಡಿನಲ್ಲಿ ಬಹಳ ದೂರ ಹಬ್ಬಿತ್ತು. ಗೋವಾ ಮತ್ತು ಚಾಲ್ ಬಿಟ್ಟರೆ ಭಟ್ಕಲ್ ಬಹುಮುಖ್ಯವಾದ ಬಂದರು. ಇದು ಬಹುಮುಖ್ಯವಾದ ಬಂದರಾಗಿತ್ತು. ಒಳನಾಡಿನಲ್ಲಿ ಬೆಳೆಯುವ ಅತ್ಯುತ್ತಮವಾದ 'ಜೀರಸಾಲ್' (Giracal) ಮತ್ತು 'ಚಂಬಸಾಲ್' (Chambacal) ಎಂದು ಕರೆಯಲ್ಪಡುವ ಅಕ್ಕಿ ಇಲ್ಲಿಂದ ರಫ್ತಾಗುತ್ತಿತ್ತು.[146] ಬೈರವೇರಾ, ಬಾರ್ಕೂರು, ವ್ಡಿಪಿರಂ ಮತ್ತು ಮಂಗಳೂರು ಬಂದರುಗಳಿಗೆ ಹಡಗುಗಳು ಬರುತ್ತವೆ. ವರ್ತಕರು ಕ್ಯಾಂಬೆ, ಗೋವಾ, ಡೆಕ್ಕನ್ ಮತ್ತು ಓರ್ಮ್ಸ್‌ಗಳಿಗೆ ಇಲ್ಲಿಂದ ಸರಕುಗಳನ್ನು ರವಾನಿಸುತ್ತಾರೆ. ಮತ್ತು ಅಲ್ಲಿಂದ ಬೇಕಾದ ಸರಕುಗಳನ್ನು ತರಿಸಿಕೊಳ್ಳುತ್ತಿದ್ದರು.

ಈ ಬಂದರುಗಳಲ್ಲಿ ಬಂದರು ನಾಯಕರುಗಳು ಸೈನ್ಯ ಸಮೇತ ಇದ್ದಾರೆ. ಇವುಗಳಿಂದ ಬರುವ ಆದಾಯ ನರಸಿಂಗನಿಗೆ ಸಲ್ಲುತ್ತದೆ. ಈ ತುಳುನಾಡಿನಿಂದ ನರಸಿಂಗನಿಗೆ ಹೇರಳವಾದ ಆದಾಯವು ಸಿಗುತ್ತಿತ್ತು. ಇಡೀ ನಾಡು ಸಾಗುವಳಿಯಲ್ಲಿ ತೊಡಗಿತ್ತು.

ವಿಜಯನಗರ ಮತ್ತು ಕೆಳದಿ ಅರಸರ ಕಾಲದಲ್ಲಿ ಭಟ್ಕಳ ಮತ್ತು ಬಸ್ರೂರು ಬಂದರಿನಲ್ಲಿ ಪೋರ್ಚುಗೀಸರ ಅಕ್ಕಿ ವ್ಯಾಪಾರ ವಹಿವಾಟುಗಳ ಬಗ್ಗೆ ವಿಶ್ಲೇಷಣಾತ್ಮಕವಾದ ಅಧ್ಯಯನವನ್ನು ಮಾಡಿದ್ದಾರೆ. ಹಾಗೂ ವ್ಯಾಪಾರಿಗಳು ಬಳಸುತ್ತಿದ್ದ ನೇರ ರಸ್ತೆ ಮಾರ್ಗಗಳು ಘಟ್ಟಪ್ರದೇಶದ ಮೂಲಕ ಭಟ್ಕಳ ಮತ್ತು ವಿಜಯನಗರ ಸಾಮ್ರಾಜ್ಯದ ವ್ಯಾಪಾರ ಸಂಬಂದವನ್ನು ತಿಳಿಸುತ್ತವೆ. ಕರಾವಳಿಯುದ್ದಕ್ಕೂ ದೋಣಿಗಳ ಮೂಲಕ ಬಂದರುಗಳಿಗೆ, ಅಕ್ಕಿ, ತೆಂಗಿನನಾರು, ತೆಂಗಿನಕಾಯಿ, ಕಾಳುಮೆಣಸು ಇತ್ಯಾದಿಗಳನ್ನು ಸಾಗಿಸಲಾಗುತ್ತಿತ್ತು.[147] ನಂತರ ವಿಜಯನಗರದಕಾಲಕ್ಕೆ ಮಂಗಳೂರು ಬಂದರು ಒಂದು ಪ್ರಮುಖ ವ್ಯಾಪಾರ ಕೇಂದ್ರವಾಯಿತಲ್ಲದೆ ಇದರ ಜೊತೆಯಲ್ಲಿ ಬಾರಕೂರು, ಬಸ್ರೂರು, ಕೂಡ ಪ್ರಮುಖ ಕೇಂದ್ರಗಳಾಗಿ ಬೆಳೆದವು. ವಿಜಯನಗರ ಸಾಮ್ರಾಜ್ಯದಲ್ಲಿ ಮಂಗಳೂರು ಮತ್ತು ಬಸ್ರೂರು ಪ್ರಾಂತೀಯ ರಾಜಧಾನಿಗಳಾಗಿ ಕಾರ್ಯನಿರ್ವಹಿಸಿರುವ ಉಲ್ಲೇಖಗಳಿವೆ. ಹೀಗಾಗಿ ವಿಜಯನಗರ ಅರಸರ ಕಾಲದಲ್ಲಿ ಈ ಬಂದರುಗಳು ಪ್ರಾಮುಖ್ಯವನ್ನು ಪಡೆದವು. ಕರ್ನಾಟಕದ ಕರಾವಳಿಯಲ್ಲಿ ದೊರೆತಿರುವ ವಿಜಯನಗರದ ಶಾಸನಗಳು ಈ ಪ್ರದೇಶದಲ್ಲಿ ಸಾಕಷ್ಟು ವಿದೇಶಿ ವ್ಯಾಪಾರ ನಡೆಯುತ್ತಿದ್ದುದರ ಬಗ್ಗೆ ಉಲ್ಲೇಖಿಸುತ್ತವೆ. ಕೃಷ್ಣದೇವರಾಯನಿಂದ ರಚಿತವಾದ ಅಮುಕ್ತ ಮೌಲ್ಯದದಲ್ಲಿ ಸಾಗರೋತ್ತರ ಸಂಪರ್ಕದ ರೀತಿ ನೀತಿಗಳು ಮತ್ತು ಆ ವ್ಯಾಪಾರದಲ್ಲಿ ಆಮದಾಗುತ್ತಿದ್ದ ಸರಕುಗಳ ಬಗ್ಗೆ ಮತ್ತು ನಾವಿಕರನ್ನು ನೋಡಿಕೊಳ್ಳುವ ಬಗ್ಗೆ ಹೆಚ್ಚಿನ ಉಲ್ಲೇಖ ದೊರಕುತ್ತದೆ. 1390ರ ಕುಂಚ ಮಠದ ಶಾಸನ, ಮಲಯ, ಕಾಂಬೋಜ, ಸಿಂಹಳ ದೇಶಗಳೊಂದಿಗೆ ಬಾರಕೂರು ಸಂಪರ್ಕ ಹೊಂದಿದ್ದುದನ್ನು ಉಲ್ಲೇಖಿಸುತ್ತದೆ. ಇದಲ್ಲದೆ ಚೀನಿದಾಖಲೆಗಳು ಪಶ್ಚಿಮಕರಾವಳಿಯನ್ನು ಉಲ್ಲೇಖಿಸಿ ಇಲ್ಲಿನ ಬಂದರುಗಳೊಂದಿಗೆ ಸಂಪರ್ಕ ಹೊಂದಿದ್ದನ್ನು ಖಚಿತಪಡಿಸುತ್ತವೆ. ಮಂಗಳೂರು, ಬಾರಕೂರು, ಬಸ್ರೂರು, ತುಳುನಾಡಿನ ಪ್ರಮುಖ ಬಂದರುಗಳಾಗಿದ್ದವು. ಕರ್ನಾಟಕದ ರೇವು ಪಟ್ಟಣದ ವರ್ತಕರು ಗೋವಾದ ವರ್ತಕರೊಂದಿಗೆ ಸಂಪರ್ಕ ಹೊಂದಿದ್ದನ್ನು ಕೆಲವು ಆಕರಗಳು ಖಚಿತ ಪಡಿಸುತ್ತವೆ. 15ನೇ ಶತಮಾನದಲ್ಲಿ ಬೈಂದೂರು, ಬಸ್ರೂರು, ಬಾರಕೂರು, ಮಂಗಳೂರು

ತುಳುನಾಡಿನ ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ಶುಂಠಿ, ತೆಂಗಿನಕಾಯಿ, ಕರಿಮೆಣಸು, ಅಕ್ಕಿ ಮುಂತಾದವುಗಳನ್ನು ಈ ರೇವುಗಳು ಹಲವಾರು ದೇಶಗಳಿಗೆ ರಫ್ತು ಮಾಡುತ್ತಿದ್ದವು.

ವಿಜಯನಗರ ಪೂರ್ವಕಾಲದಲ್ಲಿ ತುಳುನಾಡಿನ ಬಂದರುಗಳು ನಿರ್ಲಕ್ಷ್ಯಕ್ಕೆ ಒಳಗಾದುದಕ್ಕೆ ಈ ಬಂದರುಗಳು ಸಂಪರ್ಕಿಸುವ ಒಳನಾಡಿಗೆ ಸುಗಮ ಸಾರಿಗೆ ಸಂಪರ್ಕ ಇಲ್ಲದಿದ್ದುದು ಮತ್ತು ಕೊಂಕಣ ತೀರದ ರೇವು ಪಟ್ಟಣಗಳು ಹೆಚ್ಚು ವ್ಯವಸ್ಥಿತವೂ ಆಗಿದ್ದುದು ಕಾರಣವಾಗಿರಬಹುದು. ಚೀನಿ ಬೌದ್ಧ ಯಾತ್ರಿಕನ ಉಲ್ಲೇಖದಂತೆ ಬನವಾಸಿಯ ಸುತ್ತಮುತ್ತಲಿನ ಪ್ರದೇಶಗಳು ಕಳ್ಳಕಾಕರ ಬೀಡಾಗಿದ್ದುದನ್ನು ಗಮನದಲ್ಲಿಟ್ಟುಕೊಂಡು ಬಹುಶ: ವರ್ತಕರು ಸುರಕ್ಷಿತ ಕೊಂಕಣದ ಬಂದರುಗಳಿಂದ ವ್ಯಾಪಾರ ನಡೆಸುತ್ತಿದ್ದರೆಂದು ಊಹಿಸಬಹುದಾಗಿದೆ. ಕನರೀಸ್ ನಾಡಿನಲ್ಲಿ ಅಂಜುದ್ವೀಪದಿಂದ ಆರಂಭಿಸಿ ಮಂಗಳೂರು ವರೆಗೆ ಸಿಕ್ಕುವ ಬಂದರುಗಳು ಯಾವುವೆಂದರೆ: ಮಿರ್ಜಾನ್, ಹೊನ್ನಾವರ, ಭಟ್ಕಳ, ಬಸ್ರೂರು (Bacalore) ಭೈರವೇರ, (Bairavera=ಬ್ರಹ್ಮಾವರವೇ) ಬಾರ್ಕೂರು, ವ್ಡಿಪಿರಂ (Vdipiram) ಉಪ (ಉಡುಪಿ ಅಥವಾ ಉದಯಾವರ) ಮತ್ತು ಮಂಗಳೂರು, ಇವೆಲ್ಲಾ ವ್ಯಾಪಾರದ ಬಂದರುಗಳಾಗಿದ್ದವು. ಹೊನ್ನಾವರದಿಂದ ಅಂಜುದ್ವೀಪದವರೆಗಿನ ಪ್ರದೇಶ ಗರ್ಸೋಪ್ (ಗೇರುಸೊಪ್ಪೆ) ರಾಜನಿಗೆ ಸೇರಿದ್ದು. ಪ್ರಮುಖವಾಗಿ ಹೊನ್ನಾವರ.

ಹೊನ್ನಾವರವು ಶರಾವತಿ ನದಿಯ ಉತ್ತರದ ದಡದಲ್ಲಿ, ಭಟ್ಕಳದ ಉತ್ತರಕ್ಕೆ ಮತ್ತು ಕಾರವಾರದ ದಕ್ಷಿಣಕ್ಕೆ ನೆಲೆಸಿದೆ. ಶರಾವತಿ ನದಿಯು ಗೇರುಸೊಪ್ಪೆಯ ವರೆಗೆ ದೋಣಿಯಾನಕ್ಕೆ ಅವಕಾಶ ಮಾಡಿಕೊಡುತ್ತದೆ. ಗೇರುಸೊಪ್ಪೆಯಿಂದ ಮಲೆನಾಡಿನ ರಸ್ತೆಮಾರ್ಗ ನಿಖರವಾಗಿರು ವುದು ಶಾಸನ ಅಧ್ಯಯನಗಳಿಂದ ತಿಳಿದುಬರುತ್ತದೆ. ಪ್ರಸ್ತುತ ಹೊನ್ನಾವರವನ್ನು ಪ್ರಾಚೀನ ಕಾಲದಲ್ಲಿ ಪೊನ್ನಾವರ ಅಥವಾ ಹೊನ್ನಾವರ ಎಂದು ಕರೆಯಲಾಗುತ್ತಿತ್ತು. ಇದು ಅಕ್ಷರಶಃ ಚಿನ್ನದ ಹಳ್ಳಿ ಎಂದರ್ಥ.[148] ಪ್ರಾಚೀನ ಬಂದರು ಹೊನ್ನಾವರ, ಇದು ಹರಪ್ಪನ್ ಮತ್ತು ಲೋಥಲ್ ಬಂದರಿನೊಂದಿಗೆ ಸಂಪರ್ಕ ಹೊಂದಿದ್ದವು ಎಂದು ರಾವ್ ಸೂಚಿಸುತ್ತಾರೆ.[149] ಈ ಬಂದರು ಪಟ್ಟಣಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಗರು ಈ ಸ್ಥಳದ ಗ್ರಾಫಿಕ್ ವಿವರಣೆಯನ್ನು ನೀಡಿದ್ದಾರೆ. 'ದ-ಪೆರಿಪ್ಲಸ್-ಆಫ್-ಎರಿತ್ರಿಯನ್-ಸೀ'ನಲ್ಲಿ, ಹೊನ್ನಾವರವನ್ನು ನೌರ ಎಂದು ಉಲ್ಲೇಖಿಸಲಾಗಿದೆ. ಈ ಬಂದರಿನ ಗುರುತಿಸುವಿಕೆಯು ವಿವಾದಕ್ಕೆ ಒಳಪಟ್ಟಿರುತ್ತದೆ. ಕೆಲವರು ಇದನ್ನು ಹೊನ್ನಾವರ ಮತ್ತು ಇತರರು ಕೇರಳದ ಕಣ್ಣನೂರು

ಎಂದು ಗುರುತ್ತಿಸುತ್ತಾರೆ. ಆದರೆ ಇತ್ತೀಚಿನ ಹಲವು ಸಂಶೊಧಕರುಗಳಾದ, ರಸ್ಕಿನಾ, ಗುರುರಾಜ್ ಭಟ್, ಪೂನಚ ಮತ್ತು ವಿಶ್ವೇಶ್ವರ, ಸುಂದರ –ಇವರುಗಳು ಹೊನ್ನಾವರ ಎಂದು ಗುರುತಿಸುತ್ತಾರೆ.

ಬಂದರು ಪಟ್ಟಣ ಹೊನ್ನಾವರವನ್ನು ಮುಸಲ್ಮಾನ ಬರಹಗಾರರಾದ, ಅಬುಲ್ ಫಿದಾ, ಮತ್ತು ಡಿಮಿಶ್ಕಿ ಅವರು ಕ್ರಮವಾಗಿ, ಹುನ್ನೂರು ಮತ್ತು ಹೊನ್ನುರು ಎಂದು ಉಲ್ಲೇಖಿಸಿದ್ದಾರೆ. ಇಬನ್ ಬಟೂಟ ಈ ಸ್ಥಳವನ್ನು ಒಳನಾಡಿನಂತೆ ಸೂಚಿಸುತ್ತಾನೆ. ಈ ಸ್ಥಳವು ತನ್ನ ಹೆಸರನ್ನು ಹೊನ್ನಾವರಿ ಎಂಬ ಸಸ್ಯದ ಹೆಸರಿನಿಂದ ಪಡೆದಿರಬಹುದು, ಇದನ್ನು ಕನ್ನಡದಲ್ಲಿ ತೈಜಾಕ್.ಜಿ ಎಂದು ಕರೆಯಲಾಗುತ್ತದೆ.[150] ಶಾಸನವು ಈ ಪ್ರದೇಶವನ್ನು ಹೊನ್ನಾವೂರ ಮತ್ತು ಹೊನ್ನಿನವೂರು ಎಂದು ಉಲ್ಲೇಖಿಸುತ್ತದೆ. ಡಿಮಿಶ್ಕಿ ಪ್ರಕಾರ, ಹೊನ್ನಾವರ ಕರಾವಳಿ ಪ್ರದೇಶದಲ್ಲಿ ನೆಲೆಗೊಂಡಿದೆ. ಇದು ಸುಂದರ ವಾತವರಣವನ್ನು ಹೊಂದಿದೆ. ಬಂದರು ಪಟ್ಟಣ ಚಿಕ್ಕದಾಗಿದೆ. ಮತ್ತು ಸುಂದರವಾಗಿರುತ್ತದೆ. ಎಂದು ಅಬುಲ್ ಫಿದಾ ಹೆಳುತ್ತಾರೆ. ಇಬನ್ ಬಟೂಟ ಪ್ರಕಾರ ಹೊನ್ನಾವರು ಒಂದು ಪ್ರವರ್ಧಮಾನದ ಬಂದರಾಗಿದ್ದು, ದೊಡ್ಡ ವಾಣಿಜ್ಯೋದ್ದೇಶದ ಚಟುವಟಿಕೆಗಳು, ಬಜಾರುಗಳು ಮತ್ತು ಸುಂದರವಾದ ಕಟ್ಟಡಗಳು, ಹೊಂದಿರುವ ದೊಡ್ಡ ಬಂದರು.

ಬಂದರು ಪಟ್ಟಣ ಹೊನ್ನಾವರವು ಹಲವಾರು ನಗರಗಳೊಂದಿಗೆ ರಸ್ತೆಗಳ ಜಾಲದಿಂದ ಸಂಪರ್ಕ ಹೊಂದಿದ್ದು, ಇದು ಘಾಟ್‌ಗಳು ಮತ್ತು ಸರಳ ಪ್ರದೇಶದಲ್ಲಿದೆ. ರಸ್ತೆಯ ಸಂಪರ್ಕವು ಬಂದರಿನೊಂದಿಗೆ ಹೊಂದಿದೆ. ಹೊನ್ನಾವರದ ಬಂದರು ಶರಾವತಿ ನದಿಯ ಉದ್ದಕ್ಕೂ ಗೇರುಸೊಪ್ಪೆಯ ವರೆಗೆ ವಿಸ್ತಾರವಾಗಿರುತ್ತದೆ. ಉತ್ತರದಲ್ಲಿ ಬನವಾಸಿ, ಚಂದ್ರಗುತ್ತಿ, ಹಾನಗಲ್, ಮತ್ತು ಬಂಕಾಪುರವನ್ನು ಸಂಪರ್ಕಿಸುತ್ತದೆ. ಅಲ್ಲಿ ಅದು ಗುತ್ತಿ, ಬೆಳಗಾಂ, ತಾಳಗುಂದ, ಉಚ್ಚಂಗಿದುರ್ಗ, ಹೆಂಜೆರು, ನಿಡುಗಲ್ ಮತ್ತು ಪೆನುಗೊಂಡವನ್ನು ಸಂಪರ್ಕಿಸುವ ದೊಡ್ಡ ರಸ್ತೆಗೆ ಸೇರುತ್ತದೆ. ಇಬನ್ ಬಟೂಟ ಪ್ರಕಾರ, ಈ ಸ್ಥಳದ ಜನರು ಕಡಲ ವ್ಯಾಪಾರದ ಸಹಾಯದಿಂದ ಅವರ ಜೀವನವನ್ನು ಮುನ್ನಡೆಸಿದರು. ಅಂದಿನಿಂದ, ಕರಾವಳಿಯುದ್ದಕ್ಕೂ ಇರುವ ಬಂದರುಗಳು ಮಸಾಲೆಗಳು ಮತ್ತು ಇತರ ಕೃಷಿ ಉತ್ಪನ್ನಗಳಿಗೆ ಪ್ರಸಿದ್ಧವಾಗಿದೆ. ಅವರು ಮೆಣಸು, ಶುಂಠಿ, ಸಕ್ಕರೆ, ಔಷಧೀಯ ಸಸ್ಯಗಳು, ಅಪರೂಪದ ಮರಗಳು ಮತ್ತು ಅರೋಮೆಟಿಕ್ ಸಸ್ಯಗಳಂತಹ ಸರಕುಗಳನ್ನು ರಫ್ತು ಮಾಡಿರಬಹುದು.

ಕುದುರೆಗಳು, ಆನೆಗಳು, ಇತರ ಐಷಾರಾಮಿ ಸರಕುಗಳನ್ನು ಒಳಗೊಂಡಂತೆ ಆಮದುಗಳನ್ನು ಮಾಡಿಕೊಳ್ಳುತ್ತಿದ್ದರು. ಅದು ಈ ಅವದಿಯಲ್ಲಿ ಹೆಚ್ಚಿನ ಬೇಡಿಕೆಯಿತ್ತು.[151] ಹೊನ್ನಾವರವು ಬಹಳ ದೀರ್ಘಕಾಲದವರೆಗೆ ಬಂದರು ಆಗಿತ್ತು. ಇದರ ಒಳನಾಡಿನ ಉತ್ಪನ್ನಗಳು ಅಕ್ಕಿ, ಮೆಣಸು, ಶ್ರೀಗಂಧದ ಮರ, ತೆಂಗಿನಕಾಯಿ, ಕಬ್ಬುಗಳನ್ನು ಉತ್ಪಾದಿಸಿತು. ಡೆಲ್ಲಾವೆಲ್ಲಿ ಪ್ರಕಾರ, ಎರಡು ನದಿಗಳ ತೋಳುಗಳಿಂದ ಅದರ ಕಡಲತೀರವನ್ನು ರಚಿಸಲಾಗಿದೆ. ಇದು ಒಂದು ಕಡೆ ಅರೇಬಿಯಾದೊಂದಿಗೆ ಸಾಗರ ಸಂಪರ್ಕವನ್ನು ಹೊಂದಿತ್ತು, ಮತ್ತೊಂದೆಡೆ ಚೀನಾದೊಂದಿಗೆ ಸಾಗರ ಸಂಪರ್ಕವನ್ನು ಹೊಮದಿತ್ತು. 16ನೇ ಶತಮಾನದ ಮೊದಲ ದಶಕದಲ್ಲಿ, 'ಮಲಬಾರಿಗಳು ಇಲ್ಲಿ ದೊಡ್ಡ ವ್ಯಾಪಾರವನ್ನು ಮಾಡಿಕೊಳ್ಳುತ್ತವೆ. ಇಲ್ಲಿಂದ ಕಪ್ಪು ಅಕ್ಕಿಗಳ ದೊಡ್ಡ ಮಳಿಗೆಯನ್ನು ವಹಿಸಿಕೊಂಡು/ತೆಗೆದುಕೊಂಡು, ಮರಳಿ ತೆಂಗಿನಕಾಯಿ ಮತ್ತು ಎಣ್ಣೆಯನ್ನು ಪಡೆಯಲಾಗುತ್ತಿತ್ತು. ಅಲ್ಲಿ ಪಾಮ್ ಶುಗರ್, ಪಾಮ್ ವೈನ್ ಎಲ್ಲವೂ ಸಮೃದ್ಧವಾಗಿ ದೊರೆಯುತ್ತಿತ್ತು. (ಬಾರ್ಬೊಸಾ) ಕ್ರಿ.ಶ.16ರಿಂದ 18ನೇ ಶತಮಾನದ ತನಕ ಪೋರ್ಚುಗೀಸರು ಮತ್ತು ಇಂಗ್ಲೀಷರ ವ್ಯಾಪಾರ ಕೇಂದ್ರವೂ ಈ ಬಂದರಾಗಿತ್ತು. ಹೊನ್ನಾವರವೂ ಅಕ್ಕಿ, ಮೆಣಸು, ಕಬ್ಬು, ಅಡಿಕೆ, ಇತ್ಯಾದಿ ಕೃಷಿ ವ್ಯಾಪಾರಕ್ಕೆ ಹೆಸರುವಾಸಿಯಾಗಿದೆ.[152]

**ಭಟ್ಕಳ**

ಈ ಬಂದರು ಹೊನ್ನಾವರದ ದಕ್ಷಿಣದಲ್ಲಿ 40 ಕಿ.ಮೀ. ದೂರದಲ್ಲಿ ಕಂಡುಬರುತ್ತದೆ. ಮೊಟ್ಟಮೊದಲಿಗೆ ಈ ಸ್ಥಳ ಗುರುತಿಸಲ್ಪಡುವುದು ಕಾಸ್‌ಮಾಸ್‌ನಿಂದ. ಈ ಮೇಲೆ ಹೇಳಿದಂತೆ ಕಾಸ್‌ಮಾಸ್ ಪರ್ತಿಯನ್ನು ಭಟ್ಕಳವೆಂದು ಗುರುತಿಸಿದ್ದಾನೆ. ನಂತರ 14ನೆಯ ಶತಮಾನದಲ್ಲಿ ಫೈರ್‌ಜೋರ್ಡಾನ್ಸ್, ಡೆಮಿಶ್ಕಿ ಮುಂತಾದವರು ಗುರುತಿಸುತ್ತಾರೆ. ಹಾಗಾಗಿ ಭಟ್ಕಳ ಮಧ್ಯಯುಗೀನ ಕಾಲದಲ್ಲಿ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಭಟ್ಕಳ ಶಾಸನದಲ್ಲಿ ಉಕ್ತವಾಗಿರುವ ಭಟ್ಟಾಕಲಂಕದೇವನಿಂದ ಅದು ಈಗಿನ ಹೆಸರು ಪಡೆದಿತ್ತೆಂದು ನಂಬಲಾಗಿದೆ. ಈತನ ಕಾಲವನ್ನು 9ನೆಯ ಶತಮಾನವೆಂದು ಗುರುತಿಸುವ ಪ್ರಯತ್ನ ನಡೆದಿದೆ. ಆದರೆ ನಗರವನ್ನು 1250-1300ರ ನಡುವೆ ಕಟ್ಟಲಾಗಿದೆ ಎಂದು ರಶ್ಕಿನ್ ಅಭಿಪ್ರಾಯಪಡುತ್ತಾರೆ. ವಿಜಯನಗರ ಕಾಲದಲ್ಲಿ ಭಟ್ಕಳ ಒಂದು ಪ್ರಮುಖ ಬಂದರಾಗಿತ್ತೆಂದು ಎ. ಅಪ್ಪಾದೊರೈ ಗುರುತಿಸುತ್ತಾರೆ. ಆಂತರಿಕವಾಗಿ ಭಟ್ಕಳ ಒಳನಾಡಿನ ವ್ಯಾಪಾರಿ ಕೇಂದ್ರಗಳೊಂದಿಗೆ ಸಂಪರ್ಕ

ಕಲ್ಪಿಸಿಕೊಂಡಿತ್ತು. ಜೊತೆಗೆ ಸಾಗರೋತ್ತರ ವ್ಯಾಪಾರದ ಮುಖ್ಯ ಕೇಂದ್ರವೂ ಆಗಿತ್ತು. ಉತ್ತರದ ಗೋವಾ ಹಾಗೂ ದಕ್ಷಿಣದ ಕೊಚ್ಚಿನ್‌ನಿಂದ ಭಟ್ಕಳಕ್ಕೆ ಸರಕು-ಸಾಮಗ್ರಿಗಳು ಸರಬರಾಜಾಗಿ ಅಲ್ಲಿಂದ ವಿದೇಶಗಳಿಗೆ ರಫ್ತಾಗುತ್ತಿತ್ತು. ಕ್ರಿ.ಶ.16ನೇ ಶತಮಾನದಲ್ಲಿಯೇ ಭಟ್ಕಳ ವಿದೇಶಿ ವ್ಯಾಪಾರದಲ್ಲಿ ಮುಂಚೂಣಿಯಲ್ಲಿದ್ದ ರೇವು ಪಟ್ಟಣವಾಗಿತ್ತು. ಚೌಲ್ ಮತ್ತು ಗೋವಾ ಬಂದರುಗಳನ್ನು ಬಿಟ್ಟರೆ ವಿದೇಶ ವ್ಯಾಪಾರ ವಹಿವಾಟಿನಲ್ಲಿ ಹೆಸರಾಗಿದ್ದದ್ದು ಭಟ್ಕಳ ಪ್ರದೇಶ ಎಂದು ತೋಂಮ್ ಪಿರಾಸ್ ಬಣ್ಣಿಸುತ್ತಾರೆ.[153] ಪೋರ್ಚುಗೀಸ್ ಪ್ರವಾಸಿ ವರ್ದೇಮಾ ದಕ್ಷಿಣ ಭಾರತದ ಅನೇಕ ನಗರಗಳ ವಿವರಣಾತ್ಮಕವಾದ ವರದಿಗಳನ್ನು ನೀಡಿದ್ದಾನೆ. 'ಬತಕಲ (ಭಟ್ಕಳ) ಒಂದು ಸುಂದರವಾದ, ಭದ್ರಕೋಟೆಯಂತೆ ಕಲ್ಲಿನ ಗೋಡೆಯಿಂದ ಸುತ್ತುವರೆದಿದ್ದು, ಒಂದು ಆದರ್ಶ ನಗರವಾಗಿತ್ತು' ಎಂದು ಬಣ್ಣಿಸುತ್ತಾನೆ. ತುಳುನಾಡಿನ ಬಂದರು ಕೇಂದ್ರಗಳು ವಿಜಯನಗರ ಮತ್ತು ಯೂರೋಪಿನ ವರ್ತಕರ ನಡುವೆ ಕುದುರೆ ವ್ಯಾಪಾರದ ಬಿರುಸಿನ ಕೇಂದ್ರಗಳಾಗಿದ್ದವು. 300, 400, 500 ಕೆಲವೊಮ್ಮೆ ಪ್ರತಿ ಕುದುರೆಯ ಬೆಲೆ 800 ಪರ್ದೌಸ್ ಗಳವರೆಗೆ (ವಿಜಯನಗರ ಕಾಲದ ಚಲಾವಣೆಯಲ್ಲಿದ್ದ ಚಿನ್ನದ ನಾಣ್ಯ ಪಗೋಡವಾಗಿತ್ತು. ಪೋರ್ಚುಗೀಸರು ಅದನ್ನು ಪರ್ದೌಸ್ ಎಂದು ಉಚ್ಚರಿಸುತ್ತಿದ್ದರು) ವ್ಯಾಪಾರವಾಗುತ್ತಿದ್ದವು. ಎಂದು ವರ್ದೇಮ ವರದಿಯಲ್ಲಿ ತಿಳಿಸುತ್ತಾನೆ. ಇಲ್ಲಿಂದ ರಫ್ತಾಗುತ್ತಿದ್ದ ಸರಕುಗಳೆಂದರೆ, ಜಿರಿಗೈ ಎಂದು ಕರೆಯಲ್ಪಡುತ್ತಿದ್ದ ಬಿಳಿಅಕ್ಕಿ, ಸಕ್ಕರೆ, ಉಕ್ಕು, ರೇಷ್ಮೆ, ಜೀರಿಗೆ ಮತ್ತು ಕರಿಮೆಣಸು. ಭಟ್ಕಳ ಬಂದರು ಪರ್ಶಿಯಾ ಗಲ್ಫ್ ಹಾಗೂ ಕೆಂಪು ಸಮುದ್ರದ ನಡುವೆ ವ್ಯಾಪಾರ ಸಂಪರ್ಕ ಹೊಂದಿತ್ತು. ಹಾಗೆಯೇ ಅಲ್ಲಿಂದ ಆಮದಾಗುತ್ತಿದ್ದ ಸರಕುಗಳೆಂದರೆ, ತಾಮ್ರ, ಬೆಳ್ಳಿ, ಚಿನ್ನ ಜೊತೆಗೆ ಅರೇಬಿಯಾ ಹಾಗು ಪರ್ಶಿಯಾ ಪ್ರಭೇದದ ಕುದುರೆಗಳು. ಭಟ್ಕಳ ವ್ಯಾಪಾರ ವಹಿವಾಟಿನಲ್ಲಿ ಹಲವಾರು ವರ್ತಕ ಸಮುದಾಯಗಳು ಬಾಗಿಯಾಗಿದ್ದವು, ಅವರಲ್ಲಿ ನವಾಯತ ಮುಸ್ಲಿಮರು, ಕೈರೊ, ಅರೇಬಿಯಾ, ಇರಾಕ್ ಮತ್ತು ಪರ್ಶಿಯಾದಿಂದ ಬಂದು ತಾತ್ಕಾಲಿಕವಾಗಿ ಇಲ್ಲಿ ನೆಲೆಗೊಂಡಿದ್ದ ವರ್ತಕರು, ಸಾರಸ್ವತರು ಹಾಗೂ ಸ್ಥಳೀಯ ಮುಖ್ಯಸ್ಥರ ಆಶ್ರಯ ಪಡೆದಿದ್ದ ಸಣ್ಣ ಪ್ರಮಾಣದ ಜೈನ ವ್ಯಾಪಾರಿಗಳು.[154]

**ಗಂಗೊಳ್ಳಿ (ಕ್ಯಾಂಬೊಲಿಮ್)**

ಇದು ಪಂಚಗಂಗಾವಳಿಯ ಬಾಯಿಯಲ್ಲಿ (ಉತ್ತರದಲ್ಲಿ) ನೆಲೆಗೊಂಡಿದೆ. 17ನೇ ಶತಮಾನದ 3ನೇ ದಶಕದಲ್ಲಿ ಗಂಗೊಳ್ಳಿ ಬಂದರು, ಅಕ್ಕಿ, ಕಬ್ಬು, ತೆಂಗಿನಕಾಯಿ, ಅಡಿಕೆ,

ಗೇರುಬೀಜ ಮತ್ತು ಮೆಣಸುಗಳ ಕೃಷಿ ವ್ಯಾಪಾರ ಕೇಂದ್ರವಾಗಿ ಪ್ರಾಮುಖ್ಯವನ್ನು ಪಡೆದುಕೊಂಡಿತು. ಇದೇ ಶತಮಾನದ 4ನೇ ದಶಕದಲ್ಲಿ, ಪೋರ್ಚುಗೀಸರು ತಮ್ಮ ವ್ಯಾಪಾರ ಕೇಂದ್ರವನ್ನು ಸ್ಥಾಪಿಸಿದರು. ಮತ್ತು ಇಲ್ಲಿಂದ 1500 ಖಂಡಿ ಮೆಣಸನ್ನು ಖರೀದಿಸಲು ನಿರೀಕ್ಷಿಸಲಾಗಿತ್ತು. ಆದರೆ ಕ್ರಿ.ಶ. 1652ರಲ್ಲಿ ಕೆಳದಿ ಶಿವಪ್ಪನಾಯ್ಕನಿಂದ ಹೊರಹಾಕಲ್ಪಟ್ಟರು. ಪೋರ್ಚುಗೀಸರ ಆಗಮನದೊಂದಿಗೆ ಗಂಗೊಳ್ಳಿಯ ಒಳನಾಡಿನ ಪ್ರದೇಶದಲ್ಲಿ ತೆಂಗಿನಕಾಯಿ, ಮೆಣಸು ಮತ್ತು ಕಪ್ಪು ಅಕ್ಕಿ ಹಾಗು ಅನಾನಸಿನ ಬೆಳೆಯುವಿಕೆಯನ್ನು, ತಂಬಾಕು ಮತ್ತು ವಿವಿಧ ಬಗೆಯ ಮಾವಿನಹಣ್ಣಿನ ಬೆಳೆಯುವಿಕೆಯನ್ನು ಹೆಚ್ಚಿಸಿತು.[155] ಇದೊಂದು ಪ್ರಮುಖ ಬಂದರಾಗಿ, ವ್ಯಾಪಾರ ಕೇಂದ್ರವಾಗಿ ಹೊರಹೊಮ್ಮಿತು. ಅಲ್ಲದೇ ಪೋರ್ಚುಗೀಸರು 1630ರಲ್ಲಿ ಗಂಗೊಳ್ಳಿಯನ್ನು ವಶಪಡಿಸಿಕೊಂಡರು. ನಂತರ ಇಲ್ಲಿಂದ 20,000 ಚೀಲಗಳಷ್ಟು ಅಕ್ಕಿಯನ್ನು ಪಡೆಯುತ್ತಿದ್ದರು.[156] ಮಂಗಳೂರು ಬಂದರಿನ ನಂತರ ಇದು ಪ್ರಮುಖ ಬಂದರಾಗಿತ್ತು. ಬಸ್ರೂರಿನ ಬಂದರಿನಲ್ಲಿ ಹೂಳು ತುಂಬಿದ್ದರಿಂದ ಗಂಗೊಳ್ಳಿಯಲ್ಲಿ ಮುಖ್ಯ ವಾಪಾರ ವಹಿವಾಟುಗಳು ನಡೆಯುತ್ತಿದ್ದವು. ಇಲ್ಲಿಂದಲೇ ಎಲ್ಲಾ ರೀತಿಯ ಆಮದು-ರಫ್ತುಗಳು ನಡೆಯುತ್ತಿದ್ದವು. ಜೊತೆಗೆ ಕೃಷಿ ವಸ್ತುಗಳ ಬೆಳವಣಿಗೆಗೆ ಒಳನಾಡಿನಲ್ಲಿ ಹೆಚ್ಚಿನ ಪ್ರೋತ್ಸಾಹ ದೊರೆಯಿತು.

**ಬಸ್ರೂರು**

ಐತಿಹಾಸಿಕ ದಾಖಲೆಗಳ ಪ್ರಕಾರ ಬಸ್ರೂರು ಪಟ್ಟಣದ ಇತಿಹಾಸವನ್ನು 12ನೇ ಶತಮಾನದ ಉತ್ತರಾರ್ಧಕ್ಕೆ ಕೊಂಡೊಯ್ಯಬಹುದು. ಆದರೆ ಕೆಲ ಲೇಖನಗಳಲ್ಲಿ ಇದು ಮಧ್ಯಯುಗೀನ ಕಾಲದ ಪ್ರಮುಖ ಬಂದರೆಂದು ಗುರುತಿಸಲಾಗಿದೆ. ಪ್ಲಿನಿ, ಬಾರ್ಸೆಯೇ ಬಸರೂರೆಂದು ಇಂಪಿರಿಯಲ್ ಗೆಜೆಟಿಯರ್ ಹೇಳುತ್ತದೆ. ಶಾಸನಗಳಲ್ಲಿ ಇದನ್ನು ಬಸುರೆ ಪಟ್ಟಣ, ವಸುಪುರ ಮುಂತಾಗಿ ಗುರುತಿಸಲಾಗಿದೆ. ಅರಬ್ ಯಾತ್ರಿಕರಂತೂ ಈ ಪಟ್ಟಣದ ಹೆಸರನ್ನು ಹಲವಾರು ರೀತಿಯಲ್ಲಿ ಗುರುತಿಸಿದ್ದಾರೆ. ಬರ್‌ಕಲೋರ್, ಬರ್‌ಜಲೋರ್ ಮತ್ತು ಬಾರ್‌ಜೆಲೋರ್ ಈ ಉಲ್ಲೇಖಗಳು ಅರಬ್ ಯಾತ್ರಿಕರು ಬಸ್ರೂರಿಗೆ ನೀಡಿದ ಬೇರೆ ಬೇರೆ ಹೆಸರುಗಳನ್ನು ಸೂಚಿಸುತ್ತವೆ. ಇಬನ್ ಬತೂತ ಈ ಊರನ್ನು ಅಬು ಸರೂರ್ ಎಂದು ಗುರುತಿಸುತ್ತಾನೆ. ಅಬುಲ್ ಫಿದ ಬಸರೂರನ್ನು ಪ್ರಥಮ ಬಾರಿಗೆ ಪೂರ್ಣ ಮತ್ತು ಸರಿಯಾದ

ರೂಪದಲ್ಲಿ ಉಲ್ಲೇಖಿಸುತ್ತಾರೆ. ಬಾರ್ಬೋಸನ ಪ್ರಕಾರ ಇದು ಒಂದು ಪ್ರಮುಖ ಅಕ್ಕಿ ರಫ್ತು ಕೇಂದ್ರವಾಗಿತ್ತು.

ಬಸರೂರು ಅಥವಾ ವಾಸುಪುರ ಅಥವಾ ಬಾರ್ಸೆಲೂರು, ವರಾಹಿ ನದಿಯ (ಪಂಚಗಂಗಾವಳಿಯ ಉಪನದಿಗಳಲ್ಲಿ ಒಂದಾಗಿದೆ) ದಂಡೆಯ ಮೇಲೆ ನೆಲೆಗೊಂಡಿದೆ.[157] ಅರೇಬಿಯಾ, ಪರ್ಷಿಯಾ, ಗ್ರೀಕ್-ರೋಮನ್ ಪ್ರಪಂಚ ಮತ್ತು ಚೀನಾದೊಂದಿಗೆ ಸಾಗರೋತ್ತರ ಸಂಬಂಧವನ್ನು ಹೊಂದಿತ್ತು. ಒಳನಾಡಿನಿಂದ ಉತ್ಪಾದಿಸಲ್ಪಟ್ಟ, ವಿವಿಧ ಬಗೆಯ ಕೃಷಿ ಉತ್ಪನ್ನಗಳೆಂದರೆ, ತೆಂಗಿನಕಾಯಿ, ಮೆಣಸು, ಮತ್ತು ವಿವಿಧ ಬಗೆಯ ಕಬ್ಬು. ಇದು ಮಧ್ಯಯುಗದ ಕಾಲದಲ್ಲಿ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಅರಬ್ ಬರಹಗಾರರು ಮತ್ತು ಇತರರು, ಬಸರೂರನ್ನು ವಿವಿಧ ಹೆಸರುಗಳಿಂದ ಉಲ್ಲೇಖಿಸಲಾಗಿದೆ- ಬಾರ್ಸೆಲೂರು, ಬ್ರಾಜಲೂರ್, ಬಾಸೆಲೂರ್. ಇಬನ್ ಬಟೂಟ ಈ ಸ್ಥಳವನ್ನು ನೋಡಿ ಅಬು-ಸರೂರ್ ಎಂದು ಉಲ್ಲೇಖಿಸಿದ್ದಾರೆ ಹಾಗೂ ಇದು ಕೊಲ್ಲಿಯಲ್ಲಿ ನೆಲೆಗೊಂಡಿದೆ. ಮತ್ತು ಇಲ್ಲಿ ತೆಂಗಿನಕಾಯಿ ಸಮೃದ್ಧವಾಗಿ ದೊರೆಯುತ್ತದೆ. ಬಸ್ರೂರಿನಿಂದ ಅಕ್ಕಿಯು ಏಡನ್‌ಗೆ ರಫ್ತಾಗುತ್ತಿತ್ತೆಂದು ತಿಳಿಸಲಾಗಿದೆ.[158] ಹೊಸಪಟ್ಟಣವೆಂದು ಬಸ್ರೂರನ್ನು 12ನೇ ಶತಮಾನದಲ್ಲಿ ಕರೆಯಲಾಗುತ್ತಿತ್ತು. ಆನಂತರ ಶಾಸನಗಳಲ್ಲಿ ಬಸ್ರೂರು ಎಂದು ಉಲ್ಲೇಖವಿದೆ. ಇಲ್ಲಿ ನಖರ, ಹಂಜುಮಾನ, ಸೆಟ್ಟಿಗಳು, ಹಲರು, ಗೌಡಸಾರಸ್ವತ ವ್ಯಾಪಾರಸ್ಥರಿದ್ದರು. ಹಾಗೂ ಸುಂಕವನ್ನು ವಸೂಲಿ ಮಾಡಲಾಗುತ್ತಿತ್ತು.[159] ಇಲ್ಲಿ ಪಾಯಿದೋಣಿ, ಮಂಜಿ, ಪಟ್ಟಲ್, ಮಾರಗಳ ಮುಖಾಂತರ, ಅರಬ್ಬರು, ಮಾಪಿಳ್ಳೆಯವರು, ದ್ವೀಪವಾಸಿಗಳು, ಮಲಯಾಳಿಗಳು ವ್ಯಾಪಾರ ನಡೆಸುತ್ತಿದ್ದರು. (16ನೇ ಶತಮಾನದ ಪ್ರಾರಂಭದಲ್ಲಿ ಅಕ್ಕಿ ವ್ಯಾಪಾರ ಹಾಗೂ ರಫ್ತು ಹೆಚ್ಚಿನ ಪ್ರಮಾಣದಲ್ಲಿ ಮಾಡುತ್ತಿದ್ದರು.) 12ನೇ ಶತಮಾನದಿಂದ ಇಲ್ಲಿ ವಿದೇಶಿ ವ್ಯಾಪಾರ ಸಂಪರ್ಕವಿತ್ತು. ಇಲ್ಲಿಂದ ತೆಂಗಿನಕಾಯಿ, ತಾಳೆಮರ, ಲವಂಗ, ದಾಲ್ಚೀನಿ ಮತ್ತು ಅಕ್ಕಿ ರಫ್ತಾಗುತ್ತಿತ್ತು. ಅದರಲ್ಲೂ ಅರಬ್ಬರು[160] ಈ ಸರಕುಗಳನ್ನು ಪಡೆಯಲು ಆಸಕ್ತರಾಗಿದ್ದರು. ಚೀನಿಯರು ಇಲ್ಲಿ ಸಿಗುವ ಕಬ್ಬನ್ನು[161] ಪಡೆದುಕೊಳ್ಳುತ್ತಿದ್ದರು. ಬಸ್ರೂರಿನಲ್ಲಿ ಹಲವಾರು ರೀತಿಯ ಅಕ್ಕಿ ವ್ಯಾಪಾರ ಮಾಡುತ್ತಿದ್ದರು. ಉದಾಹರಣೆಗೆ ಕಣ್ವಅಕ್ಕಿ, ಗುಲ್ವಾಡಿಅಕ್ಕಿ, ಜಿರಸಾಲೆ ಅಕ್ಕಿಯನ್ನು ಅರಬ್ ದೇಶಗಳಿಗೆ ರಫ್ತು ಮಾಡುತ್ತಿದ್ದರು. ಮಂಡಿಕೇರಿಗಳಲ್ಲಿ ಭತ್ತವನ್ನು ಕುಟ್ಟಿ, ಕೇರಿ, ಭತ್ತದ ಹುಲ್ಲಿನಲ್ಲಿ 'ಫನೆಗಾ' ಎಂಬ ಮೂಡೆಕಟ್ಟಿ ಮಲಬಾರಿಗೆ ಕಳುಹಿಸುತ್ತಿದ್ದರು.

ಜೊತೆಗೆ ಬೇರೆಬೇರೆ ಪ್ರದೇಶಗಳಿಗೆ ಅಕ್ಕಿಯನ್ನು ತೆಗೆದುಕೊಂಡು ಹೋಗುತ್ತಿದ್ದರು, ಅದು ಕಲ್ಲಿಕೋಟೆ, ಕಣ್ಣನೂರು, ಓರ್ಮುಜ್‌ಗೆ.[162] ಓರ್ಮುಜ್ ಮತ್ತು ಏಡನ್‌ಗಳಿಂದ ವ್ಯಾಪಾರಿಗಳು ತಮ್ಮ ಮಚುವೆಗಳ ಮೂಲಕ ಅಕ್ಕಿ ವ್ಯಾಪಾರಕ್ಕಾಗಿ, ಮಲಬಾರಿಗಳು, ತಾಮ್ರ, ತೆಂಗಿನಕಾಯಿ, ಬೆಲ್ಲ, ಕೊಬ್ಬರಿಎಣ್ಣೆಗಳನ್ನು ಇಲ್ಲಿ ತಂದು ವ್ಯಾಪಾರ ನಡೆಸುತ್ತಿದ್ದರು. ಜೊತೆಗೆ ಓರ್ಮುಜ್‌ನಿಂದ ಕುದುರೆ ಆಮದು ಆಗುತ್ತಿತ್ತು. ಅಕ್ಕಿ, ಕರಿಮೆಣಸು, ತೆಂಗಿನಕಾಯಿ, ಕಬ್ಬುಗಳು ಇಲ್ಲಿಂದ ರಫ್ತಾಗುತ್ತಿದ್ದವು. ಬಸ್ರೂರು ಬಂದರಿನ ರಚನೆಯು ಸಾಗರೋತ್ತರ ವ್ಯಾಪಾರಕ್ಕೆ ಅನುಕೂಲ ಮಾಡಿಕೊಟ್ಟಿತು. ದೋಣಿ, ಮಂಜಿ, ಮತ್ತು ಹಾಯ್ ಮಲಬಾರಿನಿಂದ ಬರುವ ಹಡಗುಗಳಿಗೆ ಅನುಕೂಲಮಾಡಿಕೊಟ್ಟಿತು. ಬಸ್ರೂರಿನ ವ್ಯಾಪಾರಿಗಳು ಹತ್ತಿರದ ಗಂಗೊಳ್ಳಿ ಬಂದರಿನ ಮೇಲೂ ಹಿಡಿತವನ್ನು ಸಾಧಿಸಿದ್ದರು. ನಂತರ ಇಲ್ಲಿ ಕರಿಮೆಣಸಿನ ವ್ಯಾಪಾರ ಹೆಚ್ಚಾಗತೊಡಗಿದುದನ್ನು ಗಮನಿಸಿದ ಪೋರ್ಚುಗೀಸರು ಇದನ್ನು ತಮ್ಮ ನಿಯಂತ್ರಣಕ್ಕೆ ಪಡೆದುಕೊಳ್ಳಬೇಕೆಂದು ಹವಣಿಸುತ್ತಿದ್ದರು.[163] ಘಟ್ಟದ ಅಂಚಿನಲ್ಲಿದ್ದ ಹೊನ್ನೆಕಂಬಳಿಯರಸರು ಮತ್ತು ಸುರಾಲಿನ ತೋಳಹರು ವಿದೇಶೀ ವ್ಯಾಪಾರಗಳನ್ನು ನಡೆಸಿಕೊಳ್ಳುತ್ತಿದ್ದರು[164]. ಫ್ರೆಂಚ್ ಪ್ರವಾಸಿಗ ತಿರ್ದಾರ್ನ ವರದಿಯಂತೆ, (ಕ್ರಿ.ಶ. 1600 ರಲ್ಲಿ ಮಲಬಾರ್ ಕರಾವಳಿಗೆ ಬಂದವನು) ಬಸರೂರು ವ್ಯಾಪಾರ ಮಾಲ್ಡೀವ್ ದ್ವೀಪಗಳವರೆಗೆ ಸಾಗಿತ್ತು. ಈ ದ್ವೀಪಗಳಿಗೆ ವ್ಯಾಪಾರ ನಡೆಸಲು ಹೊನ್ನಾವರ, ಬಸರೂರು, ಬಾರ್ಕೂರುಗಳಿಂದ ಹೆಚ್ಚಿನ ಸಂಖ್ಯೆಯ ವರ್ತಕರು ಹೋಗುತ್ತಿದ್ದರೆಂದು ತಿಳಿಸಿದ್ದಾನೆ.

ಅಲ್ಲದೇ ಇಲ್ಲಿನ ವ್ಯಾಪಾರಿಗಳು ಸ್ವಲ್ಪ ಮಟ್ಟಿಗೆ ಸ್ವತಂತ್ರರಾಗಿದ್ದು, ಬಸ್ರೂರಿನ ಆಡಳಿತ ನಡೆಸುತ್ತಿದ್ದರು. ವಾರ್ಷಿಕವಾಗಿ ನಿರ್ದಿಷ್ಟ ಹಣವನ್ನು ವಿಜಯನಗರದ ಅರಸರಿಗೆ ಕೊಟ್ಟು, ವಾಣಿಜ್ಯ ವ್ಯಾಪಾರ ನಡೆಸುವಲ್ಲಿ ಸ್ವತಂತ್ರರಾಗಿದ್ದರು. ಹಡಗುಗಳು ನಿರಂತರವಾಗಿ ಬಸ್ರೂರು ಬಂದರಿಗೆ ಬಂದು ತಲುಪುತ್ತಿದ್ದವು. ಇದೊಂದು ಪ್ರಮುಖ ವ್ಯಾಪಾರ ಕೇಂದ್ರವೂ ಆಗಿತ್ತು. ಅಲ್ಲದೇ ಪ್ರಮುಖ ಪಟ್ಟಣಗಳಲ್ಲಿ ಒಂದಾಗಿದೆ.[165] ಅಲ್ಲದೇ, ಕ್ರಿ.ಶ. 1510ರ ಗೋವೆಯ ಪೋರ್ಚುಗೀಸ್ ವೈಸರಾಯ್ ಆಫಾನ್ಸೋ ಅಲ್ಬುಕರ್ಕ ಬಸ್ರೂರು ರೇವಿನ ಮಹತ್ವವನ್ನು ತಿಳಿದಿದ್ದನು. ಕ್ರಿ.ಶ. 1525ರಲ್ಲಿ ಬಸ್ರೂರಿಗೆ ಪೋರ್ಚುಗೀಸರ ಆಗಮನವಾಯಿತು. ಇವರ ನಾವಿಕ ಸಿಯಾಮೊ ಮಿನೆಜಸ್ ಪೋರ್ಚುಗೀಸರ ದೊರೆಯ ಆಜ್ಞೆಯಂತೆ ಇಲ್ಲಿಗೆ ಬಂದು ಇಲ್ಲಿಯ ವರ್ತಕರಿಂದ ಅಕ್ಕಿಯನ್ನು ಪಡೆದನು. ಇದಕ್ಕೆ ಪ್ರತಿಯಾಗಿ ಅರಸನು ಇಲ್ಲಿಯ

ವರ್ತಕರಿಗೆ ಸುಂಕವನ್ನು ವಿನಾಯಿತಿಗೊಳಿಸುವಂತೆ ಆಶ್ವಾಸನೆಯನ್ನು ಇತ್ತನು. ಹಾಗೂ ಇಲ್ಲಿ ಬರುವ ಹಡಗುಗಳಿಗೆ ರಕ್ಷಣೆಯನ್ನು ಪೋರ್ಚುಗೀಸರು ನೀಡಲು ಒಪ್ಪಿದರು.[166] ಕ್ರಿ.ಶ. 1569ರ ವರೆಗೆ ಪೋರ್ಚುಗೀಸರ ವ್ಯಾಪಾರ ಬಸ್ರೂರಿನಲ್ಲಿ ಸುಗಮವಾಗಿ ಸಾಗಿತು. ಜೊತೆಗೆ ಇಲ್ಲಿನ ವ್ಯಾಪಾರಸ್ಥರೊಂದಿಗೆ ಸಂಬಂಧ ಉತ್ತಮವಾಗಿತ್ತು. ಈ ವರ್ತಕರು ನಿರ್ದಿಷ್ಟ ಪ್ರಮಾಣದ ಅಕ್ಕಿಯನ್ನು ಪೋರ್ಚುಗೀಸರಿಗೆ ನೀಡುತ್ತಿದ್ದರು. ಇದನ್ನು ಪೋರ್ಚುಗೀಸ್ ದಾಖಲೆಗಳು ಕಪ್ಪವೆಂದು ಗುರ್ತಿಸುತ್ತವೆ. ಆದರೆ ನಂತರದ ದಿನಗಳಲ್ಲಿ ಇಲ್ಲಿನ ವ್ಯಾಪಾರದ ಪರಿಸ್ಥಿತಿ ಬದಲಾಯಿತು. ಕ್ರಿ.ಶ. 1569ರ ನಂತರ ಪೋರ್ಚುಗೀಸರು ವ್ಯಾಪಾರದಲ್ಲಿ ಲೂಟಿ ಪ್ರಾರಂಭಿಸಿದರು. ಕೆಳಬಸ್ರೂರನ್ನು ವಶಪಡಿಸಿಕೊಂಡು (ಈಗ ಅದು ಕುಂದಾಪುರದಲ್ಲಿದೆ) ಮತ್ತು ಮೇಲ್ ಬಸ್ರೂರಿನ ಕೋಟೆಯನ್ನು ಭದ್ರಗೊಳಿಸಿದರು. ಇಲ್ಲಿನ ವ್ಯಾಪಾರಸ್ಥರನ್ನು ಹೆದರಿಸಿ ಅತ್ಯಂತ ಕಡಿಮೆ ಬೆಲೆಗೆ ಅಕ್ಕಿಯನ್ನು ಪಡೆದುಕೊಂಡರು. ಹಾಗೆಯೆ ನಂತರದ ದಿನಗಳಲ್ಲಿ ಇಲ್ಲೊಂದು ಸುಂಕಠಾಣೆಯನ್ನು ಸ್ಥಾಪಿಸಿ, ಆಮದು-ರಫ್ತುಗಳ ಸುಂಕದ ಹಣವನ್ನು ಪಡೆಯುತ್ತಿದ್ದರು. ಕ್ರಮೇಣ ವ್ಯಾಪಾರವು ಕೇವಲ ಅಕ್ಕಿಗೆ ಸೀಮಿತವಾಗಿರದೇ, ಮೆಣಸು, ಆಹಾರ ಸಾಮಗ್ರಿಗಳಿಗೂ ವಿಸ್ತರಿಸಿತು. ಇವರ ಪಾಂಗಸ್ (ಬೆಳ್ಳಿ) ಮತ್ತು ಪಾರ್ಡೊಸ್ (ಚಿನ್ನ) ನಾಣ್ಯಗಳು ಚಲಾವಣೆಗೆ ಬಂದವು.[167]

**ಬಾರಕೂರು**

ಸೀತಾನದಿ ದಂಡೆಯ ಮೇಲೆ ಕಂಡುಬರುವ ಬಾರಕೂರು ಉಡುಪಿಯಿಂದ ಉತ್ತರಕ್ಕೆ 16 ಕಿ.ಮೀ. ದೂರದಲ್ಲಿದೆ. ಪ್ರಾರಂಭಿಕ ದಿನಗಳಲ್ಲಿ ಇದು ಸಮುದ್ರ ತೀರದಲ್ಲಿದ್ದಂತೆ ತಿಳಿದು ಬರುತ್ತದೆ. ಆದರೆ ಇಂದು ತೀರದಿಂದ 4 ಕಿ.ಮೀ. ಒಳಗಿದೆ.ಈ ಪಟ್ಟಣ ಸಹ 12ನೆಯ ಶತಮಾನದ ಆಳುಪರ ರಾಜಧಾನಿಯಾಗಿತ್ತೆಂದು ತಿಳಿದು ಬರುತ್ತದೆ. ಹೊಯ್ಸಳರ ಕಾಲದಲ್ಲಿ ಇದು ಅವರ ಆಳ್ವಿಕೆಗೆ ಒಳಪಟ್ಟಿದ್ದನ್ನು ಕೆ.ವಿ.ರಮೇಶ್ ಉಲ್ಲೇಖಿಸಿದ್ದಾರೆ. 13ನೆಯ ಶತಮಾನದ ಕಾಲದಲ್ಲಿ ಇದು ಪ್ರಮುಖ ಕೇಂದ್ರವಾಗಿತ್ತು. ಬಾರಕೂರು ಶಾಸನಗಳಲ್ಲಿ ಎರಡು ರೀತಿಯಲ್ಲಿ ಉಲ್ಲೇಖವಾಗಿದೆ. ಮಧ್ಯಯುಗೀನ ಶಾಸನಗಳಲ್ಲಿ ಬಾರಹಾಕನ್ಯಾಪುರ ಎಂದು ಮತ್ತು ವಿಜಯನಗರದ ಶಾಸನಗಳಲ್ಲಿ ಬಾರಕೂರು ಎಂದು ಗುರುತಿಸಲ್ಪಡುವ ಈ ಗ್ರಾಮವನ್ನು ಅರಬ್ ಯಾತ್ರಿಕರು ಫಾಕ್‌ನೂರು ಎಂದು ಗುರುತಿಸಿದ್ದಾರೆ. ಯಾಖ್‌ದ್ ಮತ್ತು ಡೆಮಿಶ್ಕಿ ಇದು ಮೆಣಸಿಗೆ ಹೆಸರಾಂತ ನಗರವಾಗಿತ್ತೆಂದು ಹೇಳುತ್ತಾರೆ. ಬಾರಕೂರು ಹೊಯ್ಸಳರ

ಎಲ್ಲೆಯಾಗಿತ್ತೆಂದು ಡೆರೆಟ್ ಗುರುತಿಸುತ್ತಾರೆ. 3ನೆಯ ಬಲ್ಲಾಳ ಆಳುಪ ರಾಜಕುಮಾರಿ ಚಿಕ್ಕಾಯಿ ತಾಯಿಯನ್ನು ವಿವಾಹವಾಗಿದ್ದನು. ಅಂದ ಮೇಲೆ ಹೊಯ್ಸಳರ ಕಾಲದಲ್ಲಿ ಇದು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು.

ಬಾರಕೂರು ಈ ಹೆಸರಿನ ಮೂಲರೂಪ 'ಬರಕನೂರು'. ಈ ಬರಕನೂರೆಂಬ ಹೆಸರು ಸು. ಕ್ರಿ.ಶ. 10ನೇ ಶತಮಾನದಷ್ಟು ಪ್ರಾಚೀನವೆಂದು ಅಭಿಪ್ರಾಯಪಡುತ್ತಾರೆ.[168]. ಕ್ರಿ.ಶ. 12ನೇ ಶತಮಾನದಲ್ಲಿ ಈ ಹೆಸರು ಬಾರಹಕನ್ಯಾಪುರವೆಂದು ಶಾಸನಗಳಿಂದ ತಿಳಿದುಬರುತ್ತದೆ. ಬಾರಕೂರಿನಲ್ಲಿ ಹಲವಾರು ಶಾಸನಗಳು ದೊರಕಿವೆ. ಇವುಗಳು ಕ್ರಿ.ಶ. 10ನೇ ಶತಕದಿಂದ ಕ್ರಿ.ಶ. 16ನೇ ಶತಕದವರೆಗಿನ ತುಳುನಾಡ ಇತಿಹಾಸಕ್ಕೆ ಮೂಲವಸ್ತುವನ್ನು ಒದಗಿಸುತ್ತವೆ. ಕ್ರಿ.ಶ. 12ನೇ ಶತಮಾನಕ್ಕೆ ಬಾರಕೂರು ದೊಡ್ಡ ಪಟ್ಟಣವಾಗಿ ಬೆಳೆದಿದೆ. ಇಲ್ಲಿ ಹಲರ ಮತ್ತು ಸೆಟ್ಟಿಕಾರರ ಸಮಿತಿಯೂ ಇದ್ದುದು ತಿಳಿದುಬರುತ್ತದೆ. ದಕ್ಷಿಣ ಭಾರತದ 28 ಪ್ರಮುಖ ಕೇಂದ್ರಗಳಲ್ಲಿ ತುಳುನಾಡಿನ ಹೊನ್ನಾವರ, ಭಟಕಳ, ಬಾರಕೂರು ಮತ್ತು ಮಂಗಳೂರುಗಳನ್ನು ಹೆಸರಿಸುತ್ತದೆ. ಇವುಗಳು ಒಂದು ರೀತಿಯಲ್ಲಿ ಅಂತಃಸಂಬಂಧಗಳನ್ನು ಹೊಂದಿವೆ ಏಕೆಂದರೆ, ಪ್ರಮುಖ ವ್ಯಾಪಾರ ಕೇಂದ್ರಗಳೇ ಮುಖ್ಯ ಬಂದರು ಪಟ್ಟಣಗಳಾಗಿವೆ. ಆಳುಪರು, ಮತ್ತು ವಿಜಯನಗರಕಾಲದಲ್ಲಿ ಉಪರಾಜಧಾನಿಗಳಾಗಿತ್ತು. ವಿಜಯನಗರ ಕಾಲದಲ್ಲಿ ಮಂಗಳೂರು ಮತ್ತು ಬಾರಕೂರು ಎಂಬ ಎರಡು ಪ್ರತ್ಯೇಕ ರಾಜ್ಯಪಾಲರಿಂದ ಆಳಲ್ಪಡುತ್ತಿತ್ತು. ಇವರ ಕಾಲದಲ್ಲಿ ಇಲ್ಲಿನ ಬಂದರು ವಿಶೇಷವಾದ ಕಾರ್ಯನಿರ್ವಹಿಸುತ್ತಿತ್ತು. ಘಟ್ಟದ ಮೇಲಿನ ಪ್ರದೇಶಗಳಿಗೂ ತುಳುನಾಡಿಗೂ ವಿಶೇಷರೀತಿಯ ವ್ಯಾವಹಾರಿಕ ಹಾಗೂ ಆರ್ಥಿಕ ಸಂಬಂಧ ಉಂಟಾಯಿತು. ಬಾರಕೂರು ಧರ್ಮದ ಆಗರವಾಗಿತ್ತು. ಕ್ರಿ.ಶ. 8ನೆ ಶತಮಾನದಿಂದಲೂ ಶೈವಮತ, ವೈಷ್ಣವಮತ ಚಾಲ್ತಿಯಲ್ಲಿತ್ತು. ಜೈನಮತವು ಎಂದಿನಿಂದ ಇಲ್ಲಿ ಪ್ರಾರಂಭವಾಯಿತೆಂದು ನಿರ್ದಿಷ್ಟವಾಗಿ ಗುರ್ತಿಸುವುದು ಕಷ್ಟ, ಇಲ್ಲಿ ದೊರಕಿದ ಅವಶೇಷಗಳನ್ನು ಆಧರಿಸಿ ನಿರ್ಧರಿಸುವುದಾದರೆ ಕ್ರಿ.ಶ. 13ನೇ ಶತಮಾನಕ್ಕೆ ಅದು ಪ್ರವರ್ಧಮಾನಕ್ಕೆ ಬಂದಿತೆನ್ನಬಹುದು.[169]

ಬಾರಕೂರಿನಲ್ಲಿ ಎಲ್ಲಾ ವರ್ಗದ ವ್ಯಾಪಾರಸ್ಥರು ನೆಲೆನಿಂತಿದ್ದರು. ಜೊತೆಗೆ ಜೈನಧರ್ಮವನ್ನು ಕೂಡಾ ಕ್ರಿ.ಶ. 14ನೇ ಶತಮಾನದ ವೇಳೆಗೆ ಕಾಣಬಹುದು. ಉದಾಹರಣೆಗೆ ಪಾರ್ಶ್ವನಾಥ ಬಸದಿ (ಮೂಡುಕೇರಿ) ಇಲ್ಲಿ ವ್ಯಾಪಾರಸ್ಥರ ಸಂಘಗಳನ್ನು ಗುರ್ತಿಸಬಹುದು.

ಮಹಾಯೋಧ ಮರಕಾಳ ತಿಳಿಸಿರುವಂತೆ, ಹುಂಚದ ತಾಮ್ರಶಾಸನ ಉಲ್ಲೇಖಿಸಿದಂತೆ, ವ್ಯಾಪಾರ ಸಂಘದ ಮುಖ್ಯಸ್ಥ ಹಂಜುಮಾನರಾಗಿದ್ದರು. ಈ ಸಮಯದಲ್ಲಿ ಬಾರಕೂರಿನ ವ್ಯಾಪಾರ ಮತ್ತು ವಾಣಿಜ್ಯ ಕೇತ್ರವನ್ನು ನೋಡಿಕೊಳ್ಳುತ್ತಿದ್ದರು. ಬಾರಕೂರಿನಲ್ಲಿ ಸಂಘದ ಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ. ಇಲ್ಲಿನ ವ್ಯಾಪಾರ ಸಂಘದ ಮುಖ್ಯಸ್ಥರಾದ ಹಂಜುಮಾನರು ವಿದೇಶೀ ಸರಕುಗಳನ್ನು ವ್ಯವಹರಿಸುತ್ತಿದ್ದರು. ಹೀಗಾಗಿ ಇತರ ದೇಶಗಳ ವ್ಯಾಪಾರಿಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದರು.[170] ಇಲ್ಲಿ ಬೇರೆಬೇರೆ ವ್ಯಾಪಾರ ಸಂಘಗಳು ನೆಲೆಸಿದ್ದವು. ನಖರ, ನಾಯರಮೂಲ, ಹಲರು ಅಥವಾ ಹತ್ತುಕೇರಿ (ಬಾರಕೂರು), ಹಂಜುಮಾನರು, ಸೆಟ್ಟಿಕಾರರು, ಎಳಮೆಗಾರರು, ಗಾರ್ವೆಗಳು.[171]

ಕ್ರಿ.ಶ. 11 ಮತ್ತು 12ನೇ ಶತಮಾನದಲ್ಲಿ ಆಳುಪರ ರಾಜಧಾನಿಯಾಗಿತ್ತು.[172] ಹಾಗೂ ಹೊಯ್ಸಳರ 3ನೇ ಬಲ್ಲಾಳನ ಕಾಲದಲ್ಲಿ ಇದು ಉಪರಾಜಧಾನಿ,[173] (ಸಬ್ಸಿಡೈರಿ) ಅರಬ್ ಬರಹಗಾರರು ಮತ್ತು ಇಬನ್ ಬಟೂಟ ಈ ಸ್ಥಳಕ್ಕೆ 'ಫಾಕನೂರು' ಎಂದು ಗುರ್ತಿಸಿದ್ದಾರೆ.[174] ಇದೊಂದು ಪ್ರಮುಖವಾದ ನಗರವಾಗಿತ್ತು. ಡಿಮಿಶ್ಕಿಯ ಪ್ರಕಾರ ಇದು ಹೊನ್ನಾವರದ ದಕ್ಷಿಣ ಭಾಗದಲ್ಲಿ ನೆಲೆಸಿದೆ. ಮತ್ತು ಮೆಣಸಿಗೆ ಹೆಸರುವಾಸಿಯಾಗಿದೆ. ಹಾಗೂ ಬಟೂಟ ಕೂಡ ಈ ಸ್ಥಳದ ಬಗ್ಗೆ ಉಲ್ಲೇಖಿಸಿದ್ದಾನೆ. ಅವನ ಪ್ರಕಾರ ಇದು ದೊಡ್ಡ ಕೊಲ್ಲಿ ಪ್ರದೇಶದಲ್ಲಿ ನೆಲೆಗೊಂಡಿದೆ ಮತ್ತು ಈ ಪ್ರದೇಶದಲ್ಲಿ ಕಬ್ಬು ಹೇರಳವಾಗಿ ದೊರೆಯುತ್ತದೆ. ಬಾರಕೂರಿನ ಘಾಟ್ ರಸ್ತೆಯನ್ನು ಸಾಮ್ರಾಜ್ಯಶಾಹಿ ಹೊಯ್ಸಳ ಸಾಮ್ರಾಜ್ಯದ ಗಡಿರೇಖೆಯೆಂದು ಹೆಚ್ಚಾಗಿ ಉಲ್ಲೇಖಿಸಲಾಗಿದೆ.[175]. ಮಧ್ಯಯುಗೀನ ಕಾಲದಲ್ಲಿ ಈ ಪ್ರದೇಶ ಪ್ರಮುಖವಾದ ಬಂದರುನಗರವಾಗಿತ್ತು. ವಿಜಯನಗರ ಕಾಲದಲ್ಲಿ ಅವರ ಉಪರಾಜಧಾನಿ ಕೂಡ ಆಗಿತ್ತು. ವಾಣಿಜ್ಯ ಚಟುವಟಿಕೆಯಲ್ಲಿ ಭಾರಿ ಹೆಚ್ಚಳ ಕಂಡುಬಂದಿದೆ. ಈ ಬಂದರು ಮತ್ತು ಪ್ರಾಂತೀಯ ರಾಜಧಾನಿಗೆ, ವೀದೇಶಿ ಹಡಗುಗಳು ಬರತೊಡಗಿದವು ಮತ್ತು ದಪ್ಪ ಅಕ್ಕಿಯನ್ನು ತೆಗೆದುಕೊಳ್ಳಲು ಮಲಬಾರಿನಿಂದ ಹಡಗುಗಳು ಬರತೊಡಗಿದವು. ಇಲ್ಲಿಂದ ಓರ್ಮಜ್, ಏಡನ್, ಕಣ್ಣನೂರು ಮತ್ತು ಕಲ್ಕತ್ತಾಗೆ ತಾಮ್ರ, ತೆಂಗಿನಕಾಯಿ ಮತ್ತು ಕಾಕಂಬಿಯನ್ನು ವಿತರಿಸಲಾಯಿತು. ಇದರ ವಿವರಣೆಯನ್ನು ಡ್ಯುರೆಟ್ ಬಾರ್ಬೊಸಾ ನೀಡಿದ್ದಾನೆ.[176]. ಈ ಬಂದರಿನ ಮುಖಾಂತರ ಮೆಣಸು ಪ್ರಮುಖವಾಗಿ ರಫ್ತಾಗುವ ಸರಕುಗಳಲ್ಲಿ ಒಂದಾಗಿದೆ.[177] ಇಲ್ಲಿನ ಸ್ಥಳಿಯ ವ್ಯಾಪಾರಸ್ಥರು ಕೇವಲ ಆಮದು-ರಫ್ತು

ವ್ಯಾಪಾರದಲ್ಲಿ ತೊಡಗುವುದರ ಜೊತೆಗೆ ಸ್ವತಃ ತಾವೇ ಸರಕುಗಳ ಉತ್ಪಾದನೆಯಲ್ಲಿ ತೊಡಗಿದ್ದರು, ಸಿಲೋನ್ ಮತ್ತು ಇತರ ಪೂರ್ವದೇಶಗಳಿಂದ ಆಮದು ಮಾಡಿಕೊಳ್ಳು ತ್ತಿದ್ದರು.[178] ರಫ್ತುಸರಕುಗಳಲ್ಲಿ, ಎಲೋನ್, ತಬಶೀರ್ ಮುಂತಾದ ಕೆಲವು ಔಷಧೀಯ ಉದ್ದೇಶಗಳನ್ನು ಹೊಂದಿರುವ ಈ ವಸ್ತುಗಳನ್ನು ಪೂರೈಸಲಾಗುತ್ತಿತ್ತು. ಈ ಯಾಕುತ್ ಮತ್ತು ಕುಜ್ವಿನಿಯವರು ಸೈಮೂರ್ ಎಲೋಸ್ ಸಿಟಿ ಬಗ್ಗೆ ತಿಳಿಸಿದ್ದಾರೆ. ಈ ಸ್ಥಳವನ್ನು ಕೆಲವು ವಿದ್ವಾಮಸರು ಬಾರ್ಕೂರು ಬಳಿ ಇರುವ ಶಿರೂರು ಎಂದು ಗುರ್ತಿಸಿದ್ದಾರೆ.[179]

ಇಬನ್ ಬಟೂಟ ಕೂಡಾ ಬಾರ್ಕೂರು ಬಂದರನ್ನು ಉಲ್ಲೇಖಿಸುತ್ತಾನೆ. ಆದರೆ ಅದನ್ನು ಬಾಕಾನೊರ್ ಅಥವಾ ಫಾಕನೂರು ಎಂದು ಕರೆಯುತ್ತಾನೆ. ಅವನು ಇಲ್ಲಿ ಮುಸಲ್ಮಾನ ಕಾಲೋನಿಯನ್ನು ನೋಡುತ್ತಾನೆ. ಅವರು ವ್ಯಾಪಾರವನ್ನು ತಮ್ಮ ಮುಖ್ಯ ಉದ್ಯೋಗವಾಗಿ ಸ್ವೀಕರಿಸಿದ್ದಾರೆಂದು ತಿಳಿಸಿದ್ದಾನೆ. ನಿಕೋಲೊ ಕಾಂಟಿ, ಪಚಮುರಿಯ ಸಹ ಬಾರ್ಕೂರು ಬಂದರಿಗೆ ಬಂದಿದ್ದಾರೆ.[180] ಡೊಮಿಂಗೊ ಪೆಸ್ ನೀಡಿದ ವಿಜಯನಗರ ಸಾಮ್ರಾಜ್ಯದ ವಿವರಣೆಯಿಂದ ನಾವು ಬಾರ್ಕೂರು ಪ್ರವರ್ಧಮಾನಕ್ಕೆ ಬಂದ ಬಂದರುಗಳಲ್ಲಿ ಒಂದಾಗಿದೆ. ಇಲ್ಲಿ ಪೋರ್ಚುಗೀಸ್ ಕಾರ್ಖಾನೆಯನ್ನು ಹೊಂದಿತ್ತು.[181] 16ನೇ ಶತಮಾನದ ಮೊದಲಭಾಗದಲ್ಲಿ ಪೋರ್ಚುಗೀಸ್ ಪ್ರಯಾಣಿಕನಾಗಿದ್ದ ಟೋಮ್ ಪಿರೇಸ್ ನೀಡಿದ ವಿವರಣೆಯಲ್ಲಿಯೂ ಸಹ ಬಾರಕೂರು ಬಂದರನ್ನು ಚಿತ್ರಿಸಲಾಗಿದೆ ಹಾಗೂ ಭಟ್ಕಳದಲ್ಲಿ ಅಕ್ಕಿ ವ್ಯಾಪಾರಕ್ಕೆ ಸಂಬಂಧಿಸಿದಂತೆ, ಹಡಗುಗಳು ಬಾರಕೂರು ಬಂದರಿಗೆ ಬರುವಿಕೆಯ ಬಗ್ಗೆ ಟೋಮ್ ಉಲ್ಲೇಖಿಸಿದ್ದಾನೆ. ಬಹುಶಃ ಇದು ಈ ಬಂದರಿನ ಅಕ್ಕಿಯನ್ನು ತೆಗೆದುಕೊಳ್ಳುವ ಸಾಧ್ಯತೆಯಿದೆ.[182] ಹಾಗೆಯೇ ಫ್ರಾನ್ಕೊಯಿಸ್ ಪಿರಾರ್ಡ್ ಡಿ ಲಾವೆಲ್‌ನು (17ನೇ ಶತಮಾನದ ಮೊದಲ ಭಾಗದಲ್ಲಿ) ಫ್ರೆಂಚ್ ಪ್ರವಾಸಿಗನಾದ ಇವನು ಬಾರ್ಕೂರಿನಿಂದ ವ್ಯಾಪಾರಿಗಳು, ವ್ಯಾಪಾರಕ್ಕಾಗಿ ಮಾಲ್ಡೀವ್‌ಗೆ ಹೋಗುತ್ತಾರೆಂದು ಹೇಳುತ್ತಾನೆ.[183]

16ನೇ ಶತಮಾನದ ಆರಂಭದಲ್ಲಿ, ದಕ್ಷಿಣ ಭಾರತದ ವಾಣಿಜ್ಯ ಇತಿಹಾಸವು ಪೋರ್ಚುಗಿಸರೊಂದಿಗೆ ಹೊಸ ಹಂತವನ್ನು ಪಡೆಯಿತು. ಇವರು ವಸಾಹತುಗಳನ್ನು ಸ್ಥಾಪಿಸುವುದರ ಜೊತೆಗೆ, ಬಾರಕೂರಿನಲ್ಲಿ ತಮ್ಮ ನೆಲೆಗಳನ್ನು ಪ್ರಾರಂಭಿಸಿದರು. ಇವರು ಬಾರಕೂರಿಗೆ ಬರುವ ಮುಂಚೆ ಇಲ್ಲಿ ಅರಬ್ಬರು ವ್ಯಾಪಾರದಲ್ಲಿ ಏಕಸ್ವಾಮ್ಯವನ್ನು ಹೊಂದಿದ್ದರು. ಆದರೆ ಪೋರ್ಚುಗೀಸರು ಇಲ್ಲಿಗೆ ಬಂದ ಮೇಲೆ, ಕುದುರೆ ವ್ಯಾಪಾರದಲ್ಲಿ

ಏಕಸ್ವಾಮ್ಯವನ್ನು ಹೊಂದಿದ್ದ ಅರಬ್ಬರನ್ನು ಮಾರುಕಟ್ಟೆಯಿಂದ ಹೊರಗೆ ಓಡಿಸಿದರು. ಪೋರ್ಚುಗೀಸರು ವಾರ್ಷಿಕವಾಗಿ ಒಂದು ಸಾವಿರ ಲೋಡ್ ಅಕ್ಕಿಯನ್ನು ಬಾರಕೂರಿನಿಂದ ಪಡೆಯುತ್ತಿದ್ದರು.[184]. ವಿಜಯನಗರದ ರಾಜ ಕೃಷ್ಣದೇವರಾಯನ ಕಾಲದಲ್ಲಿ ಪೋರ್ಚುಗೀಸರು ಬಾರಕೂರಿನಲ್ಲಿ ವ್ಯಾಪಾರದ ನಿಯಮಗಳನ್ನು ನಿರ್ದೇಶಿಸುತ್ತಿದ್ದರು. ರಾಜಕೀಯ ಇತಿಹಾಸದ ದೃಷ್ಟಿಯಲ್ಲಿ ನೋಡುವುದಾದರೆ, ಡಚ್ಚರು ಕೂಡಾ ಬಾರ್ಕೂರಿಗೆ ಬಂದಿದ್ದರು. ಮತ್ತು ಅವರು ಕಾರ್ಖಾನೆಯನ್ನು ಕೂಡ ಇಲ್ಲಿ ಸ್ಥಾಪಿಸಿದ್ದರು. ಅಲ್ಲದೇ ಪೋರ್ಚುಗೀಸರ ಜೊತೆ ಸ್ಪರ್ಧಿಸಲು ಪ್ರಯತ್ನಿಸಿದರು. ಆದರೆ ಡಚ್ ಪ್ರಯಾಣಿಕ ಲಿನ್ಸ್‌ಟೆನ್ ಸ್ವತಃ ಹೇಳುತ್ತಾನೆ. ಕ್ರಿ.ಶ. 1595ರಲ್ಲಿ ಪೋರ್ಚುಗೀಸರು ಪಶ್ಚಿಮ ಕರಾವಳಿಯಲ್ಲಿ ಅತ್ಯಂತ ಶಕ್ತಿಯುತರಾಗಿದ್ದರು. ಮತ್ತು ಅವರ ಅನುಮತಿ ಇಲ್ಲದೇ ಪಶ್ಚಿಮ ಕರಾವಳಿಯಲ್ಲಿ, ಅರೇಬಿಯನ್ ಸಮುದ್ರದಲ್ಲಿ ನೌಕಾ ಯಾನ ಮಾಡಲು ಸಾಧ್ಯವಿಲ್ಲ ಎಂದು ತಿಳಿಸಿದ್ದಾನೆ.[185]

ಪೋರ್ಚುಗೀಸರು ಕ್ರಿ.ಶ. 1631ರ ನಂತರ ವ್ಯಾಪಾರ ಮತ್ತು ವಾಣಿಜ್ಯ ಕ್ಷೇತ್ರದಲ್ಲಿ ಪ್ರಾಮುಖ್ಯ ಪಡೆದರು. ಹಾಗೂ ಕೆಳದಿ ದೊರೆ ವೀರಭದ್ರನಾಯಕ ಪೋರ್ಚುಗೀಸರೊಂದಿಗೆ ಒಪ್ಪಂದ ಮಾಡಿಕೊಂಡು, ಇವರಿಗೆ ಕೆಲವು ವಿಶೇಷ ಸವಲತ್ತುಗಳನ್ನು ನೀಡಿದನು.[186] ಕೆಳದಿ ಅರಸರು ತುಳುನಾಡಿನ ಮೇಲೆ ನಿಯಂತ್ರಣ ಪಡೆದುಕೊಂಡಾಗಲೂ ಬಾರಕೂರು ಪ್ರಮುಖ ಪಟ್ಟಣವಾಗಿಯೂ, ಬಂದರಾಗಿಯೂ ಮುಂದುವರೆಯಿತು.

**ಮಲ್ಪೆ**

ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯ ಪಶ್ಚಿಮಕ್ಕೆ 4 ಕಿ.ಮೀ ದೂರದಲ್ಲಿ ಮಲ್ಪೆ ಇದೆ. ಈ ಪ್ರಾಚೀನ ಬಂದರು ಪಟ್ಟಣವು ಮಲ್ಪೆ ಅಥವಾ ಉದ್ಯಾವರ ಎಂದು ಕರೆಯಲ್ಪಡುವ ನದಿಯ ಮುಖಭಾಗದಲ್ಲಿದೆ. ಈ ನದಿಯಲ್ಲಿ 10 ಕಿ.ಮೀಟರುಗಳಷ್ಟು ದೂರದವರೆಗೆ ಉಬ್ಬರವಿಳಿತದ ಸಮಯದಲ್ಲಿ ನಾಡ ದೋಣಿಗಳು ಸಂಚರಿಸಲು ಯೋಗ್ಯವಾದುದು. ಸಮುದ್ರದಲ್ಲಿ ಈ ಬಂದರಿನ ಪಶ್ಚಿಮಕ್ಕೆ ಮೂರುಕಲ್ಲಿನ ದ್ವೀಪಗಳಿವೆ. ಅವು ಉತ್ತರದ ಡರಿಯಾ ಬಹದುರ್ಗಡ್ ಎಂದು ಕರಯಲಾಗುತ್ತದೆ. ಮಧ್ಯದ್ದು ಡರಿಯಾ ಗೊಡಾರ್ಕಲ್ಲು ಮತ್ತು ದಕ್ಷಿಣದ್ದು ಕರಿ ಇಲ್ಲದಕಲ್ಲು. ಈ ಸಮುದ್ರತೀರವು ಎಲ್ಲಾ ಋತುಗಳಲ್ಲಿಯೂ ಅತ್ಯುತ್ತಮ ನೈಸರ್ಗಿಕ ಬಂದರಾಗಿದೆ.[187] (ಅಂಕರೇಜ್) ಟಾಲೆಮಿ[188] ಮಲ್ಲಿಪ್ಪಲ ಎಂಬ ಸ್ಥಳವನ್ನು ಉಲ್ಲೇಖಿಸುತ್ತಾನೆ. ಇದನ್ನು ಆಧುನಿಕ ಮಲ್ಪೆ ಎಂದು ಗುರುತಿಸ

ಲಾಗಿದೆ. ಇದನ್ನು ಈಜಿಪ್ಪಿನಲ್ಲಿ ಕಂಡುಬರುವ ಗ್ರೀಕ್ ಪ್ರಹಸನದಲ್ಲಿ ಉಲ್ಲೇಖಿಸಲಾಗಿದೆ.[189] ಮಲ್ಪೆ ನಾಯಕ ಎಂಬ ಹೆಸರಿನ ಪ್ರಹಸನವು, ಮಲ್ಪೆಯ ಮುಖ್ಯ ಅರ್ಥದಲ್ಲಿ ಬಳಸಲ್ಪಟ್ಟಿತು. ನಾಟಕದ ಪ್ರಕಾರ, ಗೀಕ್ ಮಹಿಳೆ ಮಲ್ಪೆ ಮುಖ್ಯಸ್ಥನ ಕೈಗೆ ಸಿಕ್ಕಿದ್ದಳು. ಗ್ರೀಕರ ಒಂದು ಪಕ್ಷವು ಹಡಗಿನಲ್ಲಿ ಈ ಸ್ಥಳಕ್ಕೆ ಆಗಮಿಸಿದ್ದರು. ಮತ್ತು ಮುಖ್ಯಸ್ಥ ಹಾಗೂ ಉಳಿದವರು ತುಂಬಾ ಕುಡಿದಿದ್ದರು, ಅವರಿಂದ ಈ ಹೆಂಗಸು ತಪ್ಪಿಸಿಕೊಳ್ಳುವಲ್ಲಿ ಯಶಸ್ವಿಯಾದಳು.[190] ಅದನ್ನು ಹೀಗೂ ಊಹಿಸಬಹುದು. ಕೆಲವು ಕಡಲುಗಳ್ಳ ಮುಖ್ಯಸ್ಥರು ಕೆಲವು ಗ್ರೀಕ್ ಹಡಗುಗಳನ್ನು ವಶಪಡಿಸಿಕೊಂಡಿರಬಹುದು. ಆವಾಗ ಸಿಬ್ಬಂದಿ ಮತ್ತು ಆ ಮಹಿಳೆಯನ್ನು ಮಲ್ಪೆಯಲ್ಲಿ ಸೆರೆಯಲ್ಲಿಟ್ಟಿದ್ದರಂತೆ.[191] ಈ ಸಾಕ್ಷ್ಯಾಧಾರಗಳು ಕ್ರಿ.ಶ. 2ನೇ ಶತಮಾನದಲ್ಲಿ ಪೂರ್ವ ಆಳುಪರ ಕಾಲದಲ್ಲಿ ಮಲ್ಪೆ ಬಂದರಾಗಿತ್ತು ಎಂಬುದನ್ನು ಸಾಬೀತು ಮಾಡಲು ಹೊರಟಿದೆ. ಪ್ರಾಚೀನ ಸಮುದ್ರ ಬಂದರು ಮಲ್ಪೆ. ಮಲಂಪುನಿಂದ ಅದರ ಹೆಸರನ್ನು ಪಡೆದಿದೆ. ಇದರರ್ಥ ಮಣ್ಣಿನ ಭೂಮಿ.[192] ಗುರುರಾಜ್ ಭಟ್ಟರು ಮಲ್ಪೆ ಎಂಬ ಹೆಸರು, ಮಲಫ ಎಂಬ ನದಿಯ ಹೆಸರಿನಿಂದ ಬಂದಿದೆ ಎಂದು ತಿಳಿಸುತ್ತಾರೆ. ತುಳುವಿನಲ್ಲಿ ಇದನ್ನು ಮಲಾಪು ಎಂದು ಕರೆಯಲಾಗುತ್ತದೆ.[193]

ಈ ಬಂದರು ಮಲ್ಪೆ ಅಥವಾ ಉದ್ಯಾವರವೆಂದು ಕರೆಯುವ ನದಿಯ ಮುಖಜ ಭೂಮಿಯಲ್ಲಿ ಸ್ಥಿತವಾಗಿದೆ. ಉಬ್ಬರ ಅಲೆಗಳ ಕಾಲದಲ್ಲಿ ಈ ನದಿ ಸುಮಾರು 10 ಕಿ.ಮಿ. ದೂರದವರೆಗೆ ನಾಡದೋಣಿಗಳು ಸಂಚರಿಸಲು ಯೋಗ್ಯವಾದುದು. ಟಾಲೆಮಿ ಈ ಪಟ್ಟಣ ವನ್ನು ಮಲ್ಪಲಾ ಎಂದು ಗುರುತಿಸಿದ್ದಾರೆ. ಗ್ರೀಕ್ ಪ್ರಹಸನದ ಘಟನೆ ನಡೆದುದು ಇಲ್ಲಿಯೇ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

**ಮಂಗಳೂರು**

ಗುರುಪುರ ಮತ್ತು ನೇತ್ರಾವತಿ ನದಿಗಳ ಮುಖಜ ಭೂಮಿಯಲ್ಲಿದೆ. ಇದು ಎರಡನೆಯ ಶತಮಾನದ ಕಾಲದಲ್ಲಿಯೇ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಟಾಲೆಮಿಯ 'ನಿತ್ರೇಸ್' ಮಂಗಳೂರೆಂದು ಊಹಿಸಲಾಗಿದೆ. ಮೆಕ್ರೆಂಡೆಲ್ ಫ್ಲಿನಿಯ 'ನಿತ್ರಾಸ್' ಎಂಬ ಹೆಸರಿನಿಂದ ಮಂಗಳೂರನ್ನು ಗುರುತಿಸುತ್ತಾನೆ. ಬಳಿಕ ಕಾಸ್‌ಮಾಸ್ ಮಂಗಳೂರನ್ನು ಮಾಂಗರೋತ್ ಎಂದು ಕರೆದಿದ್ದಾನೆ. 12ನೆಯ ಶತಮಾನದಲ್ಲಿ ಚೌ-ಜ-ಕಾ ಈ ನಗರವನ್ನು ಫಾಂಗ್-ಯಲೊ ಎಂದು ಗುರುತಿಸುತ್ತಾನೆ. ಅರಬ್ ಬರಹಗಾರರಾದ ಡೆಮಿಷ್ಕಿ ಮತ್ತು

ಅಬುಲ್ ಫಿದ ಮಂಜಲೂರೆಂದು ಗುರುತಿಸುತ್ತಾರೆ. ಇಬನ್ ಬತೂತ ಸಹ ಮಂಗಳೂರಿನ ಬಗೆಗೆ ಉಲ್ಲೇಖಿಸುತ್ತಾನೆ. ಏಳನೆಯ ಶತಮಾನದಿಂದ 14ನೆಯ ಶತಮಾನದವರೆಗೆ ಶಾಸನಗಳಲ್ಲಿ ಮಂಗಳಾಪುರವೆಂದು ಕರೆಯಲ್ಪಡುವ ಈ ನಗರ ಒಂದು ಪ್ರಮುಖ ವ್ಯಾಪಾರಿ ಕೇಂದ್ರವಾಗಿತ್ತು.

ಮಂಗಳೂರು ಸಾಗರೋತ್ತರ ವ್ಯಾಪಾರದ ಪ್ರಮುಖ ಕೇಂದ್ರವಾಗಿತ್ತು. ನದಿಯ ಹಿನ್ನೀರು ರಚನೆಯಿಂದ ಮಂಗಳೂರು ಬಂದರಿನ ಸಂಚಾರವನ್ನು ಹೆಚ್ಚಿಸಿತು. ಬಂದರಿನ ಸ್ಥಳದಲ್ಲಿ ನದಿಯು ಆಳವಾಗಿದ್ದು, ಅದರ ಸರಕು ತೆಗೆದುಹಾಕಲ್ಪಟ್ಟ ನಂತರ ಸರೋವರ ದೊಳಗೆ ಪ್ರವೇಶಿಸಬಹುದಾಗಿತ್ತು. ಮಂಗಳೂರು ಬಂದರಿನ ಒಳನಾಡಿನ ಪ್ರದೇಶವು ಕ್ಯಾಶಿಯ, ಮೆಣಸು, ಅಡಿಕೆ, ಏಲಕ್ಕಿ, ಶ್ರೀಗಂಧದ ಮರ ಮತ್ತು ವಿವಿಧ ರೀತಿಯ ಅಕ್ಕಿಯನ್ನು ಉತ್ಪಾದಿಸುತ್ತಿತ್ತು.[194] ಈ ಎಲ್ಲಾ ಉತ್ಪನ್ನಗಳ ಲಭ್ಯತೆಯಿಂದ ಮಂಗಳೂರನ್ನು ವಿವಿಧ ರೀತಿಯಲ್ಲಿ ಉತ್ತಮ ವ್ಯಾಪಾರ ಕೇಂದ್ರವಾಗಿ ಮಾಡಿದೆ. ಸುಪಾರಿ, ಕರಿಮೆಣಸು, ವಿವಿಧ ಬಗೆಯ ಅಕ್ಕಿ, ಕಬ್ಬು ಇವುಗಳನ್ನು ಬೇರೆ ಬೇರೆ ಸ್ಥಳಗಳಿಗೆ ರಫ್ತು ಮಾಡಲಾಗುತ್ತಿತ್ತು. ಆ ಪ್ರದೇಶಗಳೆಂದರೆ– ಸೂರತ್, ಬೆಂಗಾಲ್, ಕಲ್ಲಿಕೋಟೆ, ಮಸ್ಕತ್, ಓರ್ಮುಜ್, ಮಾಲ್ಡೀವ್ ದ್ವೀಪ ಮತ್ತು ಚೀನಾ.

ಗೋವಾದಿಂದ ಹಲವಾರು ಪತ್ರಗಳು, ಮಂಗಳೂರು ಒಳಗೊಂಡಿರುವ ಅಂಶಗಳಿಗೆ ಸಂಬಂಧಪಟ್ಟ ವ್ಯಾಪಾರಿ ಸಂಬಂಧಗಳು, ಬೆಂಗಾವಲು ಇತ್ಯಾದಿಗಳ ಬಗ್ಗೆ ವೈಸರಾಯಿಗೆ ಸೂಚನೆಯನ್ನು ನೀಡುತ್ತಿದ್ದವು. ಪೋರ್ಚುಗೀಸ್ ದಾಖಲೆಯ ಪ್ರಕಾರ, ಅವರಿಗೆ ಮಂಗಳೂರಿನಲ್ಲಿ ಅಕ್ಕಿ ಖರೀದಿಸಲು ಅನುಮತಿ ಇಲ್ಲ ಮತ್ತು ಅದನ್ನು ಮಲಬಾರಿನಲ್ಲಿ ಮಾರಾಟ ಮಾಡಲಾಗಲಿಲ್ಲ.[195]

ಪಶ್ಚಿಮ ಕರಾವಳಿಯಲ್ಲಿ ವ್ಯಾಪಾರ ಮತ್ತು ವಾಣಿಜ್ಯದ ಪ್ರಚಾರಕ್ಕಾಗಿ ಜವಾಬ್ದಾರ ರಾಗಿರುವ ಕೆಲವೊಂದು ಅಂಶಗಳ ಬಗ್ಗೆ ಇಲ್ಲಿ ನಮೂದಿಸಬೇಕಾಗಿದೆ. ಮೊದಲಿಗೆ ಜಿಲ್ಲೆಯು ಸುಮಾರು 140 ಕಿಲೋ ಮೀಟರ್‌ಗಳಷ್ಟು ಕರಾವಳಿಯನ್ನು ಹೊಂದಿದೆ. ಮತ್ತು ಮಂಗಳೂರು, ಕುಂದಾಪುರ, ಮುಲ್ಕಿ, ಮಲ್ಪೆ, ಹಂಗಾರಕಟ್ಟೆ ಮತ್ತು ಬೈಂದೂರುಗಳಂತಹ ಆರು ಬಂದರುಗಳಿವೆ.[196] ಇವುಗಳಲ್ಲಿ ಮಂಗಳೂರು ಬಂದರು ಎಲ್ಲಾ ಹವಾಮಾನದ ಮುಖ್ಯ ಬಂದರಾಗಿದೆ. ಈ ಬಂದರಿನಲ್ಲಿನ ಸಂಚಾರವು ಪ್ರಧಾನವಾಗಿ ಕೈಗಾರಿಕಾ ಸರಕುಗಳಲ್ಲೊಂದಾ

ಗಿತ್ತು. ಕುಂದಾಪುರ ಬಂದರು ಗಂಗೊಳ್ಳಿ ಗ್ರಾಮದ ಹಾಲಾಡಿ ಮತ್ತು ಚಕ್ರನಾಡಿ ನದಿಗಳ ಸಂಗಮದಲ್ಲಿದೆ. ಇದು ಮುಖ್ಯವಾಗಿ ಕುಂದಾಪುರದಿಂದ ಸಂಚಾರವನ್ನು ಸೆಳೆಯಿತು ಮತ್ತು ಶಿವಮೊಗ್ಗ ಜಿಲ್ಲೆಯ ಹೊಸನಗರ, ಸಾಗರ ಮತ್ತು ತೀರ್ಥಹಳ್ಳಿಗಳಂತಹ ಸ್ಥಳಗಳಿಂದ ಬಂದ ಸರಕುಗಳಿಂದ ಕೂಡ ಇದನ್ನು ಪೂರೈಸಲಾಯಿತು.[197] ಸುಮಾರು ನೂರಾರು ವರ್ಷಗಳ ಕಾಲ ತುಳುನಾಡಿನ ತೀರದಾದ್ಯಂತ ನೆಲೆಗೊಂಡು ಸಾಗರೋತ್ತರ ವ್ಯಾಪಾರದಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಪೋರ್ಚುಗೀಸರು, ಸ್ಥಳೀಯ ವರ್ತಕಸಮುದಾಯ, ಸ್ಥಳೀಯ ರಾಜ ಸಂಸ್ಥಾನಗಳು, ತುಳುನಾಡನ್ನು ಆಳುತ್ತಿದ್ದಂತಹ ಸಾಮ್ರಾಜ್ಯಗಳು ಈ ಎಲ್ಲಾ ಆರ್ಥಿಕ-ರಾಜಕೀಯ ಶಕ್ತಿಗಳೊಂದಿಗೆ ಸಂಘರ್ಷ, ಸಹಕಾರ, ಮತ್ತು ರಾಜತಾಂತ್ರಿಕತೆಯೊಂದಿಗೆ ಸಂಬಂಧಗಳನ್ನು ಬೆಸೆದುಕೊಳ್ಳಬೇಕಿತ್ತು. ನಂತರ ಕ್ರಿ.ಶ. 17ನೇ ಶತಮಾನದ ಮಧ್ಯಭಾಗದ ವೇಳೆಗೆ ತುಳುನಾಡಿನಲ್ಲಿ ಒಳನಾಡಿನ ಮತ್ತು ಸಾಗರೋತ್ತರ ವ್ಯಾಪಾರ-ವಹಿವಾಟುಗಳು ಕ್ಷೀಣಿಸತೊಡಗಿದವು.

### 2.12 ವ್ಯಾಪಾರದ ಮೇಲೆ ಜಾನಪದ ಮತ್ತು ಪಾಡ್ದಾನಗಳ ಪ್ರಭಾವ

ದೇಶೀಯ ವಿದೇಶೀಯ ವ್ಯಾಪಾರದ ಹಿನ್ನಲೆಯಲ್ಲಿ ತುಳುನಾಡಿನ ಜಾನಪದಸಾಹಿತ್ಯದ ಅಧ್ಯಯನ ಮಾಡುವುದು ಅವಶ್ಯವಾಗಿದೆ. ಜನಪದವು ನಿರ್ದಿಷ್ಟ ಸಮುದಾಯದ ಅಥವಾ ಜನರ ಗುಂಪಿನ ಸಾಂಪ್ರದಾಯಿಕ ನಂಬಿಕೆಗಳು ಮತ್ತು ಕಥೆಗಳನ್ನು ಪ್ರತಿನಿಧಿಸುತ್ತದೆ. ಇದು ಜನರ ತತ್ವಗಳು, ಆಲೋಚನೆಗಳು, ಆತ್ಮಸಾಕ್ಷಿಯ ಅತ್ಯುನ್ನತ ಪ್ರತಿನಿಧಿಯಾಗಿದೆ. ಮತ್ತು ಅವರ ಜೀವನ ವಿಧಾನಗಳನ್ನು ಪ್ರತಿಬಿಂಬಿಸುತ್ತದೆ. ಇದು ಯುದ್ಧ, ಆಡಳಿತ, ಗುಲಾಮಗಿರಿ, ಶಿಕ್ಷಣ, ಮತ್ತು ಔಷಧಗಳು, ಕೃಷಿ ಮತ್ತು ಆದಾಯವ್ಯವಸ್ಥೆ, ಕ್ರೀಡೆಗಳು, ಧಾರ್ಮಿಕ ಮತ್ತು ಕುಟುಂಬದ ವ್ಯವಸ್ಥೆಗಳು ಮತ್ತು ಸಂಪ್ರದಾಯಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ನಿರ್ದಿಷ್ಟ ಸಮಾಜದ ಅಥವಾ ಜನರ ಗುಂಪಿನ ಸಾಮಾಜಿಕ ಸಾಂಸ್ಕೃತಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳಿಗೆ ಸಾಕ್ಷಿಯಾಗಿದೆ.[198]

ಹಳೆಯ ತಲೆಮಾರಿನವರೆಗೂ ಮೌಖಿಕ ಸಂಪ್ರದಾಯ ಅಥವಾ ಮೌಖಿಕ ಮಾಹಿತಿ ಮತ್ತು ಜ್ಞಾನದ ಪ್ರಸರಣವನ್ನು ಇಲ್ಲಿ ತಿಳಿಯಲಾಗಿದೆ. ಇತಿಹಾಸದಲ್ಲಿ, ಜನಪದ ವಿಷಯ, ರೂಪ ಮತ್ತು ಕಾರ್ಯವನ್ನು ಸೃಷ್ಟಿಸಿದ್ದಾರೆ. ತುಳುನಾಡಿನಲ್ಲಿ ಬ್ರಾಹ್ಮಣರು ಮತ್ತು ಜೈನರು ಸೇರಿದಂತೆ ಸಮಾಜದ ಮೇಲ್ವರ್ಗದವರು ಸಾಮಾನ್ಯವಾಗಿ ಜಾನಪದ ಗೀತೆಗಳನ್ನು

ಹಾಡುವುದಿಲ್ಲ. ಅದು ಅತಿಮಾನುಷ ನಂಬಿಕೆಗಳು ಮತ್ತು ಆಚರಣೆಗಳಿಗೆ ಬಂದಾಗ ಸಂಪ್ರದಾಯದಲ್ಲಿ ನಂಬಿಕೆ. ಬಲೀಂದ್ರ ಪಾಡ್ದನದ ಆರಾಧನೆಯು ಬ್ರಾಹ್ಮಣರನ್ನು ಒಳಗೊಂಡಂತೆ ಎಲ್ಲಾ ವರ್ಗದಲ್ಲಿ ಕಂಡುಬರುತ್ತದೆ. ತುಳುನಾಡಿನ ಜಾನಪದ ಕಥೆಯು ಉತ್ತಮವಾದ ವಿಷಯವಾಗಿದೆ.

ಪಾಡ್ದನಗಳು ಜೀವನಕ್ಕೆ ಸಂಬಂಧಿಸಿದ ವಿವಿಧ ಆಚರಣೆಗಳ ಬಗ್ಗೆ ಮಾಹಿತಿಯನ್ನು ನೀಡುತ್ತವೆ. ವಾಸ್ತವವಾಗಿ ಅವರು ಆರಂಭಿಕ ಮತ್ತು ಮಧ್ಯಕಾಲೀನ ಕಾಲದಲ್ಲಿ ತುಳುನಾಡಿನ ಸಾಂಸ್ಕೃತಿಕ ಇತಿಹಾಸವನ್ನು ಅರ್ಥಮಾಡಿಕೊಳ್ಳಲು ಪುನರ್ನಿರ್ಮಿಸಲು ಬಹಳ ಉಪಯುಕ್ತ ವಾಗಿವೆ.[199] ಅವರು ಕೃಷಿ, ವ್ಯಾಪಾರ ಮತ್ತು ವಾಣಿಜ್ಯ, ಪ್ರಾಣಿಗಳ ನ್ಯಾಯೋಚಿತ, ಶಿಕ್ಷಣ, ಔಷಧ, ಕಲೆ, ಆಡಳಿತ, ಯುದ್ಧ, ಕ್ರೀಡೆಗಳ ಮೇಲೆ ಬೆಳಕು ಚೆಲ್ಲುತ್ತಾರೆ.

ಬಂಟ್ಸ್, ಸೆಟ್ಟಿ ಮತ್ತು ಮರಕ್ಕಾಲರು/ಮರಕ್ಕಾಯರು (ವ್ಯಾಪಾರಿಗಳು) ಮತ್ತು ಜೈನರು ಮತ್ತು ಮುಸ್ಲಿಂರಂತಹ ಸಮುದಾಯಗಳು ಪಾಡ್ದನಗಳಲ್ಲಿ ಕಂಡುಬರುತ್ತವೆ. ಇದು ವ್ಯಾಪಾರ ಸರಕುಗಳನ್ನು ಸಹ ಉಲ್ಲೇಖಿಸುತ್ತದೆ. ಉದಾಹರಣೆಗೆ ಸೂರತ್ ತಂಬಾಕಿನೊಂದಿಗೆ ಸಂಪರ್ಕ ಹೊಂದಿದೆಯೆಂದು ಅವರು ಸೂಚಿಸುತ್ತಾರೆ. ಹಾಗೆಯೇ ಅವರು ವ್ಯಾಪಾರ ಕೇಂದ್ರಗಳು, ರಫ್ತುಸ್ಥಳಗಳು ಮತ್ತು ಇತರ ಸಂಬಂಧಿತ ವಿಷಯಗಳ ಮೇಲೆ ಬೆಳಕು ಚೆಲ್ಲಿದೆ. ಗೋವಾವನ್ನು ಪಾಡ್ದನಗಳಲ್ಲಿನ ವ್ಯಾಪಾರಕೇಂದ್ರವಾಗಿ ಉಲ್ಲೇಖಿಸಲಾಗಿದೆ. ಈ ವ್ಯಾಪಾರಕೇಂದ್ರಗಳಲ್ಲಿ ವಿವಿಧ ರೀತಿಯ ಸರಕುಗಳನ್ನು ವ್ಯಾಪಾರ ಮಾಡಲಾಗುತ್ತದೆ. ಅದನ್ನು ಬೊಬ್ಬರ್ಯ ಪಾಡ್ದನದಲ್ಲಿ ನೋಡುವುದಾದರೆ, "*ಕಡಲ ದಡದಲ್ಲಿ ತೆಂಗಿನಗರಿಯ ಅಂಗಡಿ ಹಾಕಿ, ಹದಿನಾರು ಬಾಗಿಲಿನಲ್ಲಿ ಹದಿನಾರು ವ್ಯಾಪಾರ ಮಾಡಿದರು. ಬಳಿಕ ನಮಗೆ ಹಡಗಿನ ವ್ಯಾಪಾರ ನೋಡಬೇಕು, ಹಡಗಿಗಾಗುವ ಮರ ನೋಡಬೇಕು ಎಂದರು. ಕಣ್ಣಾರಿಗೆ ಬಂದರು, ಬ್ರಹ್ಮಲಿಂಗ ದೇವರಲ್ಲಿ ಮರ ಕೇಳಿದರು. ಮರ ತಂದರು, ಹಡಗು ಕಟ್ಟಿದರು. ಊರಿನ ನವಣೆ ಅಕ್ಕಿ, ಭತ್ತ, ಗೋದಿ ಕಡಲೆ ಅದಕ್ಕೆ ತುಂಬಿಸಿದರು. ತೆಂಗಿನಕಾಯ ಹೊಗೆಸೊಪ್ಪು ತುಂಬಿಸಿದರು. ನೀರು ನೋಡಿದರು. ಹಡಗು ಜಲಧಿಗೆ ಬಿಟ್ಟರು. ಹಡಗು ಬಿಟ್ಟು ಸಾಗರದ ದಕ್ಷಿಣ ರಾಜ್ಯಕ್ಕೆ ಕೊಂಡುಹೋಗಿ ಹಡಗಿನಲ್ಲಿ ವ್ಯಾಪಾರ ನೋಡಿದರು. ಹಡಗನ್ನು ಹಿಂದೆ ತಿರುಗಿಸಿದರು. ತಿರುಗಿಸಿದಾಗ ಅವರ ಎದುರು ಕಳ್ಳ ಹಡಗು ಸಿಗುವುದು. ನಡುಕಡಲಿನಲ್ಲಿ ಯುದ್ಧವಾಯಿತು.*"[200]

ಬೊಬ್ಬರ್ಯ ಪಾಡ್ದನದಲ್ಲಿ, ಸುಲಿಕಲ್ಲ ಮಾದಬ್ಯಾರಿ ಕಡಲ ಬದಿಯಲ್ಲಿ ಮಡಲಿನ ಚಿಕ್ಕ ಅಂಗಡಿಯನ್ನು ಇಟ್ಟುಕೊಂಡಿದ್ದ. ಇವನು ಇಲ್ಲಿ ಬೆಲ್ಲ, ಮೆಣಸು ಮತ್ತು ಉಪ್ಪಿನ ವ್ಯಾಪಾರ ಮಾಡುತ್ತಿದ್ದ. ಇದರಿಂದ ವ್ಯಾಪಾರದ ವಸ್ತುಗಳ ಬಗ್ಗೆ ತಿಳಿಯಬಹುದು. ಜೊತೆಗೆ ಮುತ್ತುಸೆಟ್ಟಿ, ರತ್ನಸೆಟ್ಟಿ, ವಜ್ರಸೆಟ್ಟಿ ಮೊದಲಾದ ಏಳು ಜನ ಸೆಟ್ಟಿಗಳು ಚಿನ್ನ, ರತ್ನಗಳನ್ನು ವ್ಯಾಪಾರ ಮಾಡುತ್ತಿದ್ದರು.[201] ಇಲ್ಲಿ ವ್ಯಾಪಾರದ ಬಗ್ಗೆ ತಿಳಿಯುವಾಗ ನಿಖರವಾದ ಕಾಲಘಟ್ಟವನ್ನು ಪಾಡ್ದನಗಳಲ್ಲಿ ತಿಳಿಯುವುದು ಕಷ್ಟಕರ ಆದರೂ ಇತಿಹಾಸಕಾರರು ಕೆಲವೊಂದು ಆಧಾರದ ಮೇಲೆ ಕಾಲಾನುಕ್ರಮವನ್ನು ತಿಳಿಸುತ್ತಾರೆ. ಬಹಳ ಹಿಂದಿನಿಂದಲೂ ಸುಮಾರು ಎರಡನೇ ಶತಮಾನದಿಂದಲೇ ಅರಬ್ ದೇಶಗಳಿಂದ ವ್ಯಾಪಾರಿಗಳು ಪಶ್ಚಿಮ ಕರಾವಳಿಗೆ ವ್ಯಾಪಾರಕ್ಕೆ ಬರುತ್ತಿದ್ದರು[202] ಆ ಸಂದರ್ಭದಲ್ಲಿ ಸ್ಥಳೀಯ ಜನಾಂಗದೊಡನೆ ಸಂಬಂಧ ಬೆಳೆಯಿತು. ಇದರಿಂದ ಹುಟ್ಟಿದ ಜನಾಂಗವನ್ನು ತುಳುನಾಡಿನಲ್ಲಿ ಬ್ಯಾರಿಗಳೆಂದು, ಮಲಬಾರ್ ಪ್ರದೇಶಗಳಲ್ಲಿ ಮಾಪಿಳ್ಳೆಗಳೆಂದು ಕರೆಯುತ್ತಾರೆ. ವ್ಯಾಪಾರವೇ ಇವರ ಪ್ರಧಾನ ಕಸುಬಾಗಿಟ್ಟು ಕೊಂಡಿದ್ದರು. ಹಾಗಾಗಿ ಇವರನ್ನು ಬ್ಯಾರಿಗಳೆಂದು ಕರೆಯಲಾರಂಬಿಸಿರಬೇಕೆಂದು ಸುಶೀಲಾ ಪಿ ಉಪಾಧ್ಯಾಯ ತಿಳಿಸಿದ್ದಾರೆ[203]

ಪಾಡ್ದನಗಳು ಕನ್ನಡ ಮತ್ತು ತುಳು ಭಾಷೆಯಲ್ಲಿ ಲಭ್ಯವಿದೆ. ತುಳುನಾಡಿನ ಅತ್ಯಂತ ಜನಪ್ರಿಯ ಮಾತನಾಡುವ ಭಾಷೆ ತುಳು. ವಾಸ್ತವವಾಗಿ ತುಳುನಾಡಿನ ಹೆಸರು ತುಳುಭಾಷೆಯಿಂದ ಬಂದಿದೆ. ಇದು ಆ ಪ್ರದೇಶದ ಸಂವಹನ ಮಾಧ್ಯಮವಾಗಿ ಭಾಷೆಯ ಜನಪ್ರಿಯತೆಯನ್ನು ಪ್ರತಿಬಿಂಬಿಸುತ್ತದೆ. ಆದ್ದರಿಂದ ತುಳು ಪಾಡ್ದನಗಳ ನಡುವಿನ ನಿಕಟ ಸಂಪರ್ಕವನ್ನು ಸೂಚಿಸುತ್ತದೆ. ಎರಡು ಕಾರಣಗಳಿಗಾಗಿ ಪಾಡ್ದನಗಳನ್ನು ಸುಲಭವಾಗಿ ಬರೆಯಲಾಗಲಿಲ್ಲ. ಮೊದಲಿಗೆ, 19ನೇ ಶತಮಾನದ ಅಂತ್ಯದವರೆಗೆ ತುಳುಭಾಷೆ ಬರೆಯಲ್ಪಡಲಿಲ್ಲ. ಎರಡನೆಯದಾಗಿ, ಪಾಡ್ದನಗಳನ್ನು ವಿಭಿನ್ನ ಸಮಯದಲ್ಲಿ ಸಂಯೋಜಿಸ ಲಾಗುತ್ತಿತ್ತು. ಮತ್ತು ಮಧ್ಯಂತರಗಳೊಂದಿಗೆ, ಕಾಲಕಾಲಕ್ಕೆ ಬದಲಾಯಿಸಲಾಯಿತು.[204] ಅವುಗಳು ಇಂಗ್ಲಿಷ್ ಪದಗಳನ್ನು ಸಹ ಹೊಂದಿರುತ್ತವೆ. ಅವುಗಳ ದಿನಾಂಕಗಳನ್ನು ಕೆಳಗಿನ ವಿವರಗಳ ಸಹಾಯದಿಂದ ಮಾತ್ರವೇ ನಿರ್ಧರಿಸಬಹುದು.

- ತುಳುನಾಡಿನ ಶಾಸನಗಳಲ್ಲಿ ಭೂತಗಳ ಉಲ್ಲೇಖಗಳು.
- ಐತಿಹಾಸಿಕ ವ್ಯಕ್ತಿಗಳು ಮತ್ತು ಅವರ ಘಟನೆಗಳು ಮತ್ತು ಉಲ್ಲೇಖಗಳು

- ಐತಿಹಾಸಿಕ ಸ್ಥಳಗಳ ಉಲ್ಲೇಖ
- ವಿವಿಧ ಅವಧಿಗಳ ಸಾಂಸ್ಕೃತಿಕ ಲಕ್ಷಣಗಳು

ಮೇಲಿನ ದೃಢೀಕರಣ ಪುರಾವೆಯ ಆಧಾರದ ಮೇಲೆ, ಸಾಮಾನ್ಯವಾಗಿ ತುಳುನಾಡಿನ ಪಾಡ್ದನಗಳು ಮತ್ತು ನಿರ್ದಿಷ್ಟವಾಗಿ ದೈವದ ಪೂಜೆಗೆ ಸಂಬಂಧಿಸಿದ ಪಾಡ್ದನಗಳು 15ನೇ ಶತಮಾನದಿಂದ 17ನೇ ಶತಮಾನದ ಅವಧಿಯಲ್ಲಿ ಸಂಯೋಜಿಸಲ್ಪಟ್ಟವು ಎಂದು ಪರಿಗಣಿಸಬಹುದು.[205]

ಭತ್ತದ ನಾಟಿ ಸಮಯದಲ್ಲಿ ಕಬಿತೆ ಎಂಬ ಹಾಡುಗಳನ್ನು ಹೇಳುತ್ತಾರೆ. ಸಂಧಿಗಳು ಎಂಬ ಹಾಡನ್ನು ಭತ್ತದ ಸಸ್ಯಗಳನ್ನು ತೆಗೆಯುವ ಸಮಯದಲ್ಲಿ ಹಾಡಲಾಗುತ್ತದೆ. ಉರಲ್ ಎಂಬ ಹಾಡುಗಳನ್ನು ಕೃಷಿಕರು ಎತ್ತುಗಳ ಮೂಲಕ ಉಳುಮೆ ಮಾಡುವ ಸಂದರ್ಭದಲ್ಲಿ ಮತ್ತು ಸವಾರಿ ಮಾಡುವಾಗ ಹಾಡುತ್ತಾರೆ. ಜಾನಪದ ಸ್ಥಳವನ್ನು ಈಗ ಇತಿಹಾಸಕಾರರು ಸ್ಥಳ ಅಥವಾ ಜನರ ಇತಿಹಾಸವನ್ನು ಪುನಾರಚಿಸಲು ಬಹಳ ಉಪಯುಕ್ತ ಮೂಲವೆಂದು ಗುರುತಿಸಿದ್ದಾರೆ ಮತ್ತು ಸ್ವೀಕರಿಸಿದ್ದಾರೆ. ಸಾಮಾನ್ಯವಾಗಿ ಮಾತನಾಡುವ ಜಾನಪದ ಸಾಹಿತ್ಯವು ಸಾಮಾನ್ಯ ಜನರು ಮತ್ತು ಅವರ ನಂಬಿಕೆಗಳು, ಅಭ್ಯಾಸಗಳು, ಚಟುವಟಿಕೆಗಳು, ಸಾಮಾಜಿಕ ಸಂಪ್ರದಾಯಗಳು ಮತ್ತು ಜೀವನವಿಧಾನಗಳೊಂದಿಗೆ ವ್ಯವಹರಿಸುತ್ತದೆ. ವಿರಳವಾಗಿ ಜಾನಪದ ಸಾಹಿತ್ಯವು ಸಮಾಜದ ಗಣ್ಯ ಸಂಪ್ರದಾಯಗಳ ಬಗೆಗೆ ಬೆಳಕು ಚೆಲ್ಲುತ್ತದೆ. ಆದಾಗ್ಯೂ, ಜಾನಪದ ಸಾಹಿತ್ಯವು ಸಾಮಾನ್ಯ ಜನರ ಇತಿಹಾಸ, ಸಮಾಜ ಮತ್ತು ಸಂಸ್ಕೃತಿಯ ಬಗ್ಗೆ ಮೌಲ್ಯಯುತ ಮಾಹಿತಿಯನ್ನು ಒದಗಿಸುತ್ತದೆ.

ಯಾವುದೇ ಪ್ರದೇಶದ ಜಾನಪದ ಸಹಾಯದಿಂದ ಅಧ್ಯಯನ, ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರೀಯ ಸಿದ್ಧಾಂತಗಳ ಸಹಯೋಗ, ಇತಿಹಾಸ, ಸಮಾಜ ಮತ್ತು ಸಂಸ್ಕೃತಿಯ ಮೇಲೆ ಮೌಲ್ಯಯುತ ಮಾಹಿತಿಯನ್ನು ನೀಡುತ್ತದೆ. ಆದಾಗ್ಯೂ ಇತಿಹಾಸದ ಮೂಲವಾಗಿ ಜಾನಪದ ಕಥೆಗಳಿಗೆ ಸಂಬಂಧಿಸಿದ ಕೆಲವು ಮಿತಿಗಳನ್ನು ಗಮನಿಸಬೇಕು. ಜಾನಪದ ಅಧ್ಯಯನವು ಸ್ವಲ್ಪ ವಾಸ್ತವಿಕ ಮತ್ತು ವೈಜ್ಞಾನಿಕ ಮಾಹಿತಿಯನ್ನು ಒದಗಿಸುತ್ತದೆ. ಇತಿಹಾಸಕಾರ ಅಥವಾ ಸಾಮಾಜಿಕ ವಿಜ್ಞಾನಿ ಕಾಲಾನುಕ್ರಮದ ಮತ್ತು ಜಾನಪದಸಾಹಿತ್ಯವನ್ನು ಸಂಗ್ರಹಿಸಿ ಬಳಸುವಲ್ಲಿ ಶಾಸ್ತ್ರೀಯ ಸಮಸ್ಯೆಗಳನ್ನು ಎದುರಿಸುತ್ತಾನೆ. ಅಥವಾ ಮೌಖಿಕ

ಸಂಪ್ರದಾಯಗಳನ್ನು ಇತಿಹಾಸದ ಮೂಲವಾಗಿ ಎದುರಿಸುತ್ತಾನೆ. ಘಟನೆಯ ಕಾಲದ ನಿಖರತೆ ಅಥವಾ ಕಾಲಗಣನೆ ಜನಪದ ಕಥೆಗಳಲ್ಲಿ ಒಂದು ಪ್ರಮುಖ ಸಮಸ್ಯೆಯಾಗಿದೆ. ಘಟನೆಗಳು ಹಾಗೂ ಇತರ ದೃಢೀಕರಣ, ಕೇವಲ ಸಾಹಿತ್ಯ ಮತ್ತು ಶಾಸನಗಳಂತಹ ಐತಿಹಾಸಿಕ ಪುರಾವೆಗಳ ಸಹಾಯದಿಂದ ಮಾತ್ರವೇ ಇರುತ್ತದೆ. ಪೌರಾಣಿಕ ವಸ್ತುಗಳ ಪ್ರಭಾವ ಅತಿಮಾನುಷದಲ್ಲಿನ ನಂಬಿಕೆಗಳು ಅಥವಾ ಅಲೌಕಿಕತೆಯು ಜಾನಪದ ಅಧ್ಯಯನದಲ್ಲಿ ಬಹಳ ಗಮನಾರ್ಹವಾಗಿದೆ. ಇತಿಹಾಸಕಾರನು ಜಾನಪದ ಸಾಕ್ಷ್ಯಾಧಾರ ಬೇಕಾಗಿದ್ದರೆ, ಮತ್ತು ಅವುಗಳನ್ನು ಬಳಸುವುದರಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕು. ಇಲ್ಲಿ ವ್ಯಕ್ತಿನಿಷ್ಠತೆಯ ಸಮಸ್ಯೆಯ ಬಗ್ಗೆ ತಿಳಿದಿರಬೇಕು. ಮತ್ತಷ್ಟು ಜಾನಪದ ಸಾಹಿತ್ಯ ಸಂಗ್ರಹ, ಮೌಖಿಕ ಸಂಪ್ರದಾಯದ ಧ್ವನಿಮುದ್ರಣ, ಮತ್ತು ಸಂರಕ್ಷಣೆ ಸುಧಾರಣೆ ಮಾಡಬೇಕಾಗಿದೆ. ಇದು ಗಣನೀಯ ಪ್ರಮಾಣದ ಕ್ಷೇತ್ರದ ಕೆಲಸ ಮತ್ತು ಸಂದರ್ಶನಗಳನ್ನು ಒಳಗೊಂಡಿರುತ್ತದೆ. ತುಳುನಾಡಿನ ಅನೇಕ ಜಾನಪದ ಅಧ್ಯಯನಗಳು ಕೈಗೊಳ್ಳಲಾಗಿದೆಯೆಂದು ಗಮನಿಸುವುದು ತೃಪ್ತಿಕರವಾಗಿದೆ.[206] ಜಾನಪದ ಅಧ್ಯಯನವನ್ನು ಐತಿಹಾಸಿಕ ವಿಧಾನದಲ್ಲಿನ ಪೂರಕ ವಿಭಾಗಗಳಲ್ಲಿ ಒಂದಾಗಿ ಪರಿಗಣಿಸಬೇಕು.

ಒಟ್ಟಾರೆಯಾಗಿ ತುಳುನಾಡು ಕರಾವಳಿ ತೀರದಲ್ಲಿದ್ದು ತನ್ನ ಭೌಗೋಳಿಕ ವೈಶಿಷ್ಟ್ಯಗಳಿಂದಾಗಿ ಪ್ರಾಚೀನ ಕಾಲದ ತುಳುನಾಡಿನ ವ್ಯಾಪಾರ ವಾಣಿಜ್ಯ ಸ್ಥಳೀಯ ಮಟ್ಟದಿಂದ ವಿದೇಶೀಯ ಮಟ್ಟದವರೆಗೂ ಬೆಳೆದುಬಂದ ರೀತಿಯನ್ನು ಕಾಣಬಹುದಾಗಿದೆ. ಹಾಗೂ ಆಯಾ ಕಾಲಘಟ್ಟದಲ್ಲಿ ದಾಖಲೆಯಾಗಿರುವ ಶಾಸನಗಳು, ನಾಣ್ಯಗಳು, ಸ್ಮಾರಕಗಳು, ಕಡತಗಳು, ಪತ್ರವ್ಯವಹಾರ, ದ್ವಿತೀಯ ಆಕರಗಳನ್ನು ಬಳಸಿಕೊಂಡು ವಿಷಯವನ್ನು ಬಿಂಬಿಸಲಾಗಿದೆ. ವ್ಯಾಪಾರವು ಸ್ಥಳೀಯ ಆಡಳಿತಗಾರರಿಗೆ, ವರ್ತಕರಿಗೆ, ಪರದೇಶೀಯರಿಗೆ ಯಾವ ರೀತಿಯ ಲಾಭವನ್ನು ತಂದುಕೊಟ್ಟಿತು ಎಂಬುದನ್ನು ಗಮನಿಸಬಹುದು. ವ್ಯಾಪಾರದ ಉದ್ದೇಶವನ್ನು ಇಟ್ಟುಕೊಂಡು ಭಾರತಕ್ಕೆ ಬಂದವರು, ಇಲ್ಲಿ ಲೂಟಿವ್ಯಾಪಾರವನ್ನು ಕೂಡಾ ಪ್ರಾರಂಭ ಮಾಡಿದರು. ಇದರಿಂದ ಬೇಸತ್ತ ಸ್ಥಳಿಯ ಆಡಳಿತಗಾರರು ಮತ್ತು ವ್ಯಾಪಾರಸ್ಥರು ಇದರಿಂದ ಹೇಗೆ ಹೊರಬಂದು ತುಳುನಾಡಿನ ಆಡಳಿತದ ಮೇಲೆ ಇಲ್ಲಿನ ಬಂದರುಗಳ ಮೇಲೆ ಹೇಗೆ ನಿಯಂತ್ರಣ ಹೊಂದಿದ್ದರ ಬಗ್ಗೆ ತಿಳಿಯಬಹುದಾಗಿದೆ.

## ಅಡಿಟಿಪ್ಪಣಿಗಳು ಮತ್ತು ಪರಾಮರ್ಶನಗಳು


1. L.N.Swamy:, *Maritime Contacts of Ancient India*. Harman Publishing House New Delhi 2000. pp 1-34
2. ಲ.ನ.ಸ್ವಾಮಿ, *ಪ್ರಾಚೀನ ಕರ್ನಾಟಕದ ಕುಲುಮೆಗಳು ಮತ್ತು ತಂತ್ರಜ್ಞಾನ; ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ*, ಆರ್. ಗೋಪಾಲ್ (ಸಂ), ಮೈಸೂರು, 2008, ಪು.294–308.
3. ಎಸ್.ಡಿ. ಶೆಟ್ಟಿ, *ತುಳುನಾಡಿನ ಜೈನಧರ್ಮ ಒಂದು ಸಾಂಸ್ಕೃತಿಕ ಅಧ್ಯಯನ.* ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ. 2002, ಪುಟ.55.
4. ಎಂ. ಚಿದಾನಂದಮೂರ್ತಿ, *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ* (ಕ್ರಿ.ಶ.450–1150), ಸ್ವಪ್ನಬುಕ್ ಹೌಸ್, ಬೆಂಗಳೂರು. 2017, ಪುಟ.196–198.
5. ಲ. ನ. ಸ್ವಾಮಿ, *ಕರ್ನಾಟಕದ ಪ್ರಾಗಿತಿಹಾಸ ಕಾಲದ ಸಮಾಜ ಮತ್ತು ಜನಜೀವನ.*, ಎಸ್. ಚಂದ್ರಶೇಖರ್ ರಾವ್, ಬಿ. ಸುರೇಂದ್ರರಾವ್ (ಸಂ) *ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು*, ಸಂಪುಟ 1, 2016, ಪುಟ.34–36
6. ಲ.ನ. ಸ್ವಾಮಿ, *ಪ್ರಾಗಿತಿಹಾಸ ಕಾಲದಲ್ಲಿ ಕರ್ನಾಟಕದ ಸಾಗರೋತ್ತರ ಸಂಬಂಧಗಳು.*, ಎಸ್.ಕೆ.ಅರುಣಿ, ಹಂ.ಗ. ರಾಜೇಶ್ (ಸಂ), '*ಇತಿಹಾಸ ದರ್ಪಣ– ಕರ್ನಾಟಕದಲ್ಲಿ ಪುರಾತತ್ವ ಅಧ್ಯಯನಗಳು*', ಜನವರಿ–ಜೂನ್ 2012, ಪುಟ 109–127
7. ಅದೇ
8. ಅದೇ
9. ಲ.ನ. ಸ್ವಾಮಿ, ತುಳುನಾಡಿನ *ಸಮುದ್ರಮಾರ್ಗ ಸಂಪರ್ಕಗಳು*, ಆರ್. ಗೋಪಾಲ್ (ಸಂ), *ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ*, ಮೈಸೂರು. 2007, ಪುಟ. 298–299
10. ಅದೇ

11. ಲ.ನ. ಸ್ವಾಮಿ, 2012, ಪುಟ 109–127
12. ಅದೇ
13. Malathi K Moorthy, *Trade and Commerce in Coastal South Kanara* (1799-1862), unpublished Ph.D. Thesis, Mangalore, 1991, P.88.
14. ಅದೇ,
15. Sanjay Subramanyam, *The Political Economy of commerce*. Southern India 1500-1650., Cambridge University, 2004, pp.120-121.
16. S.I.I. XV 164, ಕ್ರಿ.ಶ.1220, ಕಂದಗಲ್ಲ(ತಾ) ಹುನಗುಂದ
17. EC.VI. 122., A.D 1140.Chikmangalore.
18. Saletore B.A., *Ancient Karnataka vol-I History of Tuluva*, Oriental book Agency poona 1936, pp 520-521.
19. ಕೆ.ವಿ. ರಮೇಶ್, ಎಂ.ಜೆ. ಶರ್ಮ, '*ತುಳುನಾಡಿನ ಶಾಸನಗಳು*', ಗೀತಾ ಬುಕ್ ಹೌಸ್, ಮೈಸೂರು, 1978 ಪುಟ. 1–5
20. ಬಿ. ವಸಂತ ಶೆಟ್ಟಿ, *ಡಾ.ಪಿ. ಗುರುರಾಜ ಭಟ್‌ಸ್ ಕಾಂಟ್ರಿಬ್ಯೂಷನ್ ಟು ಎಪಿಗ್ರಾಫಿ*', 'ದ ಜರ್ನಲ್ ಆಫ್ ಇನ್‌ಸ್ಟಿಟ್ಯೂಟ್ ಆಫ್ ಇಂಡಿಯನ್ ಸ್ಟಡೀಸ್, ವಾಲ್ಯೂಂ 2, 1982, ಪು.27.
21. ರಶ್ಮಿ ಹೆಚ್. ಎಂ., ಡಾ.*ಪಿ. ಗುರುರಾಜ ಭಟ್ಟರ ಸಂಶೋಧನೆಗಳ ಒಂದು ಅಧ್ಯಯನ, ಪ್ರಾಗಿತಿಹಾಸ, ಶಾಸನಗಳು, ನಾಣ್ಯಗಳಿಗೆ ಅನ್ವಯಿಸಿದಂತೆ.*, ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ–ಅಪ್ರಕಟಿತ. 2009, ಪುಟ. 30
22. ಪಿ. ಗುರುರಾಜ ಭಟ್, , '*ಉದಯಪುರದಲ್ಲಿ ಎರಡು ಅಪೂರ್ವ ಶಾಸನಗಳ ಪತ್ತೆ*', ನವಭಾರತ, 1972 ಮೇ
23. ಪಿ. ಗುರುರಾಜ ಭಟ್, 1–8—1968, *ಕಾಪುವಿನ ಇತಿಹಾಸ* 1–3, ನವಯುಗ
24. ಈ ಶಾಸನವನ್ನು ಪ್ರತಿ ಮಾಡಲು ಗುರುರಾಜ ಭಟ್ಟರಿಗೆ ಬಿ. ವಸಂತ ಶೆಟ್ಟಿಯವರು ಸಹಾಯ ಮಾಡಿದ್ದರು. ಆಗಸ್ಟ್ 26, 1976., *ನ್ಯೂ ಲೈಟ್ ಆನ್ ಜೈನಿಸಂ ಇನ್ ಸೌತ್ ಕೆನರಾ*, ಉದಯವಾಣಿ, ರಿಪೋರ್ಟ್ ಇನ್ ಹಿಂದೂ
25. ಪಿ. ಗುರುರಾಜ ಭಟ್, '*ಸ್ಟಡೀಸ್ ಇನ್ ತುಳುವ ಹಿಸ್ಟರಿ ಆಂಡ್ ಕಲ್ಚರ್*', ಉಡುಪಿ, 1975, ಪುಟ 30–31.
26. ARSIE., 1901, No.100; SII., Vol, No.284,
27. Ep.Ind., Vol.IX, p.22 and plate

28. ಕೆಳದಿ ವೆಂಕಟೇಶ ಜೋಯಿಸ (ಸಂ), *ಕೆಳದಿ ಅರಸರ ಶಾಸನ ಸಂಪುಟ*, ನಂ.94, ಗದಗ. 1991, ಪುಟ.142.
29. ಕೆ.ವಿ. ರಮೇಶ್, 1970, '*ಎ ಹಿಸ್ಟರಿ ಆಫ್ ಸೌತ್ ಕೆನರಾ*', ಧಾರವಾಡ, ಪುಟ. 63, '*ವರಾಂಗ ಇನ್‌ಸ್ಕ್ರಿಪ್ಷನ್ ಆಫ್ ಕುಂದಾನ*'; ಕೆ.ವಿ. ರಮೇಶ್ ಮತ್ತು ಎಂ.ಜೆ. ಶರ್ಮಾ, '*ತುಳುನಾಡಿನ ಶಾಸನಗಳು*', 1978, ಪುಟ. 5
30. ಬಿ. ವಸಂತ ಶೆಟ್ಟಿ, '*ದ ಜರ್ನಲ್ ಆಫ್ ದ ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾ*, ವಾಲ್ಯೂಂ 5, 1978.
31. ಕೆ.ಜಿ. ವಸಂತಮಾಧವ; *ಕೆಳದಿ ವಿಶ್ಲೇಷಣೆ*, ಪುಟ 35–40. ಗಣಪತಿರಾವ್ ಐಗಳ್., ಮಂಜೇಶ್ವರ 1924, ಪುಟ 1–31.
32. K.G. Vasantha Madhava: *Archives in Kanara* 1565-1763, Indian Archives New Delhi. 1976, No.2, p. 45-52.
33. ARSIE., 1929-30. No.564, 558,559.
34. ARSIE., 1929-30. No.564, 558,559.
35. SII IX, pt.II No. 430. MAR., 1934, No.28, 29.; A.K. Shastry, History of Sringeri matha (unpublished)
36. ಕೆ. ಜಿ. ವಸಂತ ಮಾಧವ, ಪೂರ್ವೋಕ್ತ, ಪುಟ.45–51 1976,
37. G.M. Moraes, '*Haryab of Ibn Battuta journal of Bombay Branch of Royal Asiatic socieity*' No.15, new series 193
38. ಎಚ್.ಎಲ್. ನಾಗೇಗೌಡ, *ಪ್ರವಾಸಿ ಕಂಡ ಇಂಡಿಯಾ*, ಸಂಪುಟ–2, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, 1966, ಪುಟ 125–128
39. ಅದೇ, ಪುಟ 151–171
40. ಅದೇ, ಪುಟ 187
41. R.C.Temple, *The Itinerary of ludovicodi Verthema of Bologna*, London, 1928, p.50:,Malathi. K. Moorthy, 1991, p.40
42. Duarte Barbosa, *A Description of the Coast of East Africa and Malabar in the Beginning of the Sixteenth Century*, 2 volumes translated, Stanley, London., p.189., ಎಚ್.ಎಲ್. ನಾಗೇಗೌಡ, 1966, ಸಂಪುಟ.2, ಪುಟ 280–303
43. ಸದಾನಂದ ಕನವಳ್ಳಿ (ಅನುವಾದ), ರಾಬರ್ಟ್ ಸಿವೆಲ್ (ಮೂಲ), *ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. 1992, ಪುಟ 258–311,

44. ಎಚ್.ಎಲ್. ನಾಗೇಗೌಡ, 1966, ಸಂಪುಟ–2, ಪುಟ 458–464
45. DellaValle, *Travels in India*, vol.II., translated by brey Edward, London, 1892, p.221
46. Karnataka Inscription Vol.I, p.95, *South Indian Inscriptions*, vol. VII. NOS. 202, 207
47. ಅದೇ.
48. ಜಿ.ಎಸ್.ದೀಕ್ಷಿತ್, *ಕೃಷ್ಣದೇವರಾಯನ ಇತಿಹಾಸಕ್ಕೆ ಒಂದು ಹೊಸ ಆಕರ*, ವಿಜಯ ನಗರ ಅಧ್ಯಯನ ಸಂಪುಟ, 1996, ಪುಟ.85–87
49. ಟೋಮ್ ಪಿರೆಸ್, *ದ ಸುಮಾ ಓರಿಯಂಟಲ್, ದ ಬುಕ್ ಆಫ್ ಫ್ರಾನ್ಸಿಸ್ಕೋ ರೊಡ್ರಿಗಸ್.* ವಾಲ್ಯೂಂ 1. ಲಂಡನ್, 1944, ಪುಟ 60–65., ಎಚ್.ಎಲ್. ನಾಗೇಗೌಡ, , ಸಂಪುಟ–4, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, 1972, ಪುಟ 46,47
50. ಎಚ್.ಎಲ್. ನಾಗೇಗೌಡ, 1972, p 47
51. ಎಚ್.ಎಲ್. ನಾಗೇಗೌಡ, 2007, p 205
52. ಅದೇ
53. ಹೆಚ್.ಎಲ್. ನಾಗೇಗೌಡ, *'ಪ್ರವಾಸಿ ಕಂಡ ದಕ್ಷಿಣ ಕನ್ನಡ', ಸುದರ್ಶನ.* ಅದ್ಯನಡ್ಕ ಕೃಷ್ಣ ಭಟ್ (ಸಂ), 1977, ವಿಜಯ ಕಾಲೇಜ್ ಟ್ರಸ್ಟ್, ಮುಲ್ಕಿ, ದಕ್ಷಿಣ ಕನ್ನಡ, ಪುಟ. 82–94.
54. ಕೆ.ಎಂ. ನಂಬಿಯಾರ್, 1997, *ಮದ್ದಳೆಯ ಮಾಯಾಲೋಕ*, ರಿಜಿನಲ್ ರಿಸೋರ್ಸ್‌ರ್ಸ್ ಸೆಂಟರ್ ಫಾರ್ ಫ್ಲೋಕ್ ಪರ್ಫಾರ್ಮಿಂಗ್ ಆರ್ಟ್ಸ್, ಎಂ.ಜಿ.ಎಂ ಕಾಲೇಜ್ ಕ್ಯಾಂಪಸ್, ಉಡುಪಿ, ಪುಟ 7–8
55. ಅಪ್ಪಣ್ಣ ಹೆಗ್ಡೆ ಬಸರೂರು, ಕ್ಷೇತ್ರಕಾರ್ಯ ಮಾಹಿತಿ.
56. ಕೊಟ್ಟಣದಲ್ಲಿ ಭತ್ತವನ್ನು ಕುಟ್ಟಿ ಅಕ್ಕಿ ಮಾಡುವುದು ಅಂದಿನ ಕ್ರಮವಾಗಿತ್ತು. ಸಂಕ್ಷಿಪ್ತ ಕನ್ನಡ ನಿಘಂಟು ಕನ್ನಡ ಸಾಹಿತ್ಯ ಪರಿಷತ್ತು, 2013, ಬೆಂಗಳೂರು. ಪುಟ 324
57. ಕೆ.ಎಂ. ರಾಘವ ನಂಬಿಯಾರ್, 1997, 'ಮದ್ದಳೆಯ ಮಾಯಾಲೋಕ' ಪುಟ 7–9. ಅಪ್ಪಣ್ಣ ಹೆಗ್ಡೆ ಬಸರೂರು, ಕ್ಷೇತ್ರಕಾರ್ಯ ಮಾಹಿತಿ
58. Mathew K.S.(ed), 1995, *Mariners, Merchants and Oceans*, Manohar New Delhi, pp.175-190:, Mohan Krishna Rai, *Urbanisation of Mangalore –A Colonial Experience 1799-1947*,(unplublished), p-99

59. Reports etc, on public works, op.cit no.15, pp.280-282:, ಮಾಲತಿ ಮೂರ್ತಿ, 1991, ಪುಟ.103:, ಮೋಹನ್‌ಕೃಷ್ಣ ರೈ, ಪುಟ.100.
60. S.i.I. VII. No. 198.
61. K.Abhishankar (ed), 1973, *South Kanara District Gazetteer*, Bangalore. pp.52-54
62. Malathi K.Moorthy: Ibid. 1991, p.25.
63. Malathi K.Moorthy: Ibid. 1991, p.25.26.
64. ಶಾಸ್ತ್ರಿ ಬಿ.ಎಸ್, *ಕೆಳದಿ ಅರಸರು ಹಾಗೂ ಪೋರ್ಚುಗೀಸರು.* ಧಾರವಾಡ. 1972, ಪುಟ.85,
65. *ಥಾಮಸ್ ಮುನ್ರೋ ಟು ವಿಲಿಯಂ ಪಿಟ್ರೆ,* ಪಿ ಎಮ್‌ಬಿಆರ್, 28 ಆಗಸ್ಟ್ 1800, ವಾಲ್ಯೂಂ.261, ಪು.7501.
66. H.R. Karunakar ,1985, *Socio –Economic Conditions in South kanara 1862 – 1956*, Mysore, P 274.
67. L.N. Swamy, 2000, p. 14-16, 24. Malathi K.Moorthy:1991., P. 28-30, 103-104. *Karnataka State Gazetteer, South Kanara*, P.10.
68. Sturrock, J: 1894, *The South kanara Manual*, vol. I, P.219.
69. Gazetteer of Bombay Presidency, vol. XV – I Kanara (Bombay 1883), P 211
70. ಕೆ. ಅಭಿಶಂಕರ್ (ಸಂ), 1973, *ದಕ್ಷಿಣ ಕನ್ನಡ ಜಿಲ್ಲೆಯ ಗೆಜೆಟಿಯರ್.* ಬೆಂಗಳೂರು, ಪುಟ. 52–54
71. ಮೋಹನ್‌ಕೃಷ್ಣ ರೈ; 2003, ಪು. 214., *ಮ್ಯಾನ್ಯುವಲ್ ಆಫ್ ದಿ ಅಡ್ಮಿನಿಸ್ಟ್ರೆಷನ್ ಆಫ್ ದಿ ಮದ್ರಾಸ್ ಪ್ರೆಸಿಡೆನ್ಸಿ,* ಸಂ.2; ಪು, 147., ಸ್ಟರಕ್; 1894, ಪು, 12–13.
72. ಲ.ನ. ಸ್ವಾಮಿ, 2000, ಪುಟ.14–15
73. ಅದೇ
74. ಲ.ನ. ಸ್ವಾಮಿ, 2000, ಪುಟ 14.15., ಬಿ. ಸುರೇಂದ್ರರಾವ್, 2016, *ಕರಾವಳಿ ಜಾನಪದವು ಅನಾವರಣಗೊಳಿಸುವ ಸಮಾಜ ಮತ್ತು ಆರ್ಥಿಕತೆ, ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು,* ಸಂ.6, ಬೆಂಗಳೂರು, ಪುಟ.53.
75. ಸಂಜಯ್ ಸುಬ್ರಹ್ಮಣಂ, 21.4.1984, *'ದಿ ಪೋರ್ಚುಗೀಸ್, ದಿ ಪೋರ್ಟ್ ಆಫ್ ಬಸ್ರೂರು ಆಂಡ್ ದಿ ರೈಸ್ ಟ್ರೇಡ್ 1600–50',* ದಿ ಇಂಡಿಯನ್ ಇಕಾನಮಿಕ್ ಅಂಡ್ ಸೋಶಿಯಲ್ ಹಿಸ್ಟರಿ ರಿವ್ಯೂ, ಪುಟ.441–442.

76. ಮಾಲತಿ ಕೆ.ಮೂರ್ತಿ, 1991, ಪುಟ.60.

77. ಲ. ನ ಸ್ವಾಮಿ. 2000, ಪುಟ. 149–164

78. ರಿಪೋರ್ಟ್ ಆಫ್ ಜೆ.ಜಿ. ರೆನ್‌ಶಾ ಡೆಟೆಡ್ 10 ನವೆಂಬರ್, 1802, ಪಿ ಎಮ್ ಬಿ ಆರ್, 29 ನವೆಂಬರ್, 1802, ವಾಲ್ಯೂಂ 333 'ಎ' ಪು.13963.

79. Francis Buchanan, *A Journy from Madras Through The Countries of Mysore, Canara and Malabar*, Vol. 3, Madras, 1870, p.104.

80. Moegling H, *Coorg Memoirs, Bangalore*, 1855, PP 18-19: H.R Karnukar,1985, P. 275.

81. Pietro della velle,1892, P.295

82. Alexender Hamilton, *A Few Accounts of The East Indies*, Vol. I p. 159:, H.R Karunakar, 1985, P.276.

83. Ibid, P.277

84. Pietro Della velle: 1892, p. 298., H.R. Karunakar,1985, p. 276

85. Sturrock;1894, *The South Kanara Manual* vol. I, P. 221, *Selection from the Collector of South Canara: Assistant Custom's Collector's Report dated 16th January 1901*. P.9, H.R. Karunakar ibid P. 286.

86. Sanjay Subramanya, 21.4.1948, The Portuguese, the port of Basrur and Social History Review, P.441-442

87. S. Gururaj Achar, 1974, *Some Aspects of Economic and Social life in Karnataka.* Mysore. P. 128

88. ಡಿ. ಎಸ್. ಜಯಪ್ಪ ಗೌಡ, *ಕರ್ನಾಟಕದ ಕಡಲಾಚೆಯ ಸಂಪರ್ಕಗಳು* (ಕ್ರಿ.ಶ.1350 ರವರೆಗೆ), 1983, ಪುಟ 8, 119, 120

89. ಅದೇ, ಪುಟ 120–121

90. Derrett J.D.M, *The Hoysalas, a medieval Indian Royal family*, 1957, p.7.

91. ಲ.ನ. ಸ್ವಾಮಿ ಮತ್ತು ಸುರೇಶ್ ತಾಂಡೆಲ, *ಹೊನ್ನಾವರ ಬಂದರಿನ ಹಿನ್ನಾಡೆಗೆ ಬೆಳಗಾವಿ ಜಿಲ್ಲೆ ಸಾಧ್ಯಾಸಾಧ್ಯತೆಯ ವಿವೇಚನೆ,* 2010, ಪುಟ. 821–823:, L N Swamy: 2000,

92. ಮಾಲತಿ ಕೆ.ಮೂರ್ತಿ, 1991, ಪುಟ.59–60.

93. ಹೆಚ್.ಎಲ್. ನಾಗೇಗೌಡ, 1966, ಪುಟ.267

94. Y. Kuberappa, *development of Agriculture in Malnad Region* – P. 186

95. ಲ.ನ. ಸ್ವಾಮಿ & ಸುರೇಶ್ ತಾಂಡೆಲ, 2010, *'ಹೊನ್ನಾವರ ಬಂದರಿನ ಹಿನ್ನಾಡೆಗೆ ಬೆಳಗಾವಿ ಜಿಲ್ಲೆ ಸಾಧ್ಯಾಸಾಧ್ಯತೆಯ ವಿವೇಚನೆ,* ಪಿ. 821–823:, L N Swamy: 2000, p.14-15

96. Meera Abraham, *Two Medieval Merchant Guilds of South India, 1988,* pp.49-53.

97. ಕೆ.ವಿ.ರಮೇಶ, *ತುಳುನಾಡಿನ ಇತಿಹಾಸ,* ಉಡುಪಿ, 1968, ಪುಟ.63., ARSIE, 930-33 NO. 262

98. ಹೆಚ್.ಎಲ್. ನಾಗೇಗೌಡ, 1974, ಸಂಪುಟ.2, ಪುಟ. 280–303

99. ಅದೇ

100. ಕೆ.ವಿ.ರಮೇಶ; 1968, ಪುಟ.21:, M.A.R 1936.,p. 72, FF and Plate

101. Logan : *Malabar manual*, P.224.

102. *The Manual of Madras Administration*, Vol. I, P. 326

103. S.I.I., VII, No. 198.

104. V.R. Ramachandra Dikshitar, *South India and China*, (First ed.1945), reprint madras, 1991, pp. 37-38.

105. Saletore B.A, *Karnataka Trans Oceanic Contact*, Dharwar, 1955, P.67

106. ಅದೇ.

107. A. Appadorai, *Economic Conditions in South India*, (First.ed 1936 reprint) Madras vol.II, 1990, pp 567-568

108. ಗಣಪತಿ ರಾವ್ ಐಗಳ್, *ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ,* ಮಂಗಳೂರು, 1923, ಪುಟ. 269.

109. Fulner R.J. Lima subsides oara historia Da India Portuguese quoted by B.S. Shastry, 1987, *"A Glimpse of the socio economic condition of the port – towns of coastal Karnataka in the 16th & the 17th centuries as described in some contemporary Portuguese sources"* studies in Karnataka history & culture, proceedings of the karnataka history congress, II, Mysore, P. 96

110. Saletore B.A., *Ancient Karnataka, History of Tulvas*, Poona 1936, P. 483.

111. Ashin Das Gupta and M.N. Pearson (ed.), *India and the Indian ocean*, oxford, 1987, pp 166-167

112. K.G. Vasatha Madhava, *Religions in Costal Karnataka 1500-1763.*, 1985, P.236
113. Sanjay Subramanyam, 2004, P.46
114. ಬಿ.ಸುರೇಂದ್ರ ರಾವ್, *ಕರಾವಳಿ ಜಾನಪದವು ಅನಾವರಣಗೊಳಿಸುವ ಸಮಾಜ ಮತ್ತು ಆರ್ಥಿಕತೆ.*, ಎಸ್. ಚಂದ್ರಶೇಖರ್, ಬಿ. ಸುರೇಂದ್ರರಾವ್ (ಸಂ), *ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು* ಸಂಪುಟ.6, ಬೆಂಗಳೂರು, 2016, ಪುಟ.46
115. ಲ.ನ.ಸ್ವಾಮಿ.2005, ಪು.297.
116. ಅಪ್ಪಣ್ಣ ಹೆಗ್ಡೆ ಬಸರೂರು, ಕ್ಷೇತ್ರಕಾರ್ಯ
117. S.D. Goitein P.16.
118. ಬಿ. ಸಚ್ಚಿದಾನಂದ ಹೆಗ್ಡೆ, *ತುಳುಭಾಷೆ–ತುಳುನಾಡು; ಪುರಾಣ ಜಾನಪದಗಳಲ್ಲಿ ತುಳುನಾಡವರು*, ನ್ಯೂ ವೇವ್ ಬುಕ್ಸ್, ಬೆಂಗಳೂರು, 2010, ಪು.42
119. ಬಿ. ಎ. ಸಾಲೆತ್ತೂರ್, 1955, ಪುಟ. 67
120. ಅಪ್ಪಣ್ಣ ಹೆಗ್ಡೆ ಬಸರೂರು, ಕ್ಷೇತ್ರಕಾರ್ಯ ಮಾಹಿತಿ
121. Hussain.M, *The Rehla of Ibn Battuta*, Baroda, 1953, P. 185.
122. ಅದೇ No. 262.
123. Sturrock, *The South Kanara Manual*, Vol. I, 1894, P. 217.
124. Govinda Pai M, Ptolemy's *Hippokoura, an article in indica,* Indian Historical Research Institute Silver Jubilee Commemoration Volume,Bombay, 1953, P. 68
125. ರಾಜಾರಾಮ್ ಹೆಗಡೆ, *ಮಲೆನಾಡು ಕರ್ನಾಟಕದ ಸಾಗರೋತ್ತರ ಸಂಬಂಧ ಹಾಗೂ ಅದರ ಪ್ರಭಾವ – ಒಂದು ಪರಾಮರ್ಶೆ, ಮ್ಯಾರಿಟೈಮ್ ಕಾನ್ಟ್ಯಾಕ್ಟ್ ಆಫ್ ಮಲ್ನಾಡ್ ಕರ್ನಾಟಕ ಅಂಡ್ ಇಟ್ಸ್ ಇಂಪ್ಯಾಕ್ಟ್ ಆನ್ ಸೊಸೈಟಿ,* ಪ್ರಭಾಕರ್ ರಾವ್. ಕೆ(ಸಂ), 2012, ಪುಟ 5,6.
126. Robert Sewell, *A forgotton empire*,1982, P.86.
127. Ibid., Duarte Barbosa, 1918, *The Book of Duarte Barbosa*, London, vol. I, PP 182-197.
128. H. Heras,*The Aravidu dynasty,* PP 62-63; Barbosa,1918, PP. 189-198
129. Barbosa, 1918, Pp. 189 -198.
130. Sewell ; '*A forgotton empire*' , P.229
131. Vascoda Gama – *Da- Gama's three voyages* (Hakluyat Society), pp 310-312.

132. Durate barbosa, 1918, PP 187-189
133. The Portuguese in India,Vol.I, P.411.
134. English Factories, PP 93-94,1637 -41.
135. Alexander Hamilton: *A new account of the East Indies*, Vol. I, P. 161.
136. Pietro Della Valle, 1892, P. 276
137. Sanjay Subramayam, 2004, p.60
138. P. Gururaj Bhat, 1985, *Studies in Tuluva History & Culture, Kallianpur*. p.30-31., Malathi K Moorthi, 1991, *Trade and Commerce in Colonial South Kanara 1799 -1862*, Mangalore University, p.88
139. K.S. Shivana,1983, *The Agrarian Syastem of Karnataka 1336-176*, Mysore, PP. 106 to 109
140. Malathi K Moorthy,1991, P-88
141. ಲ.ನ. ಸ್ವಾಮಿ, *ಕರ್ನಾಟಕದ ಬಂದರುಗಳು ಮತ್ತು ಮಲೆನಾಡಿನ ಸಂಬಂಧ.* 2012, ಪು 2,4,6.
142. ಲ.ನ. ಸ್ವಾಮಿ; 2000. ಪುಟ 104–105
143. ಲ.ನ. ಸ್ವಾಮಿ; *ಕರ್ನಾಟಕದ ಬಂದರುಗಳು ಮತ್ತು ಮಲೆನಾಡಿನ ಸಂಬಂಧ; ಮ್ಯಾರಿಟೈಮ್ ಕಾನ್ಟ್ಯಾಕ್ಟ್ ಆಫ್ ಮಲ್ನಾಡ್ ಕರ್ನಾಟಕ ಅಂಡ್ ಇಟ್ಸ್ ಇಂಪ್ಯಾಕ್ಟ್ ಆನ್ ಸೊಸೈಟಿ,* ಪ್ರಭಾಕರ್ ರಾವ್. ಕೆ(ಸಂ), 2012, ಪುಟ.41:, ಬಿ.ಎ. ಸಾಲೆತ್ತೂರ್, 1956, *ಕರ್ನಾಟಕಾಸ್ ಟ್ರಾನ್ಸ್ ಓಶಾನಿಕ್ ಕಾನ್ಟ್ಯಾಕ್ಟ್ಸ್*, ಧಾರವಾಡ.
144. ಎಚ್. ಎಲ್. ನಾಗೇಗೌಡ, 1972, ಪುಟ 16.
145. ಎಚ್. ಎಲ್. ನಾಗೇಗೌಡ 1972, ಪುಟ 43–44
146. ಸಂಜಯ್ ಸುಬ್ರಹ್ಮಣ್ಯಂ, ದ ಪೋರ್ಚುಗಿಸ್; *ದ ಪೋರ್ಟ್ ಆಫ್ ಬಸರೂರ್ ಆಂಡ್ ದ ರೈಸ್ ಟ್ರೇಡ್*, 1600–50, ಪುಟ. 441–442.
147. ಲ ನ. ಸ್ವಾಮಿ; 2000, ಪು.105.
148. ಅದೇ.
149. *ಕರ್ನಾಟಕ ಗೆಜೆಟಿಯರ್, ವಾಲ್ಯುಂ–7,* ಕನ್ನಡ, ಪುಟ 925.
150. ಲ.ನ. ಸ್ವಾಮಿ, 2000, ಪುಟ, 104–105., ನೀಲಕಂಠ ಶಾಸ್ತ್ರಿ;1939;216..
151. K.G. Vasantha Madhava, *Western Karnataka-Its Agrarian Relations 1500-1800 AD.*, Navrang, New Delhi 1991, p.236
152. Tome Pires, *The Suma Oriental*, Hakluyat Society, London, 1944. Vol.2, p 268-269

153. Sanjay Subramanyam, *The political economy of commerce.* Southern India 1500-1650., 2004, pp-121-122.
154. ಕೆ.ಜಿ. ವಸಂತಮಾಧವ; 1991, ಪುಟ 238
155. ಬಿ.ಎಸ್.ಶಾಸ್ತ್ರಿ, *ಸ್ಟಡಿಸ್ ಇನ್ ಇಂಡೊ–ಪೋರ್ಚುಗೀಸ್ ಹಿಸ್ಟರಿ*, ಬೆಂಗಳೂರು, 1991, ಪುಟ 203.
156. ಪಿ.ಗುರುರಾಜ್ ಭಟ್; 1969; ಪುಟ.3
157. ಲ.ನ. ಸ್ವಾಮಿ; 2000, ಪುಟ.108
158. S.I.I., vol IX pt 11, 459
159. ಮಹಮ್ಮದ್ ಹುಸೇನ್ ನೈನಾರ್, *ಅರಬ್ ಜಿಯಾಗ್ರಫರ್ಸ್ ನಾಲೆಡ್ಜ್ ಆಫ್ ಸೌತ್ ಇಂಡಿಯಾ*; ಮದ್ರಾಸ್ 1942, ಪುಟ.28,29,61;
160. ಕೆ.ಜಿ.ವಸಂತಮಾದವ; 1997, ಪುಟ 36
161. Sanjay Subramanyam, *The Political Economy of Commerce Southern India 1500-1650*, 2004,p.31
162. Sanjay Subramanyam; 1990; p 31–32.
163. ಅದೇ
164. ಅದೇ. ಪುಟ 31
165. ಬಿ.ಎಸ್. ಶಾಸ್ತ್ರಿ; 203–210.
166. Sanjay Subramanyam; 1990; p 31–32.
167. ಪಿ.ಗುರುರಾಜ ಭಟ್, *'ಬಾರಕೂರು'*; 1972; ಐ.ಬಿ.ಎಚ್.ಪ್ರಕಾಶನ. ಬೆಂಗಳೂರು–9. ಪುಟ.21
168. ಅದೇ. ಪುಟ. 38–39.
169. B. Vasanth Shetty, *Barkur A-Metropolitan city of Antiquity-its History and Culture*, Mysore, 1984, p.319
170. ಅದೇ.
171. ಪಿ.ಗುರುರಾಜ್ ಭಟ್; 1969; ಪುಟ 2
172. ಕೆ.ವಿ.ರಮೇಶ; 1970; ಪುಟ 139.
173. ಲ.ನ.ಸ್ವಾಮಿ; 2000, ಪುಟ. 109
174. ಅದೇ, ಪುಟ 109
175. ಬಿ.ವಸಂತ ಶೆಟ್ಟಿ; 1984, ಪುಟ.314

176. ನೈನಾರ್; 1942; ಪುಟ.34.
177. ಬಿ.ವಸಂತ ಶೆಟ್ಟಿ; 1984, ಪುಟ.315.
178. ಲ.ನ.ಸ್ವಾಮಿ; 2000, ಪುಟ 108–109.
179. ಡ್ಯುರೆಟ್ ಬಾರ್ಬೋಸಾ; ವಾಲ್ಯೂಂ 1; 1918, ಪುಟ.193
180. ರಾಬರ್ಟ ಸೀವೆಲ್; 1982; ಪುಟ.236
181. ಬಿ.ವಸಂತಶೆಟ್ಟಿ; 1984, ಪುಟ 316
182. ಅದೇ
183. ಜೆ.ಸ್ಟರಕ್; 2003, *ಸೌತ್ ಕೆನರಾ ಮ್ಯಾನ್ಯುವಲ್.ವಾಲ್ಯೂಂ.I*; ಪುಟ 68–69
184. ಬಿ.ವಸಂತ ಶೆಟ್ಟಿ; 1984, 316–318
185. ಅದೇ, ಪುಟ.318
186. ಅದೇ
187. ಹೆಚ್.ಎಲ್. ನಾಗೇಗೌಡ; 1964, ಪುಟ 119
188. M.A.R; 1926; p.11–22
189. ಬಿ.ಎ. ಸಾಲೆತ್ತೂರು; 1956, ಪುಟ.584.
190. ಲ.ನ.ಸ್ವಾಮಿ; 2000, ಪುಟ.110.
191. ಅದೇ
192. ಪಿ.ಗುರುರಾಜ್ ಭಟ್; 1969; ಪುಟ 12.
193. ಕೆ.ಜಿ.ವಸಂತ ಮಾಧವ; 1991, ಪುಟ 242.
194. ಅದೇ
195. Learmonth A.T.A : *A regional synthesis, mysore states*, vol. II, P.31
196. Selected papers: vol. II, *Bureau of economics and statistics* (Bangalore 1969), P.112, 116.
197. ಎನ್. ಶ್ಯಾಂ ಭಟ್; *ಹಿಸ್ಟರಿ ಫ್ರಮ್ ಬಿಲೊ ಎ ಕೇಸ್ ಸ್ಟಡಿ ಆಫ್ ಫೋಕ್ಲೋರ್ ಇನ್ ತುಳುನಾಡು; ಇಂಡಿಕಾ*, ಪುಟ 28;. ಕನರಾಡಿ ವಾದಿರಾಜ್ ಭಟ್, *ಪಾಡ್ದನಗಳು*, 1974., ಕಿನ್ನಿಗೋಳಿ ದ.ಕ. ಪುಟ 24–25., ಸುಶೀಲಾ ಪಿ ಉಪಾಧ್ಯಾಯ; *ದಕ್ಷಿಣ ಭಾರತ ಜಾನಪದ*, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, 1998 ಪುಟ.2
198. ಬಿ.ಎ. ಸಾಲೆತ್ತೂರು; 1936, ಪುಟ.459; ಶ್ಯಾಂ ಭಟ್; ಪುಟ 31.
199. ಕನರಾಡಿ ವಾಧಿರಾಜ ಭಟ್; 1974. ಪುಟ.193
200. ಸುಶೀಲಾ ಪಿ. ಉಪಾಧ್ಯಾಯ; 1998, ಪುಟ. 154–155.,

201. ವಾದಿರಾಜ ಭಟ್‌ರು ಪಾಡ್ದನಗಳು ಗ್ರಂಥದಲ್ಲಿ ಕ್ರಿ.ಶ. 1ನೇ ಶತಮಾನದಲ್ಲಿ ಇರಾನ್ ಮತ್ತು ಅರಬ್ ಒಟ್ಟಿಗೆ ತುಳುನಾಡಿನಲ್ಲಿ ವ್ಯಾಪಾರ ಇತ್ತೆಂದಿದ್ದಾರೆ.

202. ಸುಶೀಲಾ ಪಿ. ಉಪಾಧ್ಯಾಯ; 1998, ಪುಟ.153

203. ಶ್ಯಾಂ ಭಟ್; ಪುಟ 32

204. ಅಮೃತ ಸೋಮೇಶ್ವರ: 1997 ಪುಟ 39 ಹಂಪಿ. ಶ್ಯಾಂ ಭಟ್;32.

205. ಅದೇ, ಪುಟ. 500–502.; ಬಿ.ಎ. ಸಾಲೆತ್ತೂರು; 1936, ಪುಟ.459–583.

## ಅಧ್ಯಾಯ –ಮೂರು

# ತುಳುನಾಡಿನಲ್ಲಿ ವಿಜಯನಗರೋತ್ತರ ಕಾಲದ ವ್ಯಾಪಾರ ಮತ್ತು ವಾಣಿಜ್ಯ

### 3.1. ಪೀಠಿಕೆ

ದಕ್ಷಿಣ ಭಾರತದ ರಾಜಕೀಯ ರಂಗಕ್ಷೇತ್ರದಲ್ಲಿ ದೃಢವಾದ ವಿಜಯನಗರ ಸಾಮ್ರಾಜ್ಯದ ಪತನದೊಂದಿಗೆ ಸಣ್ಣಪುಟ್ಟ ರಾಜಮನೆತನಗಳು ಅಸ್ತಿತ್ವಕ್ಕೆ ಬಂದವು. ಅಸ್ತಿತ್ವಕ್ಕೆ ಬಂದಂತಹ ರಾಜಮನೆತನಗಳು ಪರಸ್ಪರ ವ್ಯಾಪಾರ ವಹಿವಾಟಿನ ಹಿನ್ನೆಲೆಯಲ್ಲಿ ಆರ್ಥಿಕವಾಗಿ, ರಾಜಕೀಯವಾಗಿ ಸದೃಢತೆಯನ್ನು ಕಟ್ಟುವ ಪ್ರಯತ್ನವನ್ನು ಪ್ರಾರಂಭಿಸಿದರು. ಈ ಹಿನ್ನೆಲೆಯಲ್ಲಿ ಮೈಸೂರು ಮತ್ತು ಕೆಳದಿ ಅರಸರು ವ್ಯಾಪಾರಿ ಮಾರ್ಗಗಳ ಮೇಲೆ ಹತೋಟಿಯನ್ನು ಸಾಧಿಸಲಿಕ್ಕೆ ಪ್ರಯತ್ನಪಟ್ಟರು. ವಿಶೇಷವಾಗಿ ತುಳುನಾಡಿನ ಅಂದಿನ ಕರಾವಳಿ ಕರ್ನಾಟಕದ ಇಂದಿನ ಉತ್ತರ ಕನ್ನಡ, ದಕ್ಷಿಣ ಕನ್ನಡ, ಉಡುಪಿ ತೀರದ ಜಿಲ್ಲೆಗಳಲ್ಲಿ ಪ್ರಭುತ್ವವನ್ನು ಸಾಧಿಸಲು ಪ್ರಯತ್ನಪಟ್ಟರು. ಈ ಪ್ರಯತ್ನದಲ್ಲಿ ಇಕ್ಕೇರಿ ಅರಸರು ಹೆಚ್ಚಿನ ಪ್ರಭುತ್ವವನ್ನು ಸಾಧಿಸುತ್ತಾರೆ.

ಕರ್ನಾಟಕದಲ್ಲಿ ಪೋರ್ಚುಗೀಸರ ಆಗಮನ ಆಗುವುದು ಮತ್ತು ಅವರ ವ್ಯಾಪಾರ ಚಟುವಟಿಕೆಗಳು ಪ್ರಾರಂಭವಾಗುವುದು. 15ನೇ ಶತಮಾನದ ಕೊನೆಯ ಹಂತದಲ್ಲಿ 16ನೇ ಶತಮಾನದಿಂದ 18ನೇ ಶತಮಾನದ ವರೆಗೆ ವಿಜಯನಗರ, ಕೆಳದಿ ನಾಯಕರು, ಸ್ಥಳೀಯ ಪಾಳೆಗಾರರು ಇವರೆಲ್ಲರ ಸಂಪರ್ಕಕ್ಕೆ ಪೋರ್ಚುಗೀಸರು ಬರಬೇಕಾಯಿತು. ಅವರ ಮುಖ್ಯ ಉದ್ದೇಶ ವ್ಯಾಪಾರ–ವಾಣಿಜ್ಯ, ಸಾಧ್ಯವಾದರೆ ಮಾತ್ರ ಕ್ರೈಸ್ತಮತದ ಪ್ರಚಾರ. ಆದರೆ ತದನಂತರದಲ್ಲಿ ಇವರಿಗೆ ಕ್ರೈಸ್ತಮತದ ಪ್ರಚಾರವೇ ಪ್ರಮುಖ ಉದ್ದೇಶವಾಯಿತು. ಅದರಿಂದಾಗಿ ಪೋರ್ಚುಗೀಸರಿಗೆ ಮುಂದೆ ತೊಂದರೆಗಳು ಉಂಟಾಗತೊಡಗಿದವು.

ಪೋರ್ಚುಗೀಸರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಮಾರು 300 ವರ್ಷಗಳ ಕಾಲ ವಿವಿಧ ರೀತಿಯ ವ್ಯಾಪಾರ ಸಂಪರ್ಕಗಳನ್ನು ಇಟ್ಟುಕೊಂಡಿದ್ದರು. ಇಲ್ಲಿಯ ವ್ಯಾಪಾರ ವಾಣಿಜ್ಯವನ್ನು ತಮ್ಮ ಹಿಡಿತಕ್ಕೆ ತರುವುದು ಮತ್ತು ಕನ್ನಡಿಗರನ್ನು ಕ್ರೈಸ್ತಮತಕ್ಕೆ ಮತಾಂತರ ಗೊಳಿಸುವುದು ಅವರ ಉದ್ದೇಶವಾಗಿತ್ತು. ಹಾಗೂ ಇಲ್ಲಿ ಹೇರಳವಾಗಿ ಸಿಗುವಂತಹ ಚಿನ್ನ,

ಬೆಳ್ಳಿ ಹಾಗೂ ಸಂಭಾರಪದಾರ್ಥಗಳ ಮೇಲೆ ಅವರು ಆಸಕ್ತಿಯನ್ನು ಹೊಂದಿದ್ದರು. ಈ ಕಾರಣದಿಂದಾಗಿ 1497–98ರಲ್ಲಿ ಯುರೋಪಿನಿಂದ ಭಾರತಕ್ಕೆ ಜಲಮಾರ್ಗವನ್ನು ಕಂಡುಹಿಡಿದ ವಾಸ್ಕೋಡಗಾಮನು ಕುಂದಾಪುರದ ಸಮೀಪವಿರುವ ದ್ವೀಪಗಳಲ್ಲಿ ಸ್ವಲ್ಪಸಮಯ ತಂಗಿದ್ದನು.[1] ಇವರ ಆಗಮನದ ಮುಖ್ಯ ಉದ್ದೇಶ ವ್ಯಾಪಾರವಾಗಿತ್ತು. ಇವುಗಳನ್ನು ತಿಳಿಸುವ ದಾಖಲೆಗಳನ್ನು ರಚಿಸಿದರು. ಈ ದಾಖಲೆಗಳನ್ನು ಕ್ರೋಡೀಕರಿಸಿ ಒಂದೇ ಸ್ಥಳದಲ್ಲಿ ಸಿಗುವಂತೆ ಮಾಡಿದವರು ಪೋರ್ಚುಗೀಸರು. ಇತಿಹಾಸಕಾರ ಕ್ಯೂಟೊರಂತಹ ಹಲವಾರು ವಿದೇಶೀಯ ಮತ್ತು ದೇಶೀಯ ವಿದ್ವಾಂಸರು ಈ ದಾಖಲೆಗಳನ್ನು ಅಧ್ಯಯನ ಮಾಡಿ ಇದರ ಹಿನ್ನೆಲೆಯಲ್ಲಿ ಇತಿಹಾಸ ಬರೆದವರಲ್ಲಿ ಜಿ. ಎಂ. ಮೊರೆಸ್, ಪಾದರ್ ಹೆರಾಸ್ ಮತ್ತು ಬಿ. ಎಸ್. ಶಾಸ್ತ್ರಿ ಹಾಗೂ ಸಂಜಯ್ ಸುಬ್ರಹ್ಮಣ್ಯರು ಅಗ್ರಗಣ್ಯರು. ಈ ದಾಖಲೆಗಳ ಮಹತ್ವವೆಂದರೆ ಇವುಗಳಲ್ಲಿ ಅಚ್ಚುಕಟ್ಟುತನ ಮತ್ತು ನಡೆದ ಘಟನೆಗಳನ್ನು ಕಾಲಾನುಕ್ರಮಗಳಲ್ಲಿ ತಿಳಿಸುವುದು. ಇಂತಹವುಗಳನ್ನು ಸರಿಯಾಗಿ ವಿಶ್ಲೇಷಿಸಲು ಸಹಾಯಕವಾಗಿ ಹೊಸ ಸಂಗತಿಗಳು ಬೆಳಕಿಗೆ ಬರುತ್ತವೆ.

ಪೋರ್ಚುಗೀಸರು ಬರುವ ಮೊದಲು ಪಶ್ಚಿಮ ಕರಾವಳಿಯ ವ್ಯಾಪಾರವು ಅರಬೀ ಮೂಲದ ಮೂರರ ಕೈಯಲ್ಲಿತ್ತು. ಪೋರ್ಚುಗೀಸರು ಬಂದುದು ಅರಬರಿಗೆ ಬೇಸರವಾಯಿತು. ಆದ್ದರಿಂದ ಇವರು ಪೋರ್ಚುಗೀಸರಿಗೆ ತೊಂದರೆ ಕೊಡಲಾರಂಭಿಸಿದರು. ಕ್ರಿ. ಶ. 1524ರಲ್ಲಿ ವಾಸ್ಕೋಡಿಗಾಮನು ತಿರುಗಿ ಇಂಡಿಯಾಕ್ಕೆ ಪೋರ್ಚುಗೀಸರ ವೈಸರಾಯಿಯಾಗಿ ಬಂದನು. ಅರಬೀ ಮೂರರು ಕೊಚ್ಚಿ, ಮಲಬಾರ್ ತೀರದಲ್ಲಿ ಪೋರ್ಚುಗೀಸರಿಗೆ ತೊಂದರೆ ಕೊಡುತ್ತಿದ್ದರು. ಅರಬೀ ಮೂರರ ಭಂಡಸಾಲೆಗಳು ಮಂಗಳೂರಿನಲ್ಲಿ ಮತ್ತು ಬಸ್ರೂರಿನಲ್ಲಿ ಇದ್ದವು. ವಾಸ್ಕೋಡಿ ಗಾಮನು ಈ ಬಂದರುಗಳನ್ನು ಹಿಡಿಯಲಿಕ್ಕೆ ಹಡಗುಗಳನ್ನು ಕಳುಹಿಸಿದನು. ಈ ಮಧ್ಯೆ ವಾಸ್ಕೋಡಿ ಗಾಮನು ಪೋರ್ಚುಗಲ್‌ಗೆ ಹೋಗುವಾಗ ದಾರಿಯಲ್ಲಿ ಕಾಲವಾದನು.[2]

ಕೆಳದಿ ಅರಸರು ದಕ್ಷಿಣಕ್ಕೆ ತಮ್ಮ ಆಡಳಿತ ವಿಸ್ತರಿಸಿದಾಗ ಅರಬರು ಪೋರ್ಚು ಗೀಸರಿಗೆ ಸೋತು ಅರಬೀಸಮುದ್ರದ ವ್ಯಾಪಾರದಿಂದ ಹಿಂದೆ ಸರಿದರು. ಇವರು ಹಿಂದೆ ಸರಿದ ಮೇಲೆ ಪೋರ್ಚುಗೀಸರು ಸಮುದ್ರಯಾನದಲ್ಲಿ ಪ್ರಬಲರಾಗುತ್ತಾರೆ. ಹಾಗಾಗಿ ಪೋರ್ಚುಗೀಸರು ಸಣ್ಣ ಸಣ್ಣ ವ್ಯಾಪಾರಿಗಳಿಗೆ ಹೆಚ್ಚು ತೊಂದರೆ ಮಾಡುತ್ತಿದ್ದುದರಿಂದ ಕಡಲ

ತೀರದ ವ್ಯಾಪಾರವನ್ನು ಪೋರ್ಚುಗೀಸರ ಕೈಯಿಂದ ತಮ್ಮ ಕೈಗೆ ಹಸ್ತಾಂತರ ಮಾಡಿಕೊಳ್ಳ ಬೇಕೆಂದು ಇಕ್ಕೇರಿ ಅರಸರು ನಾವೆಗಳನ್ನು ತಾವೇ ಕಟ್ಟಿ ತಮ್ಮದೇ ಆದ ನಾವೆಗಳನ್ನು ಇಟ್ಟುಕೊಂಡು ಗೋವಾ ಮತ್ತು ಇತರ ಪ್ರದೇಶದೊಂದಿಗೆ ವ್ಯಾಪಾರ ವಹಿವಾಟನ್ನು ನಡೆಸುತ್ತಾರೆ.[3]

### 3.2. ತುಳುನಾಡಿನಲ್ಲಿ ಪೋರ್ಚುಗೀಸರು ಮತ್ತು ಇತರರು

ಗೇರುಸೊಪ್ಪೆಯ ರಾಜ ಹಾಗೂ ತಿರಿವೋಜನು ಸೇರಿಕೊಂಡು ಗೋವೆಯಲ್ಲಿ ಮಹಮ್ಮದೀಯರನ್ನು ಓಡಿಸಲು ನರಸಪ್ಪಯ್ಯನ ಧನಸಹಾಯ ಕೇಳಿದ್ದರು. ಏಕೆಂದರೆ ಹೊರದೇಶಗಳಿಂದ ನೌಕೆಯನ್ನು ತಂದು ಅವರನ್ನು ಓಡಿಸಬೇಕು ಎಂದು ತಿರಿವೋಜನು ಹೇಳಿದ್ದನು. ಅವರು ಪೋರ್ಚುಗೀಸ್ ನೌಕೆಯ ಬಗ್ಗೆ ಮಾತನಾಡಿರಬೇಕು. ಪೋರ್ಚುಗೀಸ್‌ನ ಅಲ್ಬುಕರ್ಕನು ಗೋವೆಯಲ್ಲಿ ಎಲ್ಲಾ ಮಹಮ್ಮದೀಯರನ್ನು ಅವರ ಹೆಂಗಸು-ಮಕ್ಕಳೆಂದೂ ನೋಡದೆ ಎಲ್ಲರನ್ನೂ ಕಗ್ಗೊಲೆ ಮಾಡಿದ್ದ. ಮೂರು ದಿನಗಳವರೆಗೆ ಈ ನರವಧೆ ನಡೆಯಿತು. ಇವರು ಬಹಳ ಕ್ರೂರಿಗಳಾಗಿದ್ದರೂ ಅಲ್ಬುಕರ್ಕನಿಗೆ ರಾಜನೀತಿಯ ಜೊತೆಗೆ ದಾಸವಾಡಿಯಲ್ಲಿ ಯಾವುದೇ ಗ್ರಾಮದಲ್ಲಿ ನಡೆಯುವ, ಸಂತೆಯಲ್ಲಿ ಸಿಗುವ ಕೋಳಿಯ ಬೆಲೆ ಕೂಡಾ ಗೊತ್ತಿದೆಯೆಂದು ಜನರು ಮಾತಾಡಿಕೊಳ್ಳುತ್ತಿದ್ದರು.

ಕ್ರಿ. ಶ. 16ನೇ ಶತಮಾನದಲ್ಲಿ ವಿಜಯನಗರದ ಅರಸರು ತುಳುನಾಡಿನಲ್ಲಿ ತಮ್ಮ ಸ್ಥಾನವನ್ನು ಕಳೆದುಕೊಳ್ಳುವ ಸಂದಿಗ್ಧ ಕಾಲದಲ್ಲಿ ಪೋರ್ಚುಗೀಸರು ವಿದೇಶಿ ವರ್ತಕರಾಗಿದ್ದರು. ಇವರು ತಮ್ಮ ವ್ಯಾಪಾರ ವಾಣಿಜ್ಯದ ಪ್ರಭುತ್ವವನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಭಾರತಕ್ಕೆ ಜಲಮಾರ್ಗವನ್ನು ಕಂಡುಹಿಡಿದ ವಾಸ್ಕೋಡಿಗಾಮನು ಕಾರವಾರ ಸಮೀಪ ಇರುವ ಅಂಜಿದ್ವೀಪದಲ್ಲಿ ಮತ್ತು ಮಲ್ಪೆಯ ಬಳಿ ಇರುವ ದ್ವೀಪದಲ್ಲಿ ಸ್ವಲ್ಪ ಸಮಯ ತಂಗಿದ್ದನು. ಹಾಗೂ ಈ ಪ್ರದೇಶಗಳಲ್ಲಿ ಕನ್ನಡದ ವ್ಯಾಪಾರಸ್ಥರು ಮತ್ತು ಇವನು ಸರಕು ವ್ಯಾಪಾರವನ್ನು ನಡೆಸುತ್ತಿದ್ದರು. ಪೋರ್ಚುಗೀಸರಿಗೆ ತುಳುನಾಡಿನಲ್ಲಿ ಹೆಚ್ಚು ಆಕರ್ಷಣೀಯವಾದ ಪ್ರದೇಶ ಅಂಜಿದ್ವೀಪವಾಗಿತ್ತು. ಏಕೆಂದರೆ ಇದು ಉತ್ತಮ ತಂಗುದಾಣವಾಗಿತ್ತು. ಭಾರತಕ್ಕೆ ಬಂದು ಹೋಗುವ ಹಡಗುಗಳಿಗೆ ಲಂಗರು ಹಾಕಿ ದುರಸ್ತಿ ಮಾಡಿಕೊಳ್ಳುವ ಅವಕಾಶವಿತ್ತು ಮತ್ತು ಕುಡಿಯುವ ನೀರಿನ ಪೂರೈಕೆಯಿತ್ತು. ಇದರಿಂದಾಗಿ ಪೋರ್ಚುಗೀಸರು ಇಲ್ಲಿ ಕ್ರಿ. ಶ. 1505ರಲ್ಲಿ ಇಲ್ಲಿ ಒಂದು ಕೋಟೆಯನ್ನು ಕಟ್ಟಿದರು. 1505ರಲ್ಲಿ

ಡೋನ್ ಫ್ರಾನ್ಸಿಸ್ಕೊ-ಡಿ-ಅಲ್ಮಿಡನು ಪೋರ್ಚುಗೀಸರ ವೈಸರಾಯಿ ಆಗಿ ಬಂದನು. ಆಗ ಕೆನರಾ ಜಿಲ್ಲೆ ವಿಜಯನಗರದ ಎರಡನೇ ವಂಶದ ಇಮ್ಮಡಿ ನರಸಿಂಹರಾಯನ ಆಳ್ವಿಕೆಗೆ ಒಳಗಾಗಿತ್ತು. ಆ ಸಮಯದಲ್ಲಿ ಪಶ್ಚಿಮ ಕರಾವಳಿಯಲ್ಲಿ ಪೋರ್ಚುಗೀಸರು ಭಟ್ಕಳ ಬಂದರ್ ಒಂದನ್ನು ಬಿಟ್ಟು ಕನ್ನಡ ತೀರದಲ್ಲಿರುವ ಎಲ್ಲಾ ಬಂದರುಗಳಲ್ಲಿಯೂ ಒಂದೊಂದು ಭಂಡಸಾಲೆಯನ್ನು ಅದರ ಸುತ್ತಲೂ ರಕ್ಷಣೆಗೆ ಒಂದೊಂದು ಕೋಟೆಯನ್ನು ಕಟ್ಟಬಹುದೆಂದು ವಿಜಯನಗರದ ಅರಸನು ಅನುಮತಿ ಕೊಟ್ಟನು.[4]

ಈ ಕಾರಣದಿಂದಾಗಿ ಕ್ರಿ. ಶ. 1505ರಲ್ಲಿ ಪೋರ್ಚುಗೀಸರು ಅಲ್ಲಿ ಕೋಟೆಯೊಂದನ್ನು ಕಟ್ಟಿದರು. ಆದರೆ ಆ ಕೋಟೆಯನ್ನು ರಕ್ಷಿಸಲು ಕಷ್ಟವಾಗುತ್ತಿದ್ದುದರಿಂದ ಕ್ರಿ. ಶ. 1507ರಲ್ಲಿ ಅದನ್ನು ಕೆಡವಿ ನೆಲಸಮ ಮಾಡಿದರು. ಇದಕ್ಕೆ ಹಲವಾರು ಕಾರಣಗಳಿರಬಹುದು. ಆದರೂ ಈ ದ್ವೀಪ ಅನಂತರ ಪೋರ್ಚುಗೀಸರ ವಶವಾಯಿತು. ಕ್ರಿ.ಶ. 1509 ಮತ್ತು 1510ರಲ್ಲಿ ಭಟ್ಕಳದಲ್ಲಿ ಕೋಟೆ ಕಟ್ಟಲು ಯತ್ನಿಸಿ ವಿಫಲರಾದರು. ಏಕೆಂದರೆ, ವಿಜಯನಗರದ ಅರಸ ಕೃಷ್ಣದೇವರಾಯನು ಅದಕ್ಕೆ ಸಮ್ಮತಿ ಕೊಡಲಿಲ್ಲ. ಅವನ ಮರಣದ ಅನಂತರ ಕೆನರಾ ಕರಾವಳಿಯಲ್ಲಿ 3 ಕೋಟೆಗಳನ್ನು ಸ್ಥಾಪಿಸಿದರು. ಕ್ರಿ.ಶ. 1568ರಲ್ಲಿ ಮಂಗಳೂರಿನಲ್ಲಿ ಕೋಟೆಯನ್ನು ನಿರ್ಮಿಸಿದರು. ಕ್ರಿ. ಶ. 1569ರಲ್ಲಿ ಹೊನ್ನಾವರ ಮತ್ತು ಕುಂದಾಪುರಗಳಲ್ಲಿ ಎರಡು ಕೋಟೆಗಳನ್ನು ನಿರ್ಮಿಸಿದರು.

ಅಲ್ಲದೆ ಪೋರ್ಚುಗೀಸರು ಇನ್ನಿತರ ಪ್ರದೇಶಗಳಲ್ಲಿ ತಮ್ಮ ವ್ಯಾಪಾರ ವಹಿವಾಟನ್ನು ಮುಂದುವರೆಸಿದರು. ಹೊನ್ನಾವರ, ಭಟ್ಕಳ, ಬಸ್ರೂರು, ಕಾರ್ನಾಡು, ಮಂಗಳೂರು, ಮಂಜೇಶ್ವರ, ಕುಂಬಳೆ, ಕಾಸರಗೋಡು ಈ ರೇವುಗಳ ಮುಖಾಂತರ ಪೋರ್ಚುಗೀಸರು ಸ್ಥಳೀಯರೊಡನೆ ವ್ಯಾಪಾರ-ವ್ಯವಹಾರ ನಡೆಸುತ್ತಿದ್ದರು.[5] ಅಲ್ಲದೆ ಇಲ್ಲಿ ಆಳುತ್ತಿದ್ದ ಸ್ಥಳೀಯ ಅರಸುಮನೆತನದವರೊಡನೆ ಕಪ್ಪದ ರೀತಿಯಲ್ಲಿ ಅಕ್ಕಿ ಮತ್ತು ಕರಿಮೆಣಸನ್ನು ವಸೂಲಿ ಮಾಡುತ್ತಿದ್ದರು. ಈ ಪೋರ್ಚುಗೀಸರು ಸ್ಥಳೀಯ ವ್ಯಾಪಾರಿಗಳಿಗೆ ವ್ಯಾಪಾರದ ಸಂದರ್ಭದಲ್ಲಿ ಸಂಕಷ್ಟಕ್ಕೀಡುಮಾಡುತ್ತಿದ್ದರು. ಆಗಿಂದಾಗ್ಗೆ ತಮ್ಮ ತೋಳ್ಬಲವನ್ನು ಪೋರ್ಚುಗೀಸರು ಪ್ರದರ್ಶಿಸುತ್ತಿದ್ದರು. ಸ್ಥಳೀಯ ವ್ಯಾಪಾರಿಗಳಿಗೆ ಜಲಪ್ರಯಾಣ ಮಾಡಲು ಸಾಧ್ಯವಿರಲಿಲ್ಲ ಹಾಗೂ ವ್ಯಾಪಾರ ಮಾಡಬೇಕೆಂದಿದ್ದರೆ ಪೋರ್ಚುಗೀಸರಿಂದ ಅಧಿಕಾರಪತ್ರವನ್ನು ಪಡೆದುಕೊಳ್ಳಬೇಕಾಗಿತ್ತು. ಈ ವಿಷಯವನ್ನು ಸಮಕಾಲೀನ ಪೋರ್ಚುಗೀಸ್

ಇತಿಹಾಸಕಾರರಾದ ಗೆಸ್ಪರ್ ಕೊರೆಯ ಮತ್ತು ಸೀಮಾಮ್ ಬೊಥೆಲೊ ತಮ್ಮ ಗ್ರಂಥದಲ್ಲಿ ತಿಳಿಸಿದ್ದಾರೆ.[6]

ಕ್ರಿ. ಶ. 1526ರಲ್ಲಿ ಲೋಪೆಜ್ ಡಿ. ಸಂಪಾಯೊ ವೈಸರಾಯಿಯಾಗಿದ್ದ ಸಮಯದಲ್ಲಿ ಪೋರ್ಚುಗೀಸರು ಏನೂ ಕಷ್ಟವಿಲ್ಲದೆ ಮಂಗಳೂರನ್ನು ಹಿಡಿದರು. ಮೂರರು, ಮಾಪಿಳ್ಳೆಯರು ಸೋತುಹೋದರು. ಆ ಸಮಯದಲ್ಲಿ ಫ್ರಾನ್ಸಿಸ್ಕನ್ ಪಾದ್ರಿಗಳು ಕ್ರೈಸ್ತಮತವನ್ನು ಮಂಗಳೂರಿನಲ್ಲಿಯೂ ಅದರ ನೆರೆಹೊರೆಯಲ್ಲಿಯೂ ವಿಜಯನಗರದ ಅರಸರ ಅಪ್ಪಣೆ ಪ್ರಕಾರ ಬೋಧಿಸಲಾರಂಭಿಸಿದರು. ಕನ್ನಡ ಜಿಲ್ಲೆಯ ಕರಾವಳಿಯ ವ್ಯಾಪಾರವೆಲ್ಲ ಅರಬೀ ಮೂರರ ಮತ್ತು ಮಾಪಿಳ್ಳೆಯರ ಕೈಯಿಂದ ತಪ್ಪಿಹೋಯಿತು. ಪೋರ್ಚುಗೀಸರ ಮೂಲ ಉದ್ದೇಶ ಅರಬೀ ಮೂರರನ್ನು ಭಾರತದಿಂದ ಓಡಿಸುವುದೂ ಆಗಿತ್ತು.

17ನೇ ಶತಮಾನದಲ್ಲಿ ಮತ್ತೆರಡು ಕೋಟೆಗಳನ್ನು ಕಟ್ಟಿಸಿದರು. ಒಂದು ಗಂಗೊಳ್ಳಿಯಲ್ಲಿ (ಕ್ರಿ.ಶ. 1630–33) ಇನ್ನೊಂದು ಅಂಜಿ ದ್ವೀಪದಲ್ಲಿ (ಕ್ರಿ.ಶ. 1682). ಪೋರ್ಚುಗೀಸ್ ದಾಖಲೆಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬಂದರುಗಳಾದ ಬಾರ್ಕೂರು, ಉಡುಪಿ ಮತ್ತು ಮಂಗಳೂರು ರೇವುಗಳಿಗೂ ಗುಜರಾತ್, ಗೋವಾ ಮತ್ತು ಆರ್ಮಜ್ ರೇವುಗಳ ನಡುವೆ ನಡೆಯುತ್ತಿದ್ದ ವ್ಯಾಪಾರದ ವಿಚಾರಗಳನ್ನು ತಿಳಿಸುತ್ತವೆ.[7] ಇದೇ ಸಮಯದಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಸಂದರ್ಶಿಸಿದ್ದ ವ್ಯಾಪಾರಿಯ ಪ್ರವಾಸಿ ಕಥನದಲ್ಲಿ ತುಳುನಾಡಿನ ವಿಚಾರ ಈ ರೀತಿ ದಾಖಲಾಗಿದೆ.

> ಅಲಿಗಾ ನದಿಯನ್ನು ದಾಟಿದರೆ ನರಸಿಂಗ ಮಹಾರಾಜ್ಯ ಆರಂಭವಾಗುತ್ತದೆ. ಈ ಮಹಾರಾಜ್ಯದಲ್ಲಿ ಐದು ದೊಡ್ಡ ದೊಡ್ಡ ರಾಜ್ಯಗಳಿವೆ. ಒಂದೊಂದು ರಾಜ್ಯಕ್ಕೂ ಬೇರೆಬೇರೆ ಭಾಷೆ. ಒಂದು ರಾಜ್ಯ ಸಮುದ್ರತೀರ ಹೋದಂತೆ ಹೋಗುತ್ತದೆ. ಇದಕ್ಕೆ ತುಳಿನಾಟ್ (ತುಳುನಾಡು) ಎಂದು ಹೆಸರು. ಇನ್ನೊಂದು ರಾಜ್ಯದ ಹೆಸರು ಲೆಗ್ನಿ ಎಂದು. ಇದು ತಿಸಾ (ಒರಿಸ್ಸಾ) ರಾಜ್ಯಕ್ಕೆ ಹೊಂದಿಕೊಂಡಿದೆ. ಇನ್ನೊಂದು ರಾಜ್ಯದ ಹೆಸರು ಕನರಿ; ಇದರೊಳಗೆ ವಿಜನೇಗರ್ (ವಿಜಯನಗರ) ಇರುವುದು. ಮತ್ತೊಂದು ತಮುಳ್ ಎಂದು ಕರೆಯುವ ಚೋಮೆಂಡಲ್ (ಚೋಳಮಂಡಲ). ತುಳಿನಾಟ್ ರಾಜ್ಯಕ್ಕೂ ಬೇರೆ ರಾಜ್ಯಗಳಿಗೂ ಮಧ್ಯೆ ಮೇರ್ಜಿಯೋ (ಇದು ಈಗಿನ ಮಿರ್ಜಾನ್. ಈಗ ಇದು ಏನಿಲ್ಲದಿದ್ದರೂ ಹಿಂದೆ ಬಹು ಮುಖ್ಯವಾಗಿತ್ತದೆಂದು ಕಾಣುತ್ತದೆ.) ಎಂಬ ಬಹಳ ದೊಡ್ಡ ನದಿ ಸಿಕ್ಕುತ್ತದೆ. ಈ ನದಿಯ ನೀರು ಉಪಯೋಗಿಸಿ ಒರಟಾದ ದಪ್ಪ ಅಕ್ಕಿಯನ್ನು ಹೇರಳವಾಗಿ ಬೆಳೆಸುತ್ತಾರೆ. ಇದನ್ನು ಕೊಂಡುಕೊಳ್ಳಲು ಮಲಬಾರಿಗಳು ಇಲ್ಲಿಗೆ ಬರುತ್ತಾರೆ. ಸಂಬುಕ್ ಎಂಬ

ಹೆಸರಿನ ಸಣ್ಣ ದೋಣಿಗಳಲ್ಲಿ ಅಕ್ಕಿಯನ್ನು ಸಾಗಿಸಿಕೊಂಡು ಹೋಗುತ್ತಾರೆ. ಬರುವಾಗ ಇಲ್ಲಿಗೆ ಬೇಕಾದ ತೆಂಗಿನಕಾಯಿ, ಕೊಬ್ಬರಿ ಎಣ್ಣೆ, ಜಾಗರ (ಬೆಲ್ಲ) ಇವುಗಳನ್ನು ತರುತ್ತಾರೆ. ಆಲಿಗಾ ನದಿಯನ್ನು ದಾಟಿ ಮುಂದೆ ಹೋದರೆ ಹೊನೂರು (ಹೊನ್ನಾವರ) ಎಂಬ ಸುಂದರ ಪಟ್ಟಣ ಸಿಗುತ್ತದೆ. ಇದು ನದಿಯ ಮೇಲಿದೆ. ಹೊನೂರನ್ನು ಮಲಬಾರಿಗಳು ಪೊವರನ್ ಎಂದು ಕರೆಯುತ್ತಾರೆ. ಇವರು ಇಲ್ಲಿಗೆ ಅಕ್ಕಿ ಕೊಳ್ಳಲು ಬರುತ್ತಾರೆ. ಅಕ್ಕಿ ಅವರ ಆಹಾರ. ಬರುವಾಗ ತೆಂಗಿನಕಾಯಿ, ಎಣ್ಣೆ, ಜಾಗ್ರಾ ಮತ್ತು ತಾಳೆಮರದ ಹೆಂಡ ತೆಗೆದುಕೊಂಡು ಬರುತ್ತಾರೆ.

ಸಮುದ್ರತೀರದಲ್ಲಿಯೇ ಮುಂದೆ ಹೋದರೆ ಇನ್ನೊಂದು ಸಣ್ಣ ನದಿಯ ಮೇಲೆ ಭಟ್ಕಳ ಎಂಬ ದೊಡ್ಡ ಪಟ್ಟಣ ಸಿಕ್ಕುತ್ತದೆ. ಇಲ್ಲಿ ಭಾರೀ ವ್ಯಾಪಾರ ನಡೆಯುತ್ತದೆ. ಅನೇಕ ಮೂರರು, ಜೆಂಟೈಲರೂ ಇಲ್ಲಿ ನೆಲೆಸಿದ್ದಾರೆ. ಇವರು ವ್ಯಾಪಾರದಲ್ಲಿ ಎತ್ತಿದ ಕೈ. ಓರ್ಮಸಿನಿಂದ ಬಂದ ಹಡಗುಗಳು ಮುಖ್ಯವಾಗಿ ಇಲ್ಲಿ ಬೆಳೆಯುವ ಬಿಳಿ ಅಕ್ಕಿ, ಬೂರಾ ಸಕ್ಕರೆ, ಕಬ್ಬಿಣ ಇವನ್ನು ಹೇರಿಕೊಂಡು ಹೋಗುತ್ತವೆ. ಸಕ್ಕರೆಯನ್ನು ಅಚ್ಚು ಮಾಡಲು ಇವರಿಗೆ ಬರುವುದಿಲ್ಲ. ಬೂರಾ ಸಕ್ಕರೆ ಒಂದು ಅರ್ರೋಬಕ್ಕೆ (ಒಂದು ಹಂಡ್ರೆಟ್ ವೆಯ್ಟ್‌ನ ಕಾಲುಭಾಗ) ಇನ್ನೂರ ನಲ್ವತ್ತು ಮರವೆಡಿಗಳು. ಹಡಗುಗಳು ಇಲ್ಲಿಗೆ ಬರುವಾಗ ಕುದುರೆಗಳನ್ನೂ ಮುತ್ತುಗಳನ್ನೂ ತರುತ್ತವೆ. ಇವರು ಇವನ್ನು ನರಸಿಂಗ ರಾಜ್ಯಕ್ಕೆ ಮಾರುತ್ತಾರೆ. ಅಲ್ಲದೆ ಇಲ್ಲಿಗೆ ಹೆಚ್ಚಾಗಿ ತಾಮ್ರವು ಬರುತ್ತದೆ. ಇದನ್ನು ನಾಣ್ಯಕ್ಕೂ ಪಾತ್ರೆಗಳನ್ನು ಮಾಡುವುದಕ್ಕೂ ಒಳನಾಡಿಗೆ ಸಾಗಿಸುತ್ತಾರೆ. ಆದರೆ ಪೋರ್ಚುಗೀಸರ ಅಪ್ಪಣೆಯ ಪ್ರಕಾರ ಮೂರರ ಅಥವಾ ಮೆಕ್ಕಾದ ಹಡಗುಗಳು ಇಲ್ಲಿಗೆ ಬರುವಂತಿಲ್ಲ. ಆದರೂ ಕೆಲವು ಕಳ್ಳತನದಿಂದ ಬರುತ್ತವೆ. ಭಟ್ಕಳ ಪಟ್ಟಣ ಪೋರ್ಚುಗಲ್ ರಾಜನಿಗೆ ವರ್ಷ ವರ್ಷ ಪೊಗದಿ ಸಲ್ಲಿಸುತ್ತವೆ. ಪ್ರತಿ ವರ್ಷ ಇಲ್ಲಿ ತಾಮ್ರ ಮಾರಾಟವಾಗುತ್ತದೆ. ತಾಮ್ರವನ್ನು ಹಣ ಮಾಡಲು ನಾಣ್ಯ ತಯಾರಿಸಲು, ಕಡಾಯಿ ಮುಂತಾದ ಪಾತ್ರೆಗಳನ್ನು ಮಾಡಲು ಒಳನಾಡಿಗೆ ತೆಗೆದುಕೊಂಡು ಹೋಗುತ್ತಾರೆ. ಅಲ್ಲದೆ ಇಲ್ಲಿ ಪಾದರಸ, ಸಿಂದೂರ, ಹವಳ, ಸ್ಫಟಿಕ ಮತ್ತು ದಂತ ಇವು ಮಾರಾಟವಾಗುತ್ತವೆ. ಇಲ್ಲಿ ಪರ್ದನ್ (ಪರ್ದಾವ್ ಎಂಬ ಪೋರ್ಚುಗೀಸ್ ನಾಣ್ಯ) ಎಂಬ ಚಿನ್ನದ ನಾಣ್ಯ ಚಲಾವಣೆಯಲ್ಲಿವೆ. ಇದರ 320 ಮರವೆಡಿಗಳು, ದಾಮ ಎಂಬ ಬೆಳ್ಳಿಯ ನಾಣ್ಯವೂ ಉಂಟು. ಇದರ ಬೆಲೆ 20 ಮರವೆಡಿಗಳು. ಇಲ್ಲಿ ತೂಕಗಳನ್ನು ಬಾಹರ್ ಎಂದು ಕರೆಯುತ್ತಾರೆ. ಒಂದು ಬಾಹರ್‌ಗೆ ಪೋರ್ಚುಗಲ್‌ನ 4 ಕ್ವಿಂಟಾಲ್‌ಗಳು. ಭಟ್ಕಳ ಬಹಳ ಶ್ರೀಮಂತಿಕೆಯ ಊರು. ರಾಜನಿಗೂ ಇಲ್ಲಿರುವ ಜೆಂಟೈಲ್ ರಾಜ್ಯಪಾಲನಾದ ದಾಮಾಚೇಟಿ(ದಾಮ ಶೆಟ್ಟಿ)ಗೂ ಬಹಳ ಆದಾಯ ಬರುತ್ತದೆ. ದಾಮಾಚೆಟಿಯ ಬಳಿ ಅಪಾರ ಹಣ, ಒಡವೆಗಳು ಇವೆ. ನರಸಿಂಗ ರಾಜ್ಯದ ರಾಜನು ಈ ಊರು ಮತ್ತು ಇತರ ಊರುಗಳನ್ನು ತನ್ನ ಸೋದರರ ಮಗನೊಬ್ಬನಿಗೆ ಕೊಟ್ಟಿದ್ದಾನೆ. ಹಿಂದೆ ನರಸಿಂಗನ ಇಡೀ ರಾಜ್ಯಕ್ಕೆ ಬೇಕಾದ ಅನೇಕ ಕುದುರೆಗಳೂ ಮುತ್ತುಗಳೂ ಪ್ರತಿವರ್ಷ ಈ ಬಂದರಿಗೆ ಬರುತ್ತಿದ್ದವು. ಆದರೆ ಪೋರ್ಚುಗೀಸರ ಕಾರಣದಿಂದಾಗಿ ಇವೆಲ್ಲ ಗೋವಾ ನಗರಕ್ಕೆ ಹೋಗುತ್ತವೆ. ಏಡನ್ನಿಗೆ ಇಲ್ಲಿಂದ ಹಡಗುಗಳು ಹೋಗಬಾರದೆಂದು ಪೋರ್ಚುಗೀಸರು

ನಿರ್ಬಂಧಿಸಿದ್ದರೂ ಕಳ್ಳತನದಿಂದ ಹಡಗುಗಳನ್ನು ತುಂಬಿ ಕಳುಹಿಸುತ್ತಾರೆ. ಅನೇಕ ಮಲಬಾರೀ ಹಡಗುಗಳು ಮತ್ತು ಸಂಬುಕಗಳು ಇಲ್ಲಿಗೆ ತೆಂಗಿನಕಾಯಿ, ತಾಳೆಬೆಲ್ಲ, ತೆಂಗಿನೆಣ್ಣೆ, ತಾಳೆ ಹೆಂಡ ಇವುಗಳನ್ನು ತಂದು ಇವಕ್ಕೆ ಬದಲಾಗಿ ಅಕ್ಕಿ, ಸಕ್ಕರೆ ಮತ್ತು ಕಬ್ಬಿಣಗಳನ್ನು ತೆಗೆದುಕೊಂಡು ಹೋಗುತ್ತವೆ. ಪೋರ್ಚುಗೀಸರ ಕಣ್ಣಿಗೆ ಮಣ್ಣೆರಚಿ ಸಂಭಾರ ಮತ್ತು ಗಂಧಿಗೆ ವಸ್ತುಗಳನ್ನು ಇಲ್ಲಿಗೆ ತರುತ್ತವೆ5. (ವಿಜಯನಗರದ ರಾಜ್ಯವನ್ನು ಪೋರ್ಚುಗೀಸರು ನರಸಿಂಗ ರಾಜ್ಯವೆಂದು ವಾಸ್ಕೊಡಗಾಮನು ಮೊದಲು ಇಂಡಿಯಾ ದೇಶಕ್ಕೆ ಬಂದಾಗ ಆಳುತ್ತಿದ್ದ ನರಸಿಂಹ ರಾಯನ ಹೆಸರಿನ ಮೇಲೆ ಕರೆದರು. ಲೆಗ್ನಿ ಬಂಕಾರಪುರವಿರಬೇಕೆಂದು ಲಾಂಗ್‌ವರ್ತ್ ಡೇಮ್ಸ್‌ರ ಅಭಿಪ್ರಾಯ. ಇದು ಧಾರವಾಡಕ್ಕೆ 40 ಮೈಲು ದೂರದಲ್ಲಿ ಸವಣೂರು ಬಳಿ ಹೊನ್ನಾವರದಿಂದ ವಿಜಯನಗರಕ್ಕೆ ಹೋಗುವ ದಾರಿಯಲ್ಲಿ ಸಿಕ್ಕುತ್ತದೆ. ಕ್ರಿ.ಶ. 848ರಿಂದಲೂ ಇದರ ಉಲ್ಲೇಖವಿದೆ. ಕ್ರಿ.ಶ. 1573ರವರೆಗೆ ಹಿಂದುಗಳೇ ಇಲ್ಲಿ ರಾಜರಾಗಿದ್ದರು. ಅನಂತರ ಆಲಿ ಅದಿಲ್ ಶಾ ಎಂಬವನು ಇದರ ಮೇಲೆ ಮುತ್ತಿಗೆ ಹಾಕಿ ಇಲ್ಲಿದ್ದ ಸುಂದರ ದೇವಸ್ಥಾನವನ್ನು ನಾಶಮಾಡಿದನು. ದಾಮಾಜೇಟ್ ಮಹಮ್ಮದೀಯ ಹೆಸರಲ್ಲ. ದಾಮಾ ಶೆಟ್ಟಿ ಅಥವಾ ದಾಮಾ ಜೆಟ್ಟಿ ಎಂಬ ಹೆಸರಿರಬೇಕು.[8]

1502ರಲ್ಲಿ ಪೋರ್ಚುಗೀಸರು ಭಟ್ಕಳದ ಮೇಲೆ ಆಕ್ರಮಣ ಮಾಡಿ ಬಂದರನ್ನು ಸುಟ್ಟುಹಾಕಿದರು. ಕೆಲವು ರೇವುಗಳಲ್ಲಿ ಪೋರ್ಚುಗೀಸರ ವ್ಯಾಪಾರ ವಹಿವಾಟು ಹೆಚ್ಚಾಗಿತ್ತು. 1509ರ ವರೆಗೆ ಹೆಚ್ಚಾಗಿ ಅವರು ಕೋಟೆ ಕಟ್ಟುವುದರಲ್ಲೇ ಮಗ್ನರಾಗಿದ್ದರು. ನೀಲಿ ನೀರಿನ ನೀತಿಯನ್ನು ಅಭಿವೃದ್ಧಿ ಮಾಡುತ್ತಿದ್ದರು. ಆಲ್ಬುಕರ್ಕ್ ಗೋವಾವನ್ನು ವಶಪಡಿಸಿಕೊಂಡ ನಂತರ ಅದು ಅವರ ಎಲ್ಲಾ ಚಟುವಟಿಕೆಯ ಪ್ರಮುಖ ಕೇಂದ್ರವಾಗಿತ್ತು. ಅನಂತರ ಇವನು ಭಟ್ಕಳದಲ್ಲಿ ಕೋಟೆ ಕಟ್ಟಲು ಪ್ರಯತ್ನಿಸಿದ. ಆದರೆ ಕೃಷ್ಣದೇವರಾಯನು ಇದಕ್ಕೆ ಅವಕಾಶ ಕಲ್ಪಿಸಲಿಲ್ಲ. ಅದಕ್ಕಾಗಿ ಕೃಷ್ಣದೇವರಾಯನನ್ನು ಹಿಡಿತಕ್ಕೆ ತರಲು ಪೋರ್ಚುಗೀಸರು ಪ್ರಯತ್ನಿಸಿದರು. ಆದರೆ ಅದು ಸಾಧ್ಯವಾಗಲಿಲ್ಲ. ಪೋರ್ಚುಗೀಸರು ಏಕಸ್ವಾಮ್ಯ ವ್ಯಾಪಾರ ಮಾಡುವ ಉದ್ದೇಶವನ್ನಿಟ್ಟುಕೊಂಡಿದ್ದರು. ಪೋರ್ಚುಗೀಸರ ಏಕಸ್ವಾಮ್ಯ ವ್ಯಾಪಾರದ ಉದ್ದೇಶದಿಂದಾಗಿ ಮಲಬಾರಿಗಳಿಗೆ, ಪರ್ಷಿಯನ್ನರಿಗೆ, ಅರಬರಿಗೆ ವ್ಯಾಪಾರ ಮಾಡಲು ಬಿಡಲಿಲ್ಲ. ಸ್ಥಳೀಯ ವ್ಯಾಪಾರಿಗಳು ಸೆಟ್ಟಿಗಳನ್ನು ನಿಯಂತ್ರಿಸಲು ಪ್ರಯತ್ನಿಸಿದರು. ಈ ರೀತಿಯ ಸಾಗರೋತ್ತರ ವ್ಯಾಪಾರದ ಜೊತೆಗೆ ಸ್ಥಳೀಯ ವ್ಯಾಪಾರವನ್ನೆಲ್ಲಾ ತಮ್ಮ ನಿಯಂತ್ರಣಕ್ಕೆ ತರಲು ಪ್ರಯತ್ನಿಸಿದರು. ಕೃಷ್ಣದೇವರಾಯನ ಮರಣಾನಂತರ ಪೋರ್ಚುಗೀಸರು ಎಲ್ಲಾ ರೀತಿಯ ವ್ಯಾಪಾರದ ಚಟುವಟಿಕೆಯ ಮೇಲೆ ನಿಯಂತ್ರಣ ಪಡೆಯುವಲ್ಲಿ ಯಶಸ್ವಿಯಾದರು. ರಾಮರಾಯ ಪ್ರಾರಂಭದಲ್ಲಿ ತುಳುನಾಡಿನ ಮೇಲೆ ಹೆಚ್ಚು ಗಮನಹರಿಸಲಿಲ್ಲ. ಆದರೆ

1548ರಲ್ಲಿ ಪೋರ್ಚುಗೀಸರ ದಬ್ಬಾಳಿಕೆ, ಅವರ ಏಕಸ್ವಾಮ್ಯ ವ್ಯಾಪಾರವನ್ನು ಅರಿತವನು. ಹೊನ್ನಾವರ, ಭಟ್ಕಳ, ಮಿರ್ಜಾನ್, ಬಸ್ರೂರು, ಬಾರ್ಕೂರು, ಮಂಗಳೂರು, ಕುಂಬಳೆ ಇವೆಲ್ಲಾ ವ್ಯಾಪಾರಕೇಂದ್ರಗಳಾದವು. ವಿಜಯನಗರ ಒಪ್ಪಂದ (1548) ಆಯ್ತು. ನಿರ್ದಿಷ್ಟ ಪ್ರಮಾಣದಲ್ಲಿ ಅಕ್ಕಿಯನ್ನು ಪೋರ್ಚುಗೀಸರಿಗೆ ಕೊಡಬೇಕು ಎಂದಾಯಿತು. 1556ರಲ್ಲಿ ನಿಧಾನವಾಗಿ ಗಲಾಟೆ ಆರಂಭಿಸಿದರು. ಪೋರ್ಚುಗೀಸರು ವಿಜಯನಗರದ ವಿರುದ್ಧ ಆಗಾಗ ಹೋರಾಡಿ, ಒತ್ತಡ ಹೇರಿ, ಒಪ್ಪಂದ ಮಾಡಿಕೊಂಡು ವ್ಯಾಪಾರದ ಏಕಸ್ವಾಮ್ಯ ಹೊಂದಿದರು. 1565ರಲ್ಲಿ ರಕ್ಕಸತಂಗಡಿ ಯುದ್ಧ ಆಗುವಾಗ ಪೋರ್ಚುಗೀಸರು ತಟಸ್ಥ ನೀತಿಯನ್ನು ಹೊಂದಿದ್ದರು. (ಬದ್ಧ ವಿರೋಧಿಗಳು ಅಂದರೆ ಆದಿಲ್‌ಶಾಹಿಗಳು). ವಿಜಯನಗರ ಸಾಮ್ರಾಜ್ಯ ಪತನಾನಂತರ ಪೋರ್ಚುಗೀಸರ ವ್ಯಾಪಾರ ತುಳುನಾಡಿನಲ್ಲಿ ನಿಧಾನವಾಗಿ ಕಣ್ಮರೆಯಾಯಿತು ಎಂದು ಇತಿಹಾಸಕಾರರು ತಿಳಿಸಿದ್ದಾರೆ.[9]

ಕರಾವಳಿ ಕರ್ನಾಟಕದಲ್ಲಿ ಪೋರ್ಚುಗೀಸರ ಪ್ರಭಾವ ಅಧಿಕವಾಗಿದ್ದಾಗ ಬೈರಾದೇವಿಯ ಮೇಲೆ ಆಕ್ರಮಣ ಮಾಡಿದರು (1590–94). ಅಬ್ಬಕ್ಕ ಮತ್ತು ಕುಂಬಳೆ ಜೊತೆ ಕೂಡ ಯುದ್ಧ ಮಾಡಿ ಎಲ್ಲಾ ಕಡೆ ತಮ್ಮ ಪ್ರಭಾವ ಬೀರತೊಡಗಿದರು. ಏಕೆಂದರೆ ಪೋರ್ಚುಗೀಸರ ನೌಕಾಬಲ ಶಕ್ತಿಯುತವಾಗಿತ್ತು. ಇವರು ಏಕಸ್ವಾಮ್ಯ ವ್ಯಾಪಾರ ಮಾಡಲು ಪ್ರಯತ್ನಿಸಿದರು. 1556ರವರೆಗೂ ತಟಸ್ಥರಾಗಿದ್ದ ಅವರು ನಂತರ ಕ್ರಿಶ್ಚಿಯನ್ ಮತವನ್ನು ಹರಡಲು ಪ್ರಾರಂಭಿಸಿದರು. ಗೋವಾದಲ್ಲಿ ಮುಸ್ಲಿಮರ ರಕ್ತಪಾತವೇ ನಡೆಯಿತು. ಗೇರುಸೊಪ್ಪೆಯ ರಾಣಿಯು ಚೆನ್ನಾಬೈರಾದೇವಿ ವ್ಯಾಪಾರದಲ್ಲಿ ಪ್ರಭಾವಿಯಾಗಿದ್ದಳು. ಕಾಳುಮೆಣಸಿನ ರಾಣಿ ಎಂದೇ ಹೆಸರಾಗಿದ್ದಳು. ಅವಳ ಹತ್ತಿರ ಕಾಳುಮೆಣಸಿಗಾಗಿ ಒಪ್ಪಂದವಾಗಿತ್ತು. ಆರು ತಿಂಗಳ ಹಿಂದಿನ ಮುಂಗಡವಾಗಿ ಬುಕ್ಕಿಂಗ್ ಆಗಿರುತ್ತಿತ್ತು. ಏಕೆಂದರೆ ಮೆಣಸು ಅಗತ್ಯ ಬೇಕಾಗಿತ್ತು. ಇವಳ ಪತನಾನಂತರ ಪೋರ್ಚುಗೀಸರಿಗೆ ಕೆಳದಿ ನಾಯಕರ ಭಯವಿತ್ತು. ಪೋರ್ಚುಗೀಸರಿಗೆ ಅವರ ಹಿಡಿತ ಬರಬೇಕೆಂದು ಕೆಳದಿ ವಿರುದ್ಧ ಒಕ್ಕೂಟ ಪ್ರಾರಂಭಿಸಿದರು. ಕೆಳದಿಯ ವೆಂಕಟನಾಯಕನ ವಿರುದ್ದ ಪೋರ್ಚುಗೀಸರು ಹೀನಾಯವಾಗಿ ಸೋತರು. ಕಡೆಗೆ ಶರಣಾಗತರಾದರು. ಕೊನೆಗೆ 1632ರಲ್ಲಿ ಒಂದು ಒಪ್ಪಂದ ಮಾಡಿಕೊಂಡರು.

1565ರ ತಾಳಿಕೋಟೆ ಕದನದಲ್ಲಿ ರಾಮರಾಯನು ಸೋತನಂತರ ಪೋರ್ಚುಗೀಸರು ಸಂಪೂರ್ಣ ಲಾಭವನ್ನು ಪಡೆದು 1568ರಲ್ಲಿ ಮಂಗಳೂರಿನಲ್ಲಿ ಮತ್ತು 1569ರಲ್ಲಿ ಕುಂದಾಪುರದಲ್ಲಿ ಕೋಟೆಗಳನ್ನು ನಿರ್ಮಿಸಿದರು. 17ನೇ ಶತಮಾನದ ಆದಿಯಲ್ಲಿ ಕೆಳದಿಯ ಅರಸನಾದ ವೆಂಕಟಪ್ಪ ನಾಯಕನು ಬಂಗವಾಡಿ, ಉಳ್ಳಾಲ ಇತ್ಯಾದಿ ಕನ್ನಡ ಕರಾವಳಿಯ ಅರಸರನ್ನು ಸೋಲಿಸಿ ಅಲ್ಲಿ ತನ್ನ ಸ್ವಾಮ್ಯವನ್ನು ಸ್ಥಾಪಿಸಿದನು. ಮಂಗಳೂರಿನಲ್ಲಿ ಅವನ ವಿರುದ್ಧವಾಗಿ ಪೋರ್ಚುಗೀಸರು ಬಂಗರಾಜನಿಗೆ ಸಹಾಯ ಮಾಡಿದರು. ಕ್ರಿ. ಶ. 1510ರ ಸಮಯದಲ್ಲಿ ಗೋವೆಯ ಪೋರ್ಚುಗೀಸ್ ವೈಸರಾಯ್ ಅಲ್ಬುಕರ್ಕ್ ಬಸ್ರೂರು ರೇವಿನ ಮಹತ್ವವನ್ನು ತಿಳಿದಿದ್ದನು.[10] ಇದರ ಮಹತ್ವವನ್ನು ಪೋರ್ಚುಗೀಸ್ ದೊರೆಗೆ ತಿಳಿಸಿದನು. ಅನಂತರ ಕ್ರಿ.ಶ. 1525ರಲ್ಲಿ ಬಸ್ರೂರಿಗೆ ಪೋರ್ಚುಗೀಸರ ಆಗಮನವಾಯಿತು. ಇಲ್ಲಿಗೆ ಬಂದು ಇಲ್ಲಿಯ ವರ್ತಕರಿಂದ ಅಕ್ಕಿಯನ್ನು ಪಡೆದನು. ಇದಕ್ಕೆ ಪ್ರತಿಯಾಗಿ ಅರಸನು ಇಲ್ಲಿಯ ವರ್ತಕರಿಗೆ ಸುಂಕವನ್ನು ವಿನಾಯಿತಿಗೊಳಿಸುವಂತೆ ಭರವಸೆ ಇತ್ತನು. ಇಲ್ಲಿ ಬರುವ ಹಡಗುಗಳಿಗೆ ರಕ್ಷಣೆಯನ್ನು ನೀಡಲು ಪೋರ್ಚುಗೀಸರು ಒಪ್ಪಿಕೊಂಡರು. ಕ್ರಿ.ಶ. 1569ರವರೆಗೆ ಬಸ್ರೂರಿನಲ್ಲಿ ಪೋರ್ಚುಗೀಸರ ವ್ಯಾಪಾರ ಯಾವುದೇ ಅಡೆತಡೆಗಳಿಲ್ಲದೆ ನಡೆಯುತ್ತಿತ್ತು. ಇದನ್ನು ಪೋರ್ಚುಗೀಸ್ ದಾಖಲೆಗಳು ತಿಳಿಸುತ್ತವೆ. ವ್ಯಾಪಾರವು ಅಕ್ಕಿಗೆ ಸೀಮಿತವಾಗಿದ್ದು ಈ ರೇವಿಗೆ ಬರುವ ವಿವಿಧ ರೀತಿಯ ಹಡಗುಗಳಿಗೆ ಪೋರ್ಚುಗೀಸರು ರಕ್ಷಣೆಯನ್ನು ನೀಡುತ್ತಿದ್ದರು. ಜೊತೆಗೆ ಸ್ಥಳೀಯ ವರ್ತಕರ ಸಹಕಾರವೂ ಇತ್ತು. ಅನಂತರ ಕ್ರಿ. ಶ. 1569ರಲ್ಲಿ ಪೋರ್ಚುಗೀಸರ ವ್ಯಾಪಾರನೀತಿ ಬದಲಾಯಿತು. ಇವರ ವ್ಯಾಪಾರದಲ್ಲಿ ಲೂಟಿ ಮಾಡುವ ಮತ್ತು ಕೊಳ್ಳೆ ಹೊಡೆಯುವ ಉದ್ದೇಶವಿತ್ತು. ಕ್ರಿ.ಶ. 1569ರಲ್ಲಿ ಕೆಳ ಬಸ್ರೂರಿನ ಕೋಟೆಯನ್ನು ವಶಪಡಿಸಿಕೊಂಡರು (ಈಗ ಅದು ಕುಂದಾಪುರದಲ್ಲಿದೆ). ಮತ್ತು ಮೇಲ್ ಬಸ್ರೂರಿನ ಕೋಟೆಯನ್ನು ಭದ್ರಗೊಳಿಸಿದರು. ಜೊತೆಗೆ ಇಲ್ಲಿಯ ವ್ಯಾಪಾರಸ್ಥರನ್ನು ಹೆದರಿಸಿ ಕಡಿಮೆ ದರಕ್ಕೆ ಅಕ್ಕಿಯನ್ನು ಪಡೆದುಕೊಳ್ಳುತ್ತಿದ್ದರು. ಮತ್ತೊಂದು ವರ್ಷದಲ್ಲಿ ಇಲ್ಲಿ ಸುಂಕ ಠಾಣೆಯನ್ನು ಸ್ಥಾಪಿಸಿ ಆಮದು–ರಫ್ತುಗಳ ಸುಂಕದ ಹಣದಿಂದ ಲಾಭ ಗಳಿಸಿದರು. ಕ್ರಮೇಣ ವ್ಯಾಪಾರವು ಅಕ್ಕಿಗೆ ಸೀಮಿತವಾಗಿರದೆ ಕರಿಮೆಣಸು, ಇನ್ನಿತರ ಆಹಾರಸಾಮಗ್ರಿಗಳಿಗೂ ವಿಸ್ತರಿಸಿತು. ಇವರ ಪಾಂಗಾಸ್ (ಬೆಳ್ಳಿ) ಮತ್ತು ಪಾರ್ಡೋಸ್ (ಚಿನ್ನ) ನಾಣ್ಯಗಳು ಚಲಾವಣೆಗೆ ಬಂದವು.[11] ಇದರ ಉದ್ದೇಶ ಕಡಿಮೆ ದರದಲ್ಲಿ ಹೇರಳವಾಗಿ ಕರಿಮೆಣಸು ಪಡೆಯುವ ಆಕಾಂಕ್ಷೆಯಾಗಿದ್ದರೂ ಈ ದೃಷ್ಟಿಯಿಂದ ಇಲ್ಲಿಯ ರಾಜಕೀಯ ಶಕ್ತಿಗಳೊಂದಿಗೆ

ಮೈತ್ರಿಯಿಂದಿರಬೇಕೆಂದು ತಿಳಿದಿದ್ದರು. ಇವರು ಕಟ್ಟಿದ ಕೋಟೆ ಘಟ್ಟದ ಮೇಲಿಂದ ಬರುವ ಆಹಾರ ಸರಕುಗಳನ್ನು ಸಂರಕ್ಷಿಸುವ ದೃಷ್ಟಿಯಲ್ಲಿ ಪುನಾರಚಿತವಾಯಿತು. ಕ್ರಿ.ಶ. 1583ರಲ್ಲಿ ಸಮುದ್ರ ಕಿನಾರೆಯಲ್ಲಿರುವ ಕುಂದೇಶ್ವರ ದೇವಾಲಯವನ್ನು ಬೆಂಕಿಯಿಟ್ಟು ಹಾಳು ಮಾಡಿದ್ದರಿಂದ ಸ್ಥಳೀಯ ಸೆಟ್ಟರು ಪೋರ್ಚುಗೀಸರನ್ನು ಹೊರಕ್ಕೆ ದಬ್ಬಲು ಯತ್ನಿಸಿದರು.

ಕ್ರಿ.ಶ. 1630ರಲ್ಲಿ ಪೋರ್ಚುಗೀಸರ ವರ್ತನೆಯಿಂದ ಕುಪಿತಗೊಂಡ ಬಸ್ರೂರಿನ ಅಧಿಕಾರಿಗಳು ಇಲ್ಲಿಂದ ಅಕ್ಕಿಯನ್ನು ಗೋವೆಗೆ ಕಳುಹಿಸುವುದನ್ನು ನಿಲ್ಲಿಸಿದರು. ಕ್ರಿ.ಶ. 1646ರ ವರ್ಷ ಸ್ಥಳೀಯ ವರ್ತಕರು ಬಸ್ರೂರಿನ ಕ್ಯಾಪ್ಟನ್ ನಿಕ್ಲೊಟೊ ಡಿ'ಸಿಲ್ವನ ಅಸಭ್ಯ ಮತ್ತು ಅನಾಗರಿಕ ವರ್ತನೆಯನ್ನು ಪ್ರತಿಭಟಿಸಿ ಗೋವೆಯಲ್ಲಿರುವ ವೈಸರಾಯರಿಗೆ ಮನವಿ ಸಲ್ಲಿಸಿದರು. ಈ ಮನವಿಯಂತೆ ವರ್ತಕರು ಕ್ಯಾಪ್ಟನ್‌ನ ಬಲಾತ್ಕಾರದ ವರ್ತನೆಯಿಂದ ತಮ್ಮ ಹಣದೊಂದಿಗೆ ಬಸ್ರೂರು ರೇವು ಬಿಟ್ಟು ಬೇರೆ ಕಡೆಗೆ ಹೋಗುವುದಾಗಿ ತಿಳಿಸಿದರು. ಈ ಮನವಿಗೆ ಸಹಿ ಹಾಕಿದವರು ನಾರಾಯಣ ಬಾಳೊ, ಶಿವ ಬಾಳೊ, ದಾಮೊ ಬಾಳೊ, ತಿಮ್ಮಯ್ಯ ಶೆಟ್ಟಿ, ಬಾಳನಾಯಕ, ಚೆನ್ನಯ್ಯ ಕಂಮಟಿಯ ಪತ್ನಿ ಶಾಂತ ಕಮ್ಮಟಿ ಇತ್ಯಾದಿ. ಕೆಳದಿ ಶಿವಪ್ಪನಾಯಕನ ಆಳ್ವಿಕೆಯ ಕಾಲ ಮತ್ತು ಪೋರ್ಚುಗೀಸರ ಏಕಸ್ವಾಮ್ಯದ ಮನಬಂದ ರೀತಿಯ ವ್ಯಾಪಾರಕ್ಕೆ ಪೂರ್ಣ ತಡೆಯಾಯಿತು. ಇದರ ಜೊತೆಗೆ ಡಚ್ಚರ ವ್ಯಾಪಾರವು ಪೋರ್ಚುಗೀಸರ ಸ್ವಇಚ್ಛೆಗೆ ಅಡ್ಡಿಯುಂಟುಮಾಡಿತು.[12] ಕ್ರಿ.ಶ. 1662ರಲ್ಲಿ ಡಚ್ಚರು ಬಸ್ರೂರಿಗೆ ಬಂದು ವ್ಯಾಪಾರ ನಡೆಸಲು ತಮ್ಮದೇ ಆದ ಬಂಡಸಾಲೆ ಸ್ಥಾಪಿಸಿದರು. ಇದಕ್ಕೆ ಕೆಳದಿ ಕಿರಿಯ ವೆಂಕಟಪ್ಪ ನಾಯಕನು ಅನುಮತಿ ನೀಡಿದನೆಂದು ಆಂಗ್ಲ ಪತ್ರಗಳು ತಿಳಿಸುತ್ತವೆ.

ಕೆಳದಿಯ ಶಿವಪ್ಪ ನಾಯಕನ ಮರಣಾನಂತರ ಮಂಗಳೂರು, ಕುಂದಾಪುರ, ಗಂಗೊಳ್ಳಿಗಳಲ್ಲಿ ತಮ್ಮ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಲು ಬಿಡಬೇಕೆಂದು ಅವನ ಉತ್ತರಾಧಿಕಾರಿಗಳೊಡನೆ ಪೋರ್ಚುಗೀಸರು ಕೇಳಿಕೊಂಡರು. ಕೆಳದಿಯ ಅರಸು ಹಿಂಜರಿದರು. 1665ರಲ್ಲಿ ಮರಾಠರ ರಾಜನಾದ ಶಿವಾಜಿಯು ಜಲಮಾರ್ಗವಾಗಿ ಬಸ್ರೂರಿನ ಮೇಲೆ ದಾಳಿಯಿಟ್ಟನು. ಪೋರ್ಚುಗೀಸರ ಸಹಾನುಭೂತಿಯಿಲ್ಲದೆ ಅವನ ನೌಕಾದಳವು ಗೋವೆಯ ಕರಾವಳಿಯಿಂದ ಕೆಳಗೆ ಬರಲು ಸಾಧ್ಯವಿರಲಿಲ್ಲವೆಂದು ಅಂದಿನ ಡಚ್ ಮತ್ತು ಇಂಗ್ಲಿಷ್ ದಾಖಲೆಪತ್ರಗಳಿಂದ ತಿಳಿದುಬರುತ್ತದೆ. ಕೆಳದಿಯ ರಾಜನು ಶಿವಾಜಿಗೆ ಹೆದರಿ ಪೋರ್ಚುಗೀಸರ ಸಹಾಯ ಪಡೆಯಲು ಅವರ ಬೇಡಿಕೆಯನ್ನು ಪೂರೈಸಬಹುದೆಂದು

ಆಲೋಚಿಸಿ ಅವರು ಶಿವಾಜಿಯ ನೌಕಾಬಲವನ್ನು ಗೋವೆ ದಾಟಿ ಬರಲು ಬಿಟ್ಟಿರಬಹುದು. ಕ್ರಮೇಣ ಶಿವಪ್ಪನ ಉತ್ತರಾಧಿಕಾರಿಗಳು ಪೋರ್ಚುಗೀಸರೊಡನೆ ವಾಣಿಜ್ಯಸಂಪರ್ಕವನ್ನು ಬೆಳೆಸಿದರು. ಮಂಗಳೂರು ಬಂದರಲ್ಲಿ ವ್ಯಾಪಾರಕೇಂದ್ರವನ್ನು ಇರಿಸಿಕೊಳ್ಳಲು ಸಮ್ಮತಿಸಿದರು. ಶಾಂತರೀತಿಯಲ್ಲಿ ಕ್ರೈಸ್ತಮತವನ್ನು ಪ್ರಚಾರ ಮಾಡಲು ಅನುಮತಿ ಕೊಟ್ಟರು.

ಕನ್ನಡ ಕರಾವಳಿಯಲ್ಲಿ ಅವರನ್ನು ಆಕರ್ಷಿಸಿದ ಇತರ ಮುಖ್ಯ ಸ್ಥಳಗಳೆಂದರೆ ಅಂಕೋಲ, ಮಿರ್ಜಾನ್, ಹೊನ್ನಾವರ, ಭಟ್ಕಳ, ಕುಂದಾಪುರ, ಬಸ್ರೂರು, ಬಾರ್ಕೂರು ಮತ್ತು ಮಂಗಳೂರು. ಅಲ್ಲಿಯ ರೇವುಗಳ ಮೂಲಕ ಅವರು ಕನ್ನಡಿಗರೊಡನೆ ವ್ಯಾಪಾರವ್ಯವಹಾರ ಬೆಳೆಸಿದರು. ಸ್ಥಳೀಯ ತುಂಡರಸರಿಂದ ವಾರ್ಷಿಕ ಕಪ್ಪವನ್ನು ಅಕ್ಕಿ ಅಥವಾ ಕರಿಮೆಣಸಿನ ರೂಪದಲ್ಲಿ ಪಡೆದುಕೊಂಡರು. ಅಲ್ಲದೆ ಅಲ್ಲಿಯ ಸ್ಥಳೀಯ ವ್ಯಾಪಾರಿಗಳನ್ನು ನಿರಾತಂಕವಾಗಿ ಜಲಪ್ರಯಾಣ ಮಾಡಲು ಬಿಡದೆ ತಮ್ಮಿಂದ ಅಧಿಕಾರಪತ್ರ ಪಡೆದುಕೊಂಡವರಿಗೆ ಮಾತ್ರ ಸಮುದ್ರಯಾನ ಮಾಡಲು ಅವಕಾಶ ಕೊಟ್ಟರು. ಅನಂತರ ಪೋರ್ಚುಗೀಸರು ಲಾಭದ ಉದ್ದೇಶದಿಂದ ಪ್ರತಿಯೊಂದು ಬಂದರಿನಿಂದಲೂ ಸುಂಕವನ್ನು ವಸೂಲು ಮಾಡಲಾರಂಭಿಸಿದರು. ಬಸ್ರೂರಿನಿಂದ 500 ಮುಡಿ ಅಕ್ಕಿಯನ್ನೂ ಬಾರ್ಕೂರಿನಿಂದ 1000 ಮುಡಿ ಅಕ್ಕಿಯನ್ನೂ ಕಾರ್ನಾಡ ಅರಸನಿಂದ (ಮೂಲ್ಕಿ ಸಾವಂತ) 800 ಮುಡಿಯನ್ನೂ ಮಂಗಳೂರು ಬಂಗರ ರಾಜನಿಂದ 2400 ಮುಡಿಯನ್ನೂ ಒಂದುಸಾವಿರ ಬುದ್ದಲಿ ಎಣ್ಣೆಯನ್ನೂ ಮಂಜೇಶ್ವರದಿಂದ 700 ಮುಡಿಯನ್ನೂ ಕುಂಬಳೆ ಅರಸನಿಂದ 800 ಮುಡಿಯನ್ನೂ ಪ್ರತಿವರ್ಷ ವಸೂಲು ಮಾಡುತ್ತಿದ್ದರು.[13]

ಪೋರ್ಚುಗೀಸರು ಕ್ರಿ.ಶ. 1554ರಿಂದ 1800ರ ವರೆಗೆ ತಮ್ಮದೇ ಆದ ಗುತ್ತಿಗೆ ವ್ಯಾಪಾರ ಮಾಡಿ ಸ್ಥಳೀಯ ವ್ಯಾಪಾರಕ್ಕೆ ಅಡ್ಡಿಯುಂಟುಮಾಡಿದರು. ಇವರ ಫ್ಯಾಕ್ಟರಿ ಪೋರ್ಟ್ರಸ್ ವ್ಯಾಪಾರಪದ್ಧತಿ ಇಲ್ಲಿಯವರಿಗೆ ಹೊಸದಾಗಿ ಕಂಡಿತು. ಇದರ ನೇತೃತ್ವದಲ್ಲಿ ಪೋರ್ಚುಗೀಸರು ಹೊಸ ವ್ಯಾಪಾರವನ್ನು ನಡೆಸಿದರು. ಆದರೆ ಇದು ಹೆಚ್ಚುಕಾಲ ನಡೆಯಲಿಲ್ಲ. ತಮ್ಮ ವ್ಯಾಪಾರವನ್ನು ಉಳಿಸಿಕೊಳ್ಳಲು ಪೋರ್ಚುಗೀಸರು ಸ್ಥಳೀಯರ ಸಹಕಾರವನ್ನು ಪಡೆಯಬೇಕಾಗಿ ಬಂತು. ಕ್ರಿ. ಶ. 1542ರಲ್ಲಿ ಕ್ರೈಸ್ತರ ಧಾರ್ಮಿಕ ಸಂಸ್ಥೆ ಸ್ಥಾಪನೆಗೊಂಡರೂ, 1681ರ ವರೆಗೆ ಈ ಮತವು ಹೆಚ್ಚು ಜನಪ್ರಿಯವಾಗಲಿಲ್ಲ. ಕ್ರಿ.ಶ. 1681ರ ಅನಂತರ ಇಲ್ಲಿ ಕ್ರೈಸ್ತಮತ ಪ್ರಚಾರಕ್ಕೆ ಬರಲು ಫಾದರ್ ವಾರ್ಥುನ ಸೇವೆ ಕಾರಣವಾಯಿತು.

ಇವನು ಇಲ್ಲಿಯ ಚರ್ಚ್‌ಗಳನ್ನು ಸುಧಾರಿಸಿದ. ಇದರಿಂದಾಗಿ, ಬಸ್ರೂರು ವಿಕರ್ (vicar) ಬಲಿಷ್ಠವಾಗಿ ಭಟ್ಕಳ, ಶಿರಾಲಿ, ಕಲ್ಯಾಣಪುರದ ಕ್ರೈಸ್ತ ಸಮುದಾಯಗಳಿಗೆ ಆಶ್ರಯವಾಯಿತು. ಆ ಕಾಲದಲ್ಲಿ ಅಂದರೆ, ಕ್ರಿ.ಶ. 16ನೇ ಶತಮಾನದಲ್ಲಿ ಬಸ್ರೂರು, ಹಂಗಾರಕಟ್ಟೆ (ಬಾರ್ಕೂರು), ಮೂಲ್ಕಿ, ಮಂಗಳೂರು, ಮಂಜೇಶ್ವರ ತುಳುನಾಡಿನ ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು.[14]

ಉತ್ತರ ಕನ್ನಡ ಹಾಗೂ ಗೋವಾ ಪ್ರದೇಶಗಳಲ್ಲಿ ಪೋರ್ಚುಗೀಸರ ವ್ಯಾಪಾರಕ್ಕೆ ವಿಜಯನಗರದ ಅರಸರು ಮತ್ತು ಬಿಜಾಪುರದ ಸುಲ್ತಾನರು ಮುಖ್ಯ ಗಿರಾಕಿಗಳಾಗಿದ್ದು ಕುದುರೆ ಮತ್ತು ತುಪಾಕಿಗಳನ್ನು ಅವರಿಂದ ಖರೀದಿಸುತ್ತಿದ್ದರು. ಬಸ್ರೂರಿನಲ್ಲಿ ವಿಜಯನಗರದ ರಾಜ್ಯಪಾಲರ ಅಧಿಕಾರ ನಡೆಯುತ್ತಿದ್ದರೂ ಪೋರ್ಚುಗೀಸರ ಗೂಂಡಾಗಿರಿಯನ್ನು ಹತೋಟಿಯಲ್ಲಿಡಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ಇದರಿಂದಾಗಿ ಹಂಜುಮಾನರು ಮತ್ತು ಸ್ಥಳೀಯ ಗೌಡ ಸಾರಸ್ವತ ಹಾಗೂ ಜೈನ, ನಾಡವ ವ್ಯಾಪಾರಸ್ಥರು ಹೆಚ್ಚಿನ ಮಟ್ಟದ ಕಷ್ಟನಷ್ಟಗಳಿಗೆ ಗುರಿಯಾಗಬೇಕಾಗಿ ಬರುತ್ತಿತ್ತು. ಆ ಕಾಲದಲ್ಲಿ ಮಂಗಳೂರು ಒಂದು ಪ್ರಮುಖ ವ್ಯಾಪಾರ ಕೇಂದ್ರವಾಗಿ ಬೆಳೆಯತೊಡಗಿದ್ದು, ಅಲ್ಲಿನ ಬಂದರುಪ್ರದೇಶ ಉಳ್ಳಾಲದ ರಾಣಿ ಅಬ್ಬಕ್ಕನ ವಶದಲ್ಲಿತ್ತು. ವ್ಯಾಪಾರದ ಮೇಲಿನ ಸುಂಕವೇ ಸ್ಥಳೀಯ ಅರಸರ ಮುಖ್ಯ ಆದಾಯವಾಗಿದ್ದುದರಿಂದ ಮತ್ತು ಸ್ಥಳೀಯ ಅರಸರು ಸ್ವತಃ ವ್ಯಾಪಾರದಲ್ಲಿ ನಿರತರಾಗಿದ್ದರಿಂದ ಮೂಡುಬಿದರೆಯ ಚೌಟರಸಿ ಮೂಡುಬಿದರೆ ಆಡಳಿತವನ್ನು ತನ್ನ ಗಂಡ ಲಕ್ಷ್ಮಪ್ಪ ಬಂಗರಸನಿಗೆ ಒಪ್ಪಿಸಿ ಅಬ್ಬಕ್ಕ ಉಳ್ಳಾಲದಲ್ಲಿ ನೆಲೆಸಿದ್ದಳು. ಕ್ರಿ.ಶ. 1566–67ರಲ್ಲಿ ಪೋರ್ಚುಗೀಸರ ವೈಸರಾಯಿಯಾದ ಅಂತೋನ್ ಡಿ. ನೂರೆಂಞನೂ, ನೌಕಾ ಸೇನಾಧಿಪತಿ ಯಾದ ಡೊನ್ ಫ್ರಾನ್ಸಿಸ್ಕೊ ಮಸ್ಕರೆಂಞನೂ 7 ದೊಡ್ಡ ಹಡಗುಗಳಲ್ಲಿಯೂ 5 ಸಣ್ಣ ಹಡಗುಗಳಲ್ಲಿಯೂ 3000 ಜನರನ್ನು ತೆಗೆದುಕೊಂಡು ಬಂದು ಮಂಗಳೂರು ಬಂದರನ್ನು ಹಿಡಿದುಕೊಳ್ಳಲಿಕ್ಕೆ ಬಂದನು. ಉಳ್ಳಾಲದಲ್ಲಿದ್ದ ಮೂಡಬಿದರೆ ಚೌಟರಾಣಿ ಅಬ್ಬಕ್ಕದೇವಿಯು ಪೋರ್ಚುಗೀಸರಿಗೆ ಎದುರು ನಿಂತು ಕಪ್ಪ ಕೊಡುತ್ತಿರಲಿಲ್ಲ. ಪೋರ್ಚುಗೀಸರ ಸೈನ್ಯದ ಹಡಗುಗಳು 6 ಬೆಟಲಿಯನ್‌ಗಳ ಸಹಿತ ಉಳ್ಳಾಲದ ಹತ್ತಿರ ಹೊಳೆಯಲ್ಲಿ 1567ನೇ ಜನವರಿ 4ರಂದು ಬಂದುನಿಂತವು. ರಾತ್ರಿ ಪೋರ್ಚುಗೀಸರು ಊಟ ಮಾಡುವ ಸಮಯದಲ್ಲಿ ಅಬ್ಬಕ್ಕದೇವಿಯ 500 ಮಂದಿ ಸೈನಿಕರು ಪೋರ್ಚುಗೀಸರ ಹಡಗುಗಳ ಮೇಲೆ ಬಿದ್ದರು.

ಅವರ ಹಿಂದಿನಿಂದ 1500 ಮಂದಿ ಸೈನಿಕರು ಬಂದು ಹಡಗುಗಳಿಗೆ ಮುತ್ತಿಗೆ ಹಾಕಿದರು. ಹೀಗೆ ಮೊದಲ ಯುದ್ಧದಲ್ಲಿ ಅಬ್ಬಕ್ಕರಾಣಿಯ ಸೈನ್ಯ ವಿಜಯ ಗಳಿಸಿತು. ಆ ಕಾಲದಲ್ಲಿ ಮಲಬಾರಿನ ಮಾಪಿಳ್ಳೆಗಳು ನೌಕಾಯಾನದಲ್ಲಿ ಪರಿಣತರಿದ್ದರು. ಪೋರ್ಚುಗೀಸರು ಕಲ್ಲಿಕೋಟೆಯ ಝಾಮೊರಿನನಿಗೆ ಮತ್ತು ಕರಾವಳಿಯಲ್ಲಿ ವ್ಯಾಪಾರ ಮಾಡುವ ಹಂಜುಮಾನರಿಗೆ ಹೆಚ್ಚಿನ ತೊಂದರೆ ಕೊಟ್ಟಿದ್ದರಿಂದ ಅವರಿಗೆ ಪೋರ್ಚುಗೀಸರ ಮೇಲೆ ಅಸಮಾಧಾನವಿತ್ತು. ಝಾಮೋರಿನರ ನೌಕಾಪಡೆಯಲ್ಲಿದ್ದ ಕುಟ್ಟಿಪೋಕ್ರಿಯನ್ನು ಕರೆಸಿ ಅಬ್ಬಕ್ಕರಾಣಿ ಪೋರ್ಚುಗೀಸರ ನೌಕೆಗಳ ಮೇಲೆ ದಾಳಿ ನಡೆಸುವ ಯೋಜನೆ ರೂಪಿಸಿದಳು. ಈ ವಿಚಾರ ತಿಳಿದು ಅವಬಿಗಳು ಹಾಗೂ ಕಲ್ಲಿಕೋಟೆಯ ಝಾಮೋರಿನ್ ತುಂಬಾ ಸಂತೋಷಪಟ್ಟರು. "ಮುಂದೆ ತಮ್ಮಿಂದೇನಾದರೂ ಸಹಾಯ ಬೇಕಿದ್ದರೆ ಕೊಡಲು ಸಿದ್ಧ" ಎಂದು ಅಬ್ಬಕ್ಕನಿಗೆ ಭರವಸೆ ನೀಡಿದರು. ಮುಂದೆ 1569ರಲ್ಲಿ ಪೋರ್ಚುಗೀಸರಿಗೂ ಅಬ್ಬಕ್ಕರಾಣಿಗೂ ಒಪ್ಪಂದವಾಯಿತು. ಪರಿಣಾಮವಾಗಿ ರಾಣಿ ಪೋರ್ಚುಗೀಸರಿಗೆ ಸುಂಕ ಕೊಡಲು ಒಪ್ಪಿಕೊಂಡಳು. ಪೋರ್ಚುಗೀಸರ ವಿರುದ್ಧ ದ್ವೇಷ ಕಟ್ಟಿಕೊಂಡರೆ ತನಗೆ ವ್ಯಾಪಾರದಲ್ಲಿ ನಷ್ಟ ಸಂಭವಿಸುತ್ತದೆ ಎಂದು ಭಾವಿಸಿದ ಅಬ್ಬಕ್ಕರಾಣಿ ಮಂಗಳೂರಿನ ವ್ಯಾಪಾರದ ಮೇಲೆ ಪೋರ್ಚುಗೀಸರ ಸಾರ್ವಭೌಮತ್ವವನ್ನು ಚೌಟ ರಾಣಿ ಒಪ್ಪಲೇ ಬೇಕಾಯಿತು. ಅನಂತರ ಪೋರ್ಚುಗೀಸರು ಉಳ್ಳಾಲಕ್ಕೆ ಎದುರಾಗಿ ಮಂಗಳೂರಿನಲ್ಲಿ ಈಗಿನ ರುಜಾರಿಯೊ ಇಗರ್ಜಿಯ ಹತ್ತಿರ 'ಸೆವೊ ಸಿಬಾಸ್ಟಿಯನ್' ಎಂಬ ಕೋಟೆಯನ್ನು ಕಟ್ಟಿದರು. ಅಬ್ಬಕ್ಕದೇವಿಗೂ ಪೋರ್ಚುಗೀಸರಿಗೂ ಒಪ್ಪಂದವಾಯಿತು.[15]

ಸರ್ ಆರ್. ಸಿ. ಟೆಂಪಲ್ ಅವರು ಹೀಗೆ ಹೇಳುತ್ತಾರೆ: "ಪೋರ್ಚುಗೀಸರು ಜನರನ್ನು ಕೆಟ್ಟ ರೀತಿಯಲ್ಲಿ ಆಳಿದರು ನಿಜ, ಆದರೆ ಅವರಿಂದ ಹೊಸ ವಸ್ತುಗಳು ಇಂಡಿಯಾಕ್ಕೆ ಬಂದುವೆಂಬುದನ್ನು ಮರೆಯಬಾರದು. ಉದಾ: ಗೇರುಬೀಜ ಮತ್ತು ಹೊಗೆಸೊಪ್ಪು. ಇವು ಪೋರ್ಚುಗಲ್ಲಿನಿಂದ ಬಂದವುಗಳು. ಮಲಬಾರಿನಲ್ಲಿ ಸಂಭಾರಪದಾರ್ಥಗಳ ಮತ್ತು ಹಣ್ಣುಗಳ ಅಭಿವೃದ್ಧಿ ಪೋರ್ಚುಗೀಸರಿಂದ ಆಯಿತು. ತೆಂಗಿನ ಗಿಡದ ಬೇಸಾಯ ಮತ್ತು ತೆಂಗಿನ ನಾರಿನ ಕೈಗಾರಿಕೆಗೆ ಅವರೇ ಮೂಲಕಾರಣ. ಆದ್ದರಿಂದ ಅವರಿಂದ ಏನೂ ಒಳ್ಳೆಯದಾಗಲಿಲ್ಲವೆಂದು ಹೇಳುವುದು ಸರಿಯಲ್ಲ". ಕಾಲಕ್ರಮೇಣ ಮಂಗಳೂರು, ಕುಂದಾಪುರ ಮತ್ತು ಗಂಗೊಳ್ಳಿಗಳೊಡನೆ ಪೋರ್ಚುಗೀಸರು ವಿಶೇಷ ಸಂಪರ್ಕ ಬೆಳೆಸಿದರು. ಕನ್ನಡ ಕರಾವಳಿಯು ಆಗ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿತ್ತು. ವಿಜಯನಗರದ ಅರಸ ರಾಮರಾಯನ ಕಾಲದಲ್ಲಿ

ಆದ ಕರಾರಿನ ಅನ್ವಯ ಕರಾವಳಿ ತೀರದ ವ್ಯಾಪಾರವು ಪೋರ್ಚುಗೀಸರ ಕೈಸೇರಿತು.[16] ಇವರ ಶಸ್ತ್ರಬಲದಿಂದ ಹಂಜುಮಾನರ ವ್ಯಾಪಾರವನ್ನು ಸಂಪೂರ್ಣವಾಗಿ ಹಾಳುಗೆಡವಿ ಅವರಿಗೆ ನೆಲೆ ಇಲ್ಲದಂತೆ ಮಾಡಿದರು.

ಒಟ್ಟಿನಲ್ಲಿ ಯುರೋಪಿನಿಂದ ಆಫ್ರಿಕಾ ಖಂಡದ ದಕ್ಷಿಣ ತುದಿಯನ್ನು ಸುತ್ತುವರಿದು ಭಾರತದ ಪಶ್ಚಿಮ ಕರಾವಳಿಗೆ ಸಮುದ್ರಮಾರ್ಗವನ್ನು ಶೋಧಿಸಿದ ವಾಸ್ಕೋಡಗಾಮನ ಬೆನ್ನಲ್ಲೇ ಪೋರ್ಚುಗೀಸ್ ಸರಕಾರದ ಅಧಿಕಾರಿಗಳೂ ಸೈನಿಕರೂ ಹಾಗೂ ವ್ಯಾಪಾರಸ್ಥರೂ ತಂಡತಂಡವಾಗಿ ಭಾರತಕ್ಕೆ ಬಂದು ಮುಂಬಯಿ ಸಮೀಪದ ಚಾಳ್‌ನಿಂದ ಹಿಡಿದು ಕಲ್ಲಿಕೋಟೆಯವರೆಗೆ ಕರಾವಳಿಯುದ್ದಕ್ಕೂ ತಮ್ಮ ಶಿಬಿರಗಳನ್ನು ಸ್ಥಾಪಿಸಿಕೊಂಡರು. ಅವರ ಮುಖ್ಯ ಉದ್ದೇಶ ವ್ಯಾಪಾರವಾಗಿದ್ದರೂ ಲೂಟಿ, ದರೋಡೆ, ಮೂರರ ವ್ಯಾಪಾರದ ಏಕಸ್ವಾಮ್ಯವನ್ನು ಕೊನೆಗಾಣಿಸುವುದು ಹೀಗೆ ಎಂತಹ ಹೀನಾಯ ಕಾರ್ಯಗಳನ್ನೂ ಸಂಪತ್ತಿನ ಗಳಿಕೆಗಾಗಿ ನಡೆಸಲು ಅವರು ಸಿದ್ಧರಿದ್ದರು. ಅವರ ನೌಕೆಗಳಲ್ಲಿ ಫಿರಂಗಿಗಳಿದ್ದು ದೂರದೂರದ ವರೆಗೆ ಅವರು ಗುಂಡುಹೊಡೆಯುವ ಸಾಮರ್ಥ್ಯ ಹೊಂದಿದ್ದರು. ವೇಗದ ಓಡಾಟಕ್ಕೆ ಅವರು ಅರಬ್ಬೀ ಕುದುರೆಗಳನ್ನು ಉಪಯೋಗಿಸುತ್ತಿದ್ದರು. ಗೋವಾದಲ್ಲಿ ಅಧಿಕಾರ ನಡೆಸುತ್ತಿದ್ದ ಪೋರ್ಚುಗೀಸ್ ಸರಕಾರದ ರಾಜ್ಯಪಾಲರು ಈ ಸೈನಿಕ ಚಟುವಟಿಕೆಗಳನ್ನು ನಿಯಂತ್ರಿಸುತ್ತಿದ್ದರು. ವ್ಯಾಪಾರ ವಹಿವಾಟುಗಳಿಗಾಗಿ ಕರಾವಳಿ ತೀರದ ಬಂದರುಗಳಲ್ಲಿ ಮಳಿಗೆಗಳನ್ನು ತೆರೆದು ಅವುಗಳ ಸುತ್ತ ಕೋಟೆ ಕಟ್ಟಿ ಬಂದೂಕುಧಾರಿ ಸೈನಿಕರು ಅದನ್ನು ರಕ್ಷಿಸುತ್ತಿದ್ದರು. ಆ ಪ್ರದೇಶ ಸ್ಥಳೀಯ ಅರಸರ ಆಡಳಿತದೊಳಗಿದ್ದರೂ ಈಗಾಗಲೇ ಅಲ್ಲಿ ವ್ಯಾಪಾರ ನಡೆಸುತ್ತಿದ್ದ ಹಂಜುಮಾನರು, ಕೊಂಕಣಿಗರು ಮತ್ತು ಜೈನ ಸೆಟ್ಟಿಗಾರರಿಂದ ಪೋರ್ಚುಗೀಸರು ಬಲಾತ್ಕಾರವಾಗಿ ಸುಂಕ ವಸೂಲು ಮಾಡುತ್ತಿದ್ದರು. ಸ್ಥಳೀಯರಿಂದ ತಾವು ಖರೀದಿಸುವ ವಸ್ತುಗಳಿಗೆ ತಮಗೆ ಇಷ್ಟಬಂದ ರೀತಿಯಲ್ಲಿ ಕಡಿಮೆ ಬೆಲೆ ಕೊಡುತ್ತಿದ್ದರು. ಅರೇಬಿಯಾ ದ್ವೀಪದಿಂದ ಬಂದ ಮಾಪಿಳ್ಳೆ ಮುಸ್ಲಿಮರು (ಪರ್ದೇಶಿ ಮುಸ್ಲಿಮರು) ವ್ಯಾಪಕವಾಗಿ ವಿವಿಧ ದೇಶಗಳಾದ ಕೈರೋ, ಟರ್ಕಿ, ಇರಾಕ್, ಪರ್ಶಿಯಾಗಳ ವ್ಯಾಪಾರಿ ಗಳೊಂದಿಗೆ ವ್ಯಾಪಾರ ಕೇಂದ್ರವಾದ ಮಲಬಾರಿನಲ್ಲಿ ನೆಲೆಸಿದ್ದರು. ಮುಸ್ಲಿಮರು ಭಾರತದಲ್ಲಿ ಪೋರ್ಚುಗೀಸರು ಬರುವ ಮೊದಲು ವ್ಯಾಪಾರವನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಂಡಿದ್ದರು. ಕರಾವಳಿ ಭಾಗ ಮಾತ್ರವಲ್ಲದೆ ಪೆಗು, ಮರ್ಗುಯಿ (Mergul), ಮೇಲಕಾ (Melaka)ಗಳಲ್ಲಿ ಮತ್ತು ಪೂರ್ವಭಾಗಗಳಲ್ಲಿ ತಮ್ಮ ಪ್ರಭಾವ ಬೀರಿದ್ದರು. ವಾಣಿಜ್ಯ ವ್ಯಾಪಾರದಲ್ಲಿ

ಕಲ್ಲಿಕೋಟೆಯ ಸಮುದ್ರೀ ರಾಜ ಮತ್ತು ವಿದೇಶೀ ವ್ಯಾಪಾರಿಗಳ ಸಂಬಂಧ ಬಹಳ ಉತ್ತಮವಾಗಿತ್ತು. ಜೊತೆಗೆ ಸಮುದ್ರೀ ರಾಜ ಮಾಪಿಳ್ಳೆಗಳಿಗೆ ವ್ಯಾಪಾರ ನಡೆಸುವ ಸಂಪೂರ್ಣ ಅಧಿಕಾರ ನೀಡಿದ್ದನು. ಈ ಕಾರಣಕ್ಕಾಗಿ ಪೋರ್ಚುಗೀಸರಿಗೆ ತಮ್ಮ ನೆಲೆಯನ್ನು ಭದ್ರಪಡಿಸಿಕೊಳ್ಳುವುದು ಹಾಗೂ ಮುಸ್ಲಿಮರ(ಮೂರರ)ನ್ನು ನಾಶ ಮಾಡುವುದು ಇವರ ಉದ್ದೇಶವಾಗಿತ್ತು. ಮೊದಲಿನಿಂದಲೂ ವಿದೇಶೀ ವ್ಯಾಪಾರಿಗಳ ಪ್ರಾಬಲ್ಯವನ್ನು ಗ್ರಹಿಸಿದ ಪೋರ್ಚುಗೀಸರು ಮಾಪಿಳ್ಳೆಗಳನ್ನು ಹತ್ತಿಕ್ಕಲು ಯತ್ನಿಸಿದರು. ಏಕೆಂದರೆ ಮೂರರು ಭಟ್ಕಳದಲ್ಲಿ ನೆಲೆನಿಂತಿದ್ದರು. ಜೊತೆಗೆ ವ್ಯಾಪಾರದಲ್ಲಿ ಅಧಿಕಲಾಭ ಗಳಿಸುತ್ತಿದ್ದರು. ಹಾಗೆಯೇ ಮುಸ್ಲಿಮರಿಗೂ ಜೆಸ್ಯೂಟ್‌ಗಳಿಗೂ ಪ್ರಾರಂಭದಿಂದಲೇ ಜಿದ್ದಾಜಿದ್ದಿಗಳಿರುತ್ತಿದ್ದವು. ಸ್ವಾಭಾವಿಕವಾಗಿಯೇ ಪೋರ್ಚುಗೀಸರು ಇಂಡಿಯಾದಿಂದಲೇ ಅವರನ್ನು ಓಡಿಸಬೇಕೆಂದು ಪ್ರಯತ್ನಿಸಿದರು. ಈ ಕಾರಣಕ್ಕಾಗಿ ಭಟ್ಕಳ ಬಂದರನ್ನು ಸಂಪೂರ್ಣವಾಗಿ ನಾಶಮಾಡಿದರು.[17]

ಪೋರ್ಚುಗೀಸರ ಜುಲುಮೆ ವ್ಯಾಪಾರದ ನೀತಿಗೆ ತುಳುನಾಡಿನಲ್ಲಿ ಕ್ರಮೇಣ ವಿರೋಧ ವ್ಯಕ್ತವಾಯಿತು. ಪ್ರಥಮವಾಗಿ ಮಂಗಳೂರಿನ ವರ್ತಕರು ವಿರೋಧಿಸಿದರು; ಅನಂತರದಲ್ಲಿ ಭಟ್ಕಳ ಮತ್ತು ಹೊನ್ನಾವರದಲ್ಲಿ ಅಂಜಿದ್ವೀಪ ಕೋಟೆಯನ್ನು ಕೆಡವಿದನಂತರ ಕ್ರಿ. ಶ. 1509 ಮತ್ತು ಕ್ರಿ. ಶ. 1510ರಲ್ಲಿ ಭಟ್ಕಳದಲ್ಲಿ ಕೋಟೆ ಕಟ್ಟಲು ಪ್ರಯತ್ನಿಸಿ ವಿಫಲರಾದರು.

ಆನಂತರದ ದಿನಗಳಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ನಡೆಸಿದರೂ ಕೂಡಾ ಇದು ಅಲ್ಪಕಾಲಿಕವಾಗಿತ್ತು. ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಊರ್ಜಿತ ವ್ಯವಸ್ಥೆಗೆ ಬರುವ ಮುಂಚೆ ಬಿದನೂರಿನ ಪತನಾನಂತರ ಮಂಗಳೂರು ಮತ್ತು ಇತರೆ ಪ್ರದೇಶಗಳು ಹೈದರಾಲಿಯ ಕೈಸೆರೆ ಆಗುತ್ತವೆ. ಆದರೆ ಅಲ್ಪಕಾಲೀಕವಾಗಿ ವ್ಯವಹಾರವನ್ನು ನಡೆಸುತ್ತಿದ್ದವು. ಹಾಗಾಗಿ ಬ್ರೀಟಿಷರ ಮತ್ತು ಪೋರ್ಚುಗೀಸರ ಇತರ ಅನೇಕ ವ್ಯಾಪಾರದ ಒತ್ತಡಗಳು ಮತ್ತು ವ್ಯಾಪಾರದ ತಂತ್ರಗಳು ನೆಲೆಗಾಣುವ ಪೂರ್ವದ ಇತಿಹಾಸವನ್ನು ಗುರ್ತಿಸುವುದರಿಂದ ನಾನು ಇಲ್ಲಿ ಹೈದರಾಲಿ ಮತ್ತು ಟಿಪ್ಪು ಬೆಳವಣಿಗೆಯ ಕಾಲಘಟ್ಟದ ಪೂರ್ವದ ಇತಿಹಾಸವನ್ನು ಮಾತ್ರ ವ್ಯಾಪಾರ ವ್ಯವಸ್ಥೆಗಳನ್ನು ಮಾತ್ರ ಅಧ್ಯಯನ ಮಾಡುತ್ತಿದ್ದೇನೆ.[18]

ಭಾರತದಲ್ಲಿನ ಪೋರ್ಚುಗೀಸ್ ಯಶಸ್ಸಿನ ಮೊದಲ ಮತ್ತು ಪ್ರಮುಖ ಕಾರಣವೆಂದರೆ, ಅತ್ಯುತ್ತಮ ನೌಕಾಪಡೆ ಹೊಂದಿದ್ದುದು. 15ನೆಯ ಶತಮಾನದಲ್ಲಿ ಅವರು ವೈಜ್ಞಾನಿಕವಾಗಿ ಅಭಿವೃದ್ಧಿಪಡಿಸಿದರು. ಸಾಗರಕ್ಕೆ ಹೋಗುವ ಹಡಗುಗಳನ್ನು ನಿರ್ಮಿಸುವ ಕಲೆ ಭಾರತದಲ್ಲಿನ

ತೀರಗಳಲ್ಲಿ ನವೀನತೆಯಿಂದಾಗಿ ಬಂದಿತು. ಆಗ ಪೋರ್ಚುಗೀಸರು ಇಲ್ಲಿಗೆ ಆಗಮಿಸಿದರು.[19] ಯುರೋಪಿನ ಹೊರಭಾಗದಲ್ಲಿ ಒಟೊಮನ್ ಸಾಮ್ರಾಜ್ಯವು ಕೆಲವು ಫಿರಂಗಿಗಳನ್ನು ಹೊಂದಿದ ನೌಕಾಪಡೆಯಾಗಿತ್ತು. ಆದರೆ ಪೋರ್ಚುಗೀಸರು ಭಾರತಕ್ಕೆ ತಲುಪಿದಾಗ ಅವರಿಗೆ ಸವಾಲು ಹಾಕಲು ಭಾರತೀಯ ಸಮುದ್ರದಲ್ಲಿ ಯಾವುದೇ ನೌಕಾಪಡೆಗಳು ಇರಲಿಲ್ಲ.[20] ವಿಜಯನಗರ ಚಕ್ರವರ್ತಿಗಳು ಒಂದು ನೌಕಾಪಡೆ ಹೊಂದಿದ್ದರೂ ಸಹ ಅದು ಪೋರ್ಚುಗಲ್‌ನೊಂದಿಗೆ ಸ್ಪರ್ಧಿಸಲು ಸಾಕಷ್ಟು ಪ್ರಬಲವಾಗಿರಲಿಲ್ಲ. ಭಾರತೀಯ ಹಡಗುಗಳಲ್ಲಿ ಬಂದೂಕು ಮತ್ತು ಫಿರಂಗಿಗಳನ್ನು ಬಳಸುವ ಕಲೆ ಅಭಿವೃದ್ಧಿಯಾಗಿರಲಿಲ್ಲ. ಈ ಸಂದರ್ಭದಲ್ಲಿ ಅವರು ಪೋರ್ಚುಗೀಸರನ್ನು ವಿರೋಧಿಸಲು ಸಾಧ್ಯವಾಗದಿದ್ದರೆ ತುಳುನಾಡಿನ ಸ್ಥಳೀಯ ಮುಖ್ಯಸ್ಥರನ್ನು ದೂಷಿಸಲಾಗುವುದಿಲ್ಲ. ಗೇರುಸೊಪ್ಪೆ ಮುಖ್ಯಸ್ಥ ನಿಸ್ಸಂದೇಹವಾಗಿ, ತಿಮ್ಮಯ್ಯನ ಆಜ್ಞೆಯ ಅಡಿಯಲ್ಲಿ ಒಂದು ನೌಕಾಸೇನೆಯನ್ನು ಹೊಂದಿದ್ದನು. ಆದರೆ ಹಡಗುಗಳು ಬಂದೂಕುಗಳನ್ನು ಹೊಂದಿರಲಿಲ್ಲ. ವಿಜಯನಗರ ಚಕ್ರವರ್ತಿಗಳು ಮತ್ತು ಪೋರ್ಚುಗೀಸ್ ಇಬ್ಬರಿಗೂ ಮುಸ್ಲಿಮರು ಹೋರಾಡುವ ಸಾಮಾನ್ಯ ಶತ್ರುಗಳಾಗಿದ್ದರು. ವಿಜಯನಗರವು ಡೆಕ್ಕನ್ ಮುಸ್ಲಿಂ ಆಡಳಿತಗಾರರೊಂದಿಗೆ ಆಗಾಗ್ಗೆ ಹೋರಾಡಿದರು. ಪೋರ್ಚುಗೀಸ್ ಜೊತೆಗಿನ ಸ್ನೇಹಕ್ಕಾಗಿ ವಿದೇಶದಿಂದ ಮಿಲಿಟರಿ ಸಲಕರಣೆಗಳನ್ನು ಪಡೆದುಕೊಳ್ಳುವಲ್ಲಿ ಅವರಿಗೆ ದೊಡ್ಡ ಸಹಾಯವಾಗಬಹುದು.[21]

ಸ್ಥಳೀಯ ಮುಖಂಡರು ತಮ್ಮ ವಿರುದ್ಧ ಹೋರಾಟ ನಡೆಸಿದ್ದಾರೆಂದು ಪೋರ್ಚುಗೀಸರು ದೂರಿರಬಹುದು. ಆದರೆ ಅವರ ದೂರುಗಳ ಬಗ್ಗೆ ಯಾವುದೇ ಗಮನ ಹರಿಸಿದಂತೆ ಸ್ಪಷ್ಟವಾಗಿ ತಿಳಿಯದು.

### 3.3. ಕೆಳದಿ ಮತ್ತು ಪೋರ್ಚುಗೀಸರ ಸಂಬಂಧ

ಕೆಳದಿಯ ವೆಂಕಟಪ್ಪ ನಾಯಕ, ಸದಾಶಿವ ನಾಯಕ, ಶಿವಪ್ಪ ನಾಯಕರ ಕಾಲಕ್ಕೆ ತುಳುನಾಡಿನ ಕಾಸರಗೋಡು, ಬೇಕಲಕೋಟೆ, ಮಂಗಳೂರಿನಲ್ಲಿ ಕೋಟೆ ಕಟ್ಟಿದವರು ಕೆಳದಿಯರು. ಪೋರ್ಚುಗೀಸರಿಂದ ರಕ್ಷಣೆ ಪಡೆಯಲು ಈ ಕೋಟೆಗಳಿಗೆ ರಾಮರಾಜ ಕ್ಷತ್ರಿಯರನ್ನು ಕೆಳದಿಯವರು ಇಲ್ಲಿ ತಂದು ಕೋಟೆ ಕಾಯಲು ನೇಮಿಸಿದರು. ಇವರಿಗೆ ಕೋಟೆಯವರು ಎಂದು ಕರೆಯುವುದುಂಟು. ಇವರ ಒಂದು ಸೈನ್ಯದ ತುಕಡಿಯನ್ನು ಕೋಟೆಯಲ್ಲಿಟ್ಟಿದ್ದರು. ಶಿವಪ್ಪ ನಾಯಕನ ಕಾಲಕ್ಕೆ ಅವರು ಶಕ್ತಿಶಾಲಿಗಳಾಗಿದ್ದರು. ಸ್ಥಳೀಯರು

ಯಾರೂ ಹೆಚ್ಚು ಬಲಶಾಲಿಗಳಾಗಿರಲಿಲ್ಲ. ಜೊತೆಗೆ ದೀರ್ಘಕಾಲದವರೆಗೆ ಎಲ್ಲಿಯೂ ಆಳ್ವಿಕೆಯನ್ನು ನಡೆಸಿರಲಿಲ್ಲ. ಸ್ಥಳೀಯ ರಾಜರಲ್ಲಿ ಕೆಲವರು ಆಶ್ರಿತರಾಗಿದ್ದರು. ಇನ್ನು ಕೆಲವರು ಸ್ವತಂತ್ರರಾಗಿದ್ದರು. ಸ್ಥಳೀಯರಿಗೆ ಒಂದು ಪ್ರಭುತ್ವ ಅಂತ ಇರಲಿಲ್ಲ. ಎಲ್ಲಾ ಹೊರಗಿನವರೇ ಆಳಿದರು. ಅರಬ್ ವ್ಯಾಪಾರಿಗಳು ಇವರ ಸಂಪರ್ಕದಿಂದ ಬ್ಯಾರಿಗಳು ಬಂದರು. ಇವರು ಮಂಗಳೂರಿನ ಸುತ್ತಮುತ್ತಲ ಪ್ರದೇಶಗಳಲ್ಲಿ ಮಲಬಾರ್‌ನಲ್ಲಿ ನೆಲೆಸಿದ್ದರು. ಇವರು ಮುಂದೆ ಬ್ಯಾರಿಗಳಾಗಿ ಹೊರಹೊಮ್ಮಿದರು. ಕುಂದಾಪುರ, ಬಸ್ರೂರು ಪ್ರದೇಶಗಳಲ್ಲಿ ನಾಡವರು (ಶೆಟ್ಟಿಗಾರ್) ಬ್ಯಾರಿಗಳಾಗಿದ್ದರು. ತುಳು ಪ್ರದೇಶದಲ್ಲಿ ವ್ಯಾಪಾರ ಇರಲಿಲ್ಲ. ಕನ್ನಡ ಪ್ರದೇಶದಲ್ಲಿ ಒಂದು ಶ್ರೇಣಿ (ಗಿಲ್ಡ್) ಇತ್ತು. ಈ ಶೆಟ್ಟಿಗಳಲ್ಲಿ ವ್ಯಾಪಾರವು ಇತ್ತು. ಕೃಷಿಯೂ ಇತ್ತು. ಬಸ್ರೂರು ಬಂದರಿಗೆ ಚೀನಾದ ಅನೇಕ ಹಡಗುಗಳು ಬರುತ್ತಿದ್ದವು.

ಅಡಿಕೆ ಒಂದು ವಾಣಿಜ್ಯ ಬೆಳೆಯಾಗಿತ್ತು. ಅಕ್ಕಿ ದಿನನಿತ್ಯದ ಪೂರೈಕೆ ಆಗಿತ್ತು. ಕಾಳುಮೆಣಸು ಅಂತಾರಾಷ್ಟ್ರೀಯ ವ್ಯಾಪಾರವಾಗಿತ್ತು. ಇದನ್ನು ಬೆಳೆಯುವುದಕ್ಕೆ, ಮಾರಾಟ ಮಾಡುವುದಕ್ಕೆ ಅಧಿಕವಾದ ಬೇಡಿಕೆ ಇತ್ತು. ಏಕೆಂದರೆ ಇದನ್ನು ದೀರ್ಘಕಾಲದವರೆಗೆ ಸಂಗ್ರಹಣೆ ಮಾಡಬಹುದಾಗಿತ್ತು. ಇದು ಔಷಧೀಯ ಗುಣ ಹೊಂದಿತ್ತು ಹಾಗೂ ಸಂಭಾರ ಪದಾರ್ಥಗಳಲ್ಲಿ ಕಾಳುಮೆಣಸಿನ ಉಪಯೋಗವಾಗುತ್ತಿತ್ತು. ಮಂಗಳೂರಿನ ಸುತ್ತಮುತ್ತ ಅನೇಕ ಮಗ್ಗಗಳಿದ್ದವು. ಸಿಲ್ಕ್ ಮತ್ತು ಮಸ್ಲಿನ್ ಬಟ್ಟೆಗಳು ಆಮದಾಗುತ್ತಿದ್ದವು.[22] ಪಾತ್ರೆಗಳ ಕಾರ್ಖಾನೆ ಇತ್ತು. ಈ ಪಾತ್ರೆಗಳನ್ನು ಅರಬ್‌ಗೆ ಕಳುಹಿಸಲಾಗುತ್ತಿತ್ತು ಇದೆಲ್ಲಾ ವ್ಯಾಪಾರದ ಪ್ರತೀಕವಾಗಿತ್ತು. ವಿಜಯನಗರದಿಂದ ಮುತ್ತುರತ್ನಗಳನ್ನು ಕಳುಹಿಸಿ ಕುದುರೆಗಳನ್ನು ತರಿಸಿಕೊಳ್ಳುತ್ತಿದ್ದರು. ಬಂದರುಗಳಿಂದ ಸುಂಕವಸೂಲಿ ಮಾಡಲಾಗುತ್ತಿತ್ತು. ಇದರಿಂದ ರಾಜ್ಯಕ್ಕೆ ಲಾಭ ಬರುತ್ತಿತ್ತು. ಎಲ್ಲಾ ರಾಜರುಗಳೂ ಬಂದರಿನ ಮೇಲೆ ಹಾಗೂ ವ್ಯಾಪಾರದ ಮೇಲೆ ಹಿಡಿತ ತರಲು ಪ್ರಯತ್ನಿಸುತ್ತಿದ್ದರು. ಕೊನೆಯದಾಗಿ ಬ್ರಿಟಿಷರು ಬಂದರು. ಇವರು ಹಣದಲ್ಲಿ ಮತ್ತು ಮಿಲಿಟರಿಯಲ್ಲಿ ಶಕ್ತಿಶಾಲಿಯಾಗಿದ್ದರು.

ಶಿವಪ್ಪನಾಯಕನು ಪೋರ್ಚುಗೀಸರನ್ನು ಹೊನ್ನಾವರ, ಗಂಗೊಳ್ಳಿ, ಮಂಗಳೂರು ಎಲ್ಲಾ ಕಡೆ ಓಡಿಸಿದನು. 17ನೇ ಶತಮಾನದಲ್ಲಿ ಪೋರ್ಚುಗೀಸರು ಪುನಃ ಲೂಟಿವ್ಯಾಪಾರ ಪ್ರಾರಂಭಿಸಿದರು. ಉಳಿದ ಕೆಲವು ಕೆಳದಿ ನಾಯಕರು ಅಕ್ಕಿ ಪೂರೈಕೆಯನ್ನು ಪೋರ್ಚುಗೀಸರಿಗೆ ನಿಲ್ಲಿಸಿದರು. ಅಕ್ಕಿ ಪೂರೈಕೆ ನಿಲ್ಲಿಸಿದ ತತ್‌ಕ್ಷಣ ಪೋರ್ಚುಗೀಸರಿಗೆ ಒಂದು ರೀತಿಯ ಬರಗಾಲ

ಆರಂಭವಾಯಿತೆನ್ನಬಹುದು. ಏಕೆಂದರೆ ಅನಂತರದ ದಿನಗಳಲ್ಲಿ ಕಾಳುಮೆಣಸು, ಅಕ್ಕಿಯ ಪೂರೈಕೆಯ ಬೆಲೆಯನ್ನು ಕೆಳದಿ ನಾಯಕರು ನಿಗದಿ ಮಾಡುತ್ತಿದ್ದರು. ಈ ವಿಚಾರವಾಗಿ ಕೆಳದಿ ನಾಯಕರು ಹೇಳಿದ ಹಾಗೆ ಪೋರ್ಚುಗೀಸರು ಕೇಳಬೇಕಾಯಿತು. ಪೋರ್ಚುಗೀಸರು ಮತ್ತೊಂದು ವಿಚಾರ ಪ್ರಾರಂಭಿಸಿದರು 'ಫೋರ್ಟ್ ಪ್ಯಾಕ್ಟರಿ ಸಿಸ್ಟಮ್'.[23] ಕೋಟೆ ಮತ್ತು ವ್ಯಾಪಾರ ಒಪ್ಪಂದ ಪ್ರಕಾರ ಕೋಟೆ ಕಟ್ಟುವುದು, ವ್ಯಾಪಾರ ಮಾಡುವುದು, ಸರಕನ್ನು ದಾಸ್ತಾನು ಮಾಡುವುದು, ಮಾರುವಂಥದ್ದು, ಭಂಡಸಾಲೆಯಲ್ಲಿ ವ್ಯವಹಾರ ಮತ್ತು ಅವರದೇ ನಾಣ್ಯ ಚಲಾವಣೆ ಜಾರಿಗೆ ತಂದರು. ಅವರ ನಾಣ್ಯಕ್ಕೆ ಉತ್ತಮ ಬೆಲೆ ಇತ್ತು. ಆದರೆ ಇದನ್ನು ಕೆಳದಿ ನಾಯಕರು ನಿಯಂತ್ರಣಕ್ಕೆ ತಂದರು. (ಚಿನ್ನದ ನಾಣ್ಯ-ಕುಜ್ರಾತ್) ಆದರೆ ತುಳುನಾಡಿನಲ್ಲಿ ಕುಜ್ರಾತ್‌ನಾಣ್ಯಕ್ಕೆ ಬೇಡಿಕೆ ಹೆಚ್ಚು ಮಾಡಿದ್ರು. ಪೋರ್ಚುಗೀಸರಿಗೆ ವಸ್ತುಗಳನ್ನು ಖರೀದಿಸುವಾಗ ಕುಜ್ರಾತ್‌ನಾಣ್ಯವನ್ನು ಕೊಡಬೇಕೆಂದು ಸ್ಥಳೀಯ ವ್ಯಾಪಾರಿಗಳು ಪ್ರಾರಂಭಿಸಿದರು. ಆವಾಗ ವ್ಯಾಪಾರಸ್ಥರು ಪ್ರಬಲರಾದರು. ಗೌಡಸಾರಸ್ವತರು, ಕೆಳದಿ ನಾಯಕರು ಕುಜ್ರಾತ್‌ನಾಣ್ಯಕ್ಕೆ ಬೇಡಿಕೆ ಇಟ್ಟರು. ಪೋರ್ಚುಗೀಸರು ವ್ಯಾಪಾರ ಮೋಸದ ವ್ಯಾಪಾರ ಮಾಡುತ್ತಿದ್ದರು. ಇದನ್ನು ಗೌಡಸಾರಸ್ವತರು ಕೂಡ ಕಲಿತರು. ಕೆಲವು ಜಾತಿಯ ಆಧಾರದ ಮೇಲೆ ಗೌಡಸಾರಸ್ವತರು, ಸಿದ್ಧಿಗಳು, ಶೇಟ್‌ಗಳು ಕೆಳದಿ ಕಾಲದಲ್ಲಿನ ವ್ಯಾಪಾರಸ್ಥರಾದರು. ಕೆಳದಿ ಕಾಲದಲ್ಲಿ ಪೋರ್ಚುಗೀಸರು ಬಲಪ್ರಯೋಗ ಮಾಡಿದರು. ಲೂಟಿ ವ್ಯಾಪಾರ ಮಾಡಿದರು. ಆದರೆ ಕೆಳದಿ ನಾಯಕರು ಇದನ್ನು ನಿಯಂತ್ರಣಕ್ಕೆ ತಂದರು. ಫೋರ್ಟ್ ಫ್ಯಾಕ್ಟರಿ ಸಿಸ್ಟಮ್‌ನ್ನು ನಿಯಂತ್ರಣಕ್ಕೆ ತಂದರು. ಕೆಳದಿಯ ಶಿವಪ್ಪ ನಾಯಕನಿಗೆ ಎರಡು ಉದ್ದೇಶವಿತ್ತು. ಗೋವಾದಿಂದ ತುಳುನಾಡನ್ನು ರಕ್ಷಿಸಲು, ಮಲಬಾರಿಗಳಿಂದ ರಕ್ಷಣೆಗೆ ಕೋಟೆ ನಾಯಕರನ್ನು ತಂದುಹಾಕಿದ. ಈ ಸಮಯದಲ್ಲಿ ಲಿಂಗಾಯಿತ ವ್ಯಾಪಾರಸ್ಥರು ವೃದ್ಧಿಯಾದರು. ಪೋರ್ಚುಗೀಸರ ವ್ಯಾಪಾರ ನೀತಿಯಿಂದಾಗಿ ಸಾಗರೋತ್ತರ ವ್ಯಾಪಾರ ವೃದ್ಧಿಯಾಯಿತು. ಸಂಪರ್ಕಮಾರ್ಗಗಳು ಅಭಿವೃದ್ಧಿಯಾದವು. ಮಚುವಾ ಮತ್ತೆ ಹಾಯಿ ದೋಣಿ ಇವೆಲ್ಲಾ ಕೆಳದಿ ಕಾಲದಲ್ಲಿ ಹೆಚ್ಚು ಬಂತು.

ಇನ್ನೊಂದು ರಾಜಕೀಯ ಸಮಸ್ಯೆ ಪೋರ್ಚುಗೀಸರಿಗೆ ತುಳುನಾಡಿನಲ್ಲಿ ತೋರಿ ಬಂದದ್ದು ಆದಿಲ್‌ಶಾಹಿಯವರ ತುಳುನಾಡಿನ/ಕೆನರಾದ ರಾಜಕೀಯದಲ್ಲಿ ಆಸಕ್ತಿ ತೋರಿಸುತ್ತಿದ್ದುದು. ಇವುಗಳನ್ನು ಎದುರಿಸಲು ಪೋರ್ಚುಗೀಸ್ ವೈಸರಾಯ್ ಕರಾವಳಿ ಕರ್ನಾಟಕದಲ್ಲಿದ್ದ ಕೋಟೆಗಳನ್ನು ದುರಸ್ತಿ ಮಾಡಬೇಕೆಂಬ ಪತ್ರ 1556ರಲ್ಲಿದೆ. ಉಳ್ಳಾಲ ರಾಣಿ

ಉಳ್ಳಾಲದಲ್ಲಿ ಕೋಟೆಗಳನ್ನು ಭದ್ರಪಡಿಸುತ್ತಿದ್ದುದು ಪೋರ್ಚುಗೀಸರಿಗೆ ಒಂದು ರೀತಿಯ ಭಯವನ್ನುಂಟುಮಾಡುತ್ತಿದ್ದ ವಿಚಾರ 1556ರ ಜುಲೈ 25ರ ಪ್ರಬಂಧದಲ್ಲಿ ವ್ಯಕ್ತವಾಗಿದೆ.

ಗೇರುಸೊಪ್ಪೆ ರಾಣಿ (ಉತ್ತರಕನ್ನಡದಲ್ಲಿ) ಕೆಳದಿ ವೆಂಕಟಪ್ಪನ ಆಕ್ರಮಣವನ್ನು ಎದುರಿಸುತ್ತಿರುವುದು ಇತರ ಪತ್ರದಲ್ಲಿದೆ. ಉದಾ: 1596ರ ಜನವರಿ, ವೈಸರಾಯನು[24] ಪೋರ್ಚುಗೀಸ್ ಅರಸನಿಗೆ ಬರೆದ ಪತ್ರ 'ನೀನು ಹೇಳಿದಂತೆ ಬಿಜಾಪುರ ಆದಿಲ್‌ಶಾಹನು ಗೇರುಸೊಪ್ಪೆ-ಭಟ್ಕಳ ರಾಣಿ ಹೇಳಿಕೆಯಂತೆ ಕೆನರಾದ ರಾಜ (ಕೆಳದಿ ವೆಂಕಟಪ್ಪ ನಾಯಕ)ನ ವಿರುದ್ಧ ಕೆಲವು ದಂಡನಾಯಕರನ್ನು ಕಳುಹಿಸಿದ. ಆದರೆ ಆದಿಲ್‌ಶಾಹನ ಸಹೋದರನು ಸುಲ್ತಾನರ ವಿರುದ್ಧ ದಂಗೆ ಎದ್ದ. ಆದುದರಿಂದ ಬಿಜಾಪುರ ಸುಲ್ತಾನನ ಸೈನ್ಯ ಹಿಂದೆ ಬರಬೇಕಾಯಿತು. ಕೆಳದಿ ನಾಯಕ ಪ್ರಬಲವಾಗಿ ಭೈರಾದೇವಿಯನ್ನು ಎದುರಿಸಿ ಅವಳ ಆಯಕಟ್ಟಿನ ಕೋಟೆಗಳನ್ನು ಗೆದ್ದ'ನೆಂದು 1596 ಫೆಬ್ರವರಿ 28ರ ಪತ್ರ ತಿಳಿಸುತ್ತದೆ. ಈ ಎರಡು ಪತ್ರಗಳಿಂದ ತಿಳಿದುಬರುವ ಅಂಶವೆಂದರೆ ಕೆಳದಿ ಅರಸರ ಆಕ್ರಮಣವನ್ನು 1596ರಲ್ಲಿ ಎದುರಿಸಬೇಕಾಗಿ ಬಂತು. ಇದರಿಂದ ಪಾರಾಗಲು ಭೈರಾದೇವಿ ಆದಿಲ್‌ಶಾಹಿಯ ಸಹಾಯ ಕೇಳಿದಳು. ಬಿಜಾಪುರ ಸುಲ್ತಾನನ ದಂಗೆಯಿಂದಾಗಿ ಇದು ಸಾಧ್ಯವಾಗಲಿಲ್ಲ. ರಾಣಿ ಸಂಕಷ್ಟದಲ್ಲಿ ಸಿಕ್ಕಿದಳೆಂದು ಇದೇ ಪತ್ರ ತಿಳಿಸುತ್ತದೆ. ಇನ್ನು ಮುಂದುವರಿಯುತ್ತಾ ಈ ನಾಯಕನ ಉಪಟಳದಿಂದಾಗಿ ಈ ರಾಣಿ ನಮಗೆ ವಾರ್ಷಿಕ ಕಪ್ಪ ನೀಡಲು ಆಗಲಿಲ್ಲ. ಪೋರ್ಚುಗೀಸ್ ದೊರೆ 1598 ನವೆಂಬರ್ 28ರ ಪತ್ರದಂತೆ ವಿಜಯನಗರ ಅರಸರ ಸಾಮಂತನಾಗಿದ್ದ ಈ ನಾಯಕ ಬಂಡೆದ್ದು ಅಕ್ಕಪಕ್ಕದ ಅರಸರನ್ನು ಸೋಲಿಸಿ ಗೇರುಸೊಪ್ಪೆ ರಾಣಿಯನ್ನು ಕಪ್ಪ ವಸೂಲು ಮಾಡಿರುವನು. ಇದರಿಂದಾಗಿ ನಮ್ಮ ಹೊನ್ನಾವರ ಕೋಟೆಗೆ ಗಂಡಾಂತರವಿದೆ. ಆದುದರಿಂದ ನೀನು ಅಲ್ಲಿನ ಆಗುಹೋಗುಗಳನ್ನು ತಿಳಿಸುತ್ತ ಇದು ನಾಯಕನ ಪ್ರಯತ್ನ ವಿಫಲವಾಗುವಂತೆ ವರ್ತಿಸುತ್ತಿದ್ದರು ಎಂದು ಪೋರ್ಚುಗೀಸ್ ದೊರೆ ಗೋವೆಯ ವೈಸರಾಯನಿಗೆ ಬರೆದ ಪತ್ರದಲ್ಲಿದೆ.

1607ರ ಜನವರಿ 16ರಂದು ಗೋವೆ ವೈಸರಾಯ್ ಬರೆದ ಪತ್ರದಲ್ಲಿ ಗೇರುಸೊಪ್ಪೆ ರಾಣಿ ಸೋತು ಕೈಸೆರೆಯಾದಳು. ಅವಳ ರಾಜ್ಯವನ್ನು ಕೆಳದಿ ವೆಂಕಟಪ್ಪ ನಾಯಕ ಆಕ್ರಮಿಸಿದ ಈ ರಾಜ್ಯದಿಂದ 50,300 ಪಗೋಡಿ ಉತ್ಪತ್ತಿ ರಾಜ ಪಡೆದನೆಂದು 1625ರ ಪೋರ್ಚುಗೀಸ್ ರಾಜ ದಾಖಲೆಯಿಂದ ತಿಳಿದುಬರುತ್ತದೆ.[25]

ಇದರ ಪರಿಣಾಮಗಳು ಪೋರ್ಚುಗೀಸ್ ದಾಖಲೆ ಈ ರೀತಿಯಾಗಿ ತಿಳಿಸುತ್ತದೆ: ತಮ್ಮ ವ್ಯಾಪಾರಕ್ಕೆ ಇದು ಆತಂಕವನ್ನುಂಟುಮಾಡಿದ ಇಲ್ಲಿ ಪ್ರಬಲವಾದ ಆಂತರಿಕ ಸಾಮ್ರಾಜ್ಯ ಬೆಳೆದು ತಮ್ಮ ವರ್ಚಸ್ಸು ಕ್ಷೀಣಿಸುತ್ತಿದೆ ಎಂದು ಮನಗಂಡರು. ಎರಡನೆಯದಾಗಿ ಈ ಘಟನೆಯಿಂದಾಗಿ ಕೆಳದಿ ನಾಯಕರ ವರ್ಚಸ್ಸು ಬೆಳೆಯಿತು. ಕಾಳುಮೆಣಸಿನ ವ್ಯಾಪಾರ ಹಿಡಿದ ಕೆಳದಿ ನಾಯಕರು ಪಡೆದರು. ಇದು ತಮ್ಮ ವ್ಯಾಪಾರಕ್ಕೆ ಆಂತಕವನ್ನುಂಟು ಮಾಡಿತ್ತೆಂದು ಪೋರ್ಚುಗೀಸ್ ದಾಖಲೆ 1608ರಿಂದ ತಿಳಿದುಬರುತ್ತಿದೆ.

ಹೈದರ್ ಮತ್ತು ಟಿಪ್ಪು ಕಾಲದಲ್ಲಿ ತುಳುನಾಡಿನ ವ್ಯಾಪಾರದಲ್ಲಿ ಸಂಪೂರ್ಣವಾಗಿ ಏಕಸ್ವಾಮ್ಯ ವ್ಯಾಪಾರ ಮಾಡಿಬಿಟ್ಟರು. ಅಂದರೆ ಘಟ್ಟದ ಮೇಲಿನ ವ್ಯಾಪಾರಕ್ಕೆ ಹೆಚ್ಚಿನ ಪ್ರಾಮುಖ್ಯ ಬಂತು. ಇದರಿಂದಾಗಿ ಸ್ಥಳೀಯ ವ್ಯಾಪಾರಸ್ಥರ ವಿರೋಧ ಪ್ರಾರಂಭವಾಯಿತು. ಮುಸ್ಲಿಂ, ಶೇಟ್ ಕೊಂಕಣಿಗಳು ವಿರೋಧಿಸಿದರು. ಟಿಪ್ಪು ಸುಲ್ತಾನ್ ಮಾಡಿದ ನಾಣ್ಯಗಳು ಎಲ್ಲಾ ಇಸ್ಲಾಂ ಮಾದರಿಯಾಗಿದ್ದ ಕಾರಣ ಇದಕ್ಕೆ ವಿರೋಧವಿತ್ತು. ವ್ಯಾಪಾರದಲ್ಲಿ ಅರೇಬಿಕ್ ಗುಜರಾತಿಗಳಿಗೆ ಪ್ರಾಮುಖ್ಯ ದೊರಕಿತು. ಸ್ಥಳೀಯ ವ್ಯಾಪಾರಸ್ಥರ ಮೇಲೆ ಸುಂಕ ವಿಧಿಸಿದ. ಹೈದರಾಲಿ ಹೊನ್ನಾವರ, ಗಂಗೊಳ್ಳಿ ನೌಕಾಯಾನ ಪ್ರಾರಂಭಿಸಿದರು.[26] ಡೊಕಿಯಾರ್ಡ್ ಇವೆಲ್ಲವೂ ಕೂಡಾ ಕಳೆಗುಂದಿದವು. ಏಕೆಂದರೆ ಫ್ರೆಂಚರ ಪ್ರಭಾವ ಕಡಿಮೆಯಾಯಿತು. ಹೈದರಾಲಿ, ಟಿಪ್ಪು ಫ್ರೆಂಚರನ್ನು ಅನುಕರಣೆ ಮಾಡಿದ ಪರಿಣಾಮವಾಗಿತ್ತು.

ಕನ್ನಡನಾಡಿನ ಅರಸರೊಡನೆ ಪೋರ್ಚುಗೀಸರು ಮಾಡಿಕೊಂಡ ವ್ಯಾಪಾರ ಮತ್ತು ಇನ್ನಿತರ ಒಪ್ಪಂದಗಳು, ಪರದೇಶಿ ವರದಿ. ಕ್ರಿ.ಶ. 16–18ನೇ ಶತಮಾನದ ಕನ್ನಡನಾಡಿನ ಇತಿಹಾಸದಲ್ಲೂ ಹೆಚ್ಚಿನ ವಿಷಯಗಳು ಸ್ಪಷ್ಟ. ಪರಿಚಯ, ಕೆಲವು ದಾಖಲೆಗಳಿಂದ ಈ ಕಾಲದಲ್ಲಿ ಕನ್ನಡನಾಡಿನಲ್ಲಿ ಪೋರ್ಚುಗೀಸ್, ಡಚ್ಚ್, ಇಂಗ್ಲಿಷರು ಮತ್ತು ಫ್ರೆಂಚರು ವ್ಯಾಪಾರದೊಂದಿಗೆ ರಾಜಕೀಯ ನಡೆಸಿದ್ದರು ಎಂದು ತಿಳಿದುಬರುತ್ತದೆ. ಪೋರ್ಚುಗೀಸ್ ದಾಖಲೆಗಳಲ್ಲಿ ಅವರ ವೈಸರಾಯಿ ಸೈನ್ಯ ಪೋರ್ಚುಗಲ್ ಅರಸರಿಗೆ ಬರೆದ ಪತ್ರದಲ್ಲಿದೆ. ಇವುಗಳಲ್ಲಿ ಈ ವೈಸರಾಯರು ಕನ್ನಡನಾಡಿನ ವ್ಯಾಪಾರ ಹಿತಾಸಕ್ತಿಯ ಹಿನ್ನೆಲೆಯಲ್ಲಿ ಇಲ್ಲಿನ ರಾಜಕೀಯ ವಿವರಗಳನ್ನು ತಿಳಿಸಿದ್ದಾರೆ. ಮುಖ್ಯವಾಗಿ ವಿಜಯನಗರ ಪತನದ ಕರ್ನಾಟಕ ವೈಸರಾಯಿ ಮತ್ತು ಕನ್ನಡನಾಡಿನ ಅರಸರು ಮುಖ್ಯವಾಗಿ ಆದಿಲ್‌ಶಾಹಿ, ಕೆಳದಿನಾಯಕ, ಕನ್ನಡ ಕರಾವಳಿಯ ಅರಸರ ಸಂಬಂಧ ವಿವರ ತಿಳಿದುಬರುತ್ತದೆ. ಇದೇ ರೀತಿಯಲ್ಲಿ

ಪೋರ್ಚುಗೀಸ್ ವೈಸರಾಯಿ ಕನ್ನಡನಾಡಿನ ರಾಜರೊಂದಿಗೆ ಪತ್ರವ್ಯವಹಾರ ನಡೆಸಿದ್ದಾನೆ. ಇದು ಲಿವರೊಸ ದೊ ಚನರದಲ್ಲಿದೆ. ಇದರಲ್ಲಿ ಕೆಳದಿ ಅರಸ ಹೈದರಾಲಿಯೊಡನೆ ನಡೆಸಿದ ಪತ್ರವ್ಯವಹಾರ ಇತಿಹಾಸ ರಚನೆಗೆ ಬಹಳ ಸಹಕಾರಿಯಾಗಿದೆ. ಪೋರ್ಚುಗೀಸರ ವ್ಯಾಪಾರ ಮತ್ತು ಧಾರ್ಮಿಕ ಧೋರಣೆ ವಿಚಾರ ತಿಳಿಸುವ ಪತ್ರಗಳಿವೆ.[27] ಪೋರ್ಚುಗೀಸ್ ವೈಸರಾಯಿ ಮಾರ್ಕ್ವಿಸ್ ಕೆಸ್ವಲೂ 1750 ಡಿಸೆಂಬರ್‌ನಲ್ಲಿ ಬರೆದ ಪತ್ರ ಐತಿಹಾಸಿಕ ಮಹತ್ವದ್ದಾಗಿದೆ. ಈ ಪತ್ರದಲ್ಲಿ ಕೆಳದಿ ರಾಜರ ಪರಿಸ್ಥಿತಿ, ಸ್ವಾದಿಯ ಪ್ರಾಮುಖ್ಯ, ಪೋರ್ಚುಗೀಸ್ ಮತ್ತು ಆಂಗ್ಲೇಯರು ಸ್ವಾದಿ ರಾಜ್ಯದಲ್ಲಿ ನಡೆಸಿದ ವ್ಯಾಪಾರ ಪೈಪೋಟಿಗಳ ವಿವರಗಳಿವೆ. ಡಚ್ಚರ ವಿವರ ತಿಳಿಸುವ ದಾಖಲೆ ಆ ಭಾಷೆಯಲ್ಲಿದ್ದುದರಿಂದ ಆ ಭಾಷೆ ತಿಳಿಯದ ಕಾರಣ ಅವರ ಚಟುವಟಿಕೆ ಇತಿಹಾಸ ಗರ್ಭದಲ್ಲಿಯೇ ಅವಿತುಕೊಂಡಂತಿದೆ. ಅದರೂ ಕೆಲವು ದಾಖಲೆಗಳ ಭಾಷಾಂತರವು 'ಬಾಂಬೆ ಹಿಸ್ಟೋರಿಕಲ್ ಸೊಸೈಟಿ' ಪತ್ರಿಕೆ 1928–32ರಲ್ಲಿ 'ಮೋನ್ಯುಮೆಂಟೊ ಹಿಸ್ಟೋರಿಕಲ್' ಶೀರ್ಷಿಕೆಯಲ್ಲಿ ಪ್ರಕಟವಾಗಿದೆ. ಕೆಳದಿ ನಾಯಕ, ಆದಿಲ್‌ಶಾಹಿ ಮತ್ತು ಪೋರ್ಚುಗೀಸ್ ಮತ್ತು ಡಚ್ಚರ ಸಂಪರ್ಕ ರೀತಿಯ ವಿವರ ತಿಳಿಸುತ್ತದೆ. ಕನ್ನಡನಾಡಿನಲ್ಲಿನ ಕೆಲವು ರೇವುಗಳ ಪರಿಚಯ ಮತ್ತು ಅಲ್ಲಿಗೆ ಆಮದು–ರಫ್ತಾಗುವ ಸಾಮಗ್ರಿಗಳ ವಿವರ ತಿಳಿಸುತ್ತದೆ. ಡಚ್ಚರ ದಾಖಲೆಯು 1675–76ರಲ್ಲಿ ಶಿವಾಜಿ ಕನ್ನಡ ಕರಾವಳಿಯ ಮೇಲೆ ನಡೆಸಿದ ದಾಳಿ ಮತ್ತು ಅದರಿಂದಾದ ಪರಿಣಾಮ ತಿಳಿದುಬರುತ್ತದೆ. ಆಂಗ್ಲಭಾಷೆಯ ದಾಖಲೆಗಳು ವಿಪುಲವಾಗಿವೆ. ಇವುಗಳಲ್ಲಿ ಮುಖ್ಯವಾದವುಗಳು 'ಪ್ಯಾಕ್ಟರಿ ರೆಕಾರ್ಡ್ಸ್'. ಆಂಗ್ಲೇಯರ ಭಂಡಸಾಲೆ ಕಾರವಾರ, ಭಟ್ಕಳ ಮತ್ತು ಹೊನ್ನಾವರದಲ್ಲಿದ್ದುದರಿಂದ ಈ ಭಂಡಸಾಲೆಯ ಅಧಿಕಾರಿಗಳು ಬೊಂಬಾಯಿಯ ಮುಖ್ಯ ಭಂಡಸಾಲೆ ಕಛೇರಿಯವರೊಡನೆ ನಡೆಸಿದ ಪತ್ರವ್ಯವಹಾರವೇ 'ಪ್ಯಾಕ್ಟರಿ ರೆಕಾರ್ಡ್ಸ್'. ಈ ಕಾಗದ ಪತ್ರಗಳನ್ನು ಕ್ರೋಡೀಕರಿಸಿ A Calim of the Court Ministers of East India Company forts. 1618ರಿಂದ 1669 ಮತ್ತು 1670 ರಿಂದ 1684 ಎಂಬ ಶೀರ್ಷಿಕೆಯ ಗ್ರಂಥಗಳನ್ನು ಹೊರತಂದಿದ್ದಾರೆ. ಈ ದಾಖಲೆಗಳು ಇಂಗ್ಲಿಷರು ಮತ್ತು ಕನ್ನಡನಾಡಿನ ಅರಸರ ವ್ಯವಹಾರ ತಿಳಿಸಿದ್ದಲ್ಲದೆ, ರಾಜಕೀಯ ವಿಷಯಗಳ ಮೇಲೆ ತಮ್ಮ ಅಭಿಪ್ರಾಯ ತಿಳಿಸಿ, ಅವರ ಕ್ರಮ, ಅವರ ಭಂಡಸಾಲೆ ರಚನೆ, ವ್ಯಾಪಾರ, ಇಲ್ಲಿ ರೇವುಗಳ ವ್ಯಾಪಾರ ಪ್ರಾಮುಖ್ಯ ಮತ್ತು ಇವರು ಇಲ್ಲಿನ ಸಾಮಾಜಿಕ ಸ್ಥಿತಿಯ ಮೇಲೆ ಅವರ ಅಭಿಪ್ರಾಯ ಕರ್ನಾಟಕ ಇತಿಹಾಸ ಪರಿಪೂರ್ಣತೆಗೆ ಬಹಳ ಸಹಕಾರಿಯಾಗಿದೆ ಎಂದರೆ ತಪ್ಪಾಗಲಾರದು. 18ನೇ ಶತಮಾನದ ಕನ್ನಡನಾಡಿನ ಇತಿಹಾಸದ ವಿವರ ಇಂಗ್ಲಿಷ್

ದಾಖಲೆಗಳಿಂದ ತಿಳಿದುಬರುತ್ತವೆ. ಇವೆಲ್ಲಾ ಅಪ್ರಕಟಿತ ದಾಖಲೆ. ಇವುಗಳನ್ನು ಮಹಾರಾಷ್ಟ್ರ ಆರ್ಕಿವ್‌ನಲ್ಲಿಟ್ಟಿದ್ದಾರೆ. ಕೆನರಾ ಫೇಕ್ಟರಿಯ ಕೇಂದ್ರ ದಾಖಲೆಗಳು ಸ್ವಾದಿ ಮತ್ತು ಇಂಗ್ಲಿಷರ ವ್ಯಾಪಾರ ಮತ್ತು ರಾಜಕೀಯ ಸಂಬಂಧ ತಿಳಿಸುತ್ತವೆ.[28] ಹೈದರ್ ಮತ್ತು ಟಿಪ್ಪುವಿನ ಚಟುವಟಿಕೆಯ ವಿಚಾರದ ಬಗ್ಗೆ ಇಂಗ್ಲಿಷ್ ದಾಖಲೆಗಳಿವೆ. ಅವುಗಳಲ್ಲಿ ಮುಖ್ಯವಾದವು ಕನ್ನಡನಾಡಿನ ಅರಸರು ಪೋರ್ಚುಗೀಸ್ ಇಂಗ್ಲಿಷರೊಡನೆ ಮಾಡಿಕೊಂಡ ಕೆಲವು ಒಪ್ಪಂದಗಳು ಇತಿಹಾಸದ ದೃಷ್ಟಿಯಲ್ಲಿ ಪ್ರಮುಖವಾಗಿವೆ. ಪೋರ್ಚುಗೀಸರ ಒಪ್ಪಂದ, ಅವರ ದಾಖಲೆಗಳಲ್ಲೂ ಇದೆ. ಈ ದಾಖಲೆ ಕೆಳದಿ ವೀರಭದ್ರ ಮತ್ತು ಪೋರ್ಚುಗೀಸರ 1632ರ ಒಪ್ಪಂದ, 1714ರಲ್ಲಿ ಬಸವಪ್ಪ ಮತ್ತು ಪೋರ್ಚುಗೀಸರ ಒಪ್ಪಂದವಿದೆ. ಆಂಗ್ಲೇಯರು ಮತ್ತು ಕೆಳದಿ ಅರಸರ ಒಪ್ಪಂದ ಮತ್ತು ಲೊಗನ್ ಸಂಗ್ರಹಿಸಿದ ದಾಖಲೆಗಳಿಂದ ತಿಳಿದುಬರುವುದೇನೆಂದರೆ, ಕನ್ನಡನಾಡಿನ ಅರಸರು ತಮ್ಮ ಕ್ಷೇತ್ರ ಕನ್ನಡನಾಡಿನ ಹೊರಗೂ ಹರಡಿಸಿ ಅಲ್ಲಿನ ರಾಜಕಿಯದಲ್ಲಿ ಪ್ರಭಾವ ಬೀರಿದ್ದರೆಂದು ತಿಳಿದುಬರುತ್ತದೆ.

### 3.4. ಪೋರ್ಚುಗೀಸ್ ಮತ್ತು ಹೈದರಾಲಿ

ಹೈದರ್ ಮತ್ತು ಟಿಪ್ಪುಸುಲ್ತಾನ್ ಕಾಲದಲ್ಲಿ ತುಳುನಾಡಿನ ವ್ಯಾಪಾರ ವಿಸ್ತಾರವಾಯಿತು. ಏಕೆಂದರೆ ಹೊಸ ಹೊಸ ವ್ಯಾಪಾರ ವಾಣಿಜ್ಯಪದ್ಧತಿಯನ್ನು ಜಾರಿಗೆ ತಂದರು. ಹೊಸದಾದ ನಾಣ್ಯಪದ್ಧತಿ ಜಾರಿಗೆ ಬಂತು. ಸ್ಥಳೀಯ ವ್ಯಾಪಾರಸ್ಥರೊಟ್ಟಿಗೆ ಘಟ್ಟದ ಮೇಲಿನ ವ್ಯಾಪಾರಸ್ಥರನ್ನು ತುಳುನಾಡಿಗೆ ಕರೆತಂದರು. ಜೊತೆಗೆ ಕೊಂಕಣಿ, ಗುಜರಾತಿ, ಅರಬ್ ವ್ಯಾಪಾರಸ್ಥರು ಹಿಗೆ ಎಲ್ಲಾ ರೀತಿಯ ವ್ಯಾಪಾರದ ವಿಸ್ತರಣೆ ಆಯ್ತು. ಆದರೆ ಟಿಪ್ಪು ಸುಲ್ತಾನ್ ಯಾವುದೆ ವಿಸ್ತರಣೆ ಮಾಡಲಿಲ್ಲ.[29]

ವಾಸ್ತವವಾಗಿ ಹೈದರಾಲಿ ಪೋರ್ಚುಗೀಸರೊಂದಿಗೆ ಸೌಹಾರ್ದತೆಯಿಂದ ಇರುವುದಕ್ಕೆ ಆದ್ಯತೆ ನೀಡಬೇಕೆಂದು ಬಯಸಿದ್ದ. ನಂತರದ ದಿನಗಳಲ್ಲಿ ಒಂದೆರಡು ಸಂದರ್ಭಗಳು ಮೈಸೂರಿನ ಮನಃಸ್ಥಿತಿಯನ್ನು ಕೆರಳಿಸಿ, ಸೈನಿಕ ಬಲಪ್ರಯೋಗಕ್ಕೆ ನಾಂದಿಹಾಡಿತು. ಪೋರ್ಚುಗೀಸರು ಬ್ರಿಟಿಷರೊಂದಿಗೆ ಯಾವುದೇ ಸಹಾನುಭೂತಿಯನ್ನು ಹೊಂದಿಲ್ಲವೆಂದು ನಮಗೆ ತಿಳಿದಿದೆ. ಕೆನರಾದಲ್ಲಿ (1768–69ರಲ್ಲಿ) ಮೊದಲ ಆಂಗ್ಲೋ ಮೈಸೂರು ಯುದ್ಧ ನಡೆದರೂ ಪೋರ್ಚುಗೀಸರು ಬ್ರಿಟಿಷರೊಂದಿಗೆ ಸಕ್ರಿಯವಾಗಿ ಸಹಕಾರ ಹೊಂದಿದ್ದರು. ಮಂಗಳೂರಿನ ವಿಷಯವಾಗಿ ಹೈದರಾಲಿ ಬ್ರಿಟಿಷರ ಕಾರ್ಖಾನೆಯನ್ನು ಆಕ್ರಮಣ ಮಾಡಲು

ಯೋಜಿಸಿದ್ದ. ನಂತರ ಪೋರ್ಚುಗೀಸರು ತಮ್ಮ ಪುನರಾವರ್ತಿತ ವಿನಂತಿಗಳ ಹೊರತಾಗಿಯೂ ಇಂಗ್ಲೀಷ್ ವಿರುದ್ದ ಸಹಕರಿಸಿಕೊಳ್ಳಲು ನಿರಾಕರಿಸಿದರು. ಜೊತೆಗೆ ಅವರು ಪೋರ್ಚುಗೀಸ್ ಸಹಾನುಭೂತಿಯು ನಿಜವಾಗಿಯೂ ತಮ್ಮ ತಟಸ್ಥತೆಯನ್ನು ತಳ್ಳಿ ಹಾಕುವಂತೆಯೇ ಇಡುತ್ತಾರೆ ಎಂಬುದನ್ನು ಅವರು ಗಮನಿಸಬೇಕು. ಈ ಸಂದರ್ಭದಲ್ಲಿ ತಮ್ಮ ವರ್ತನೆಯು ಹೆಚ್ಚು ಶೋಚನೀಯ ಮತ್ತು ಅಪ್ರಾಮಾಣಿಕವಾಗಿದೆ ಎಂದು ಅವರು ತಮ್ಮನ್ನು ತಿಳಿದಿದ್ದರು. ನಂತರ ಪೋರ್ಚುಗೀಸರ ಪ್ರಯತ್ನವು ಸದಾಶಿವಗಡ ಕೊಟೆಯನ್ನು ವಶಪಡಿಸಿಕೊಳ್ಳಲು ಬಂದಿತು. ಅವರು ಕೋಟೆಯನ್ನು ಸ್ವಾಧೀನಪಡಿಸಿಕೊಂಡರೆ ಬ್ರಿಟಿಷರು ಅದನ್ನು ಆಕ್ರಮಿಸುವುದಿಲ್ಲ ಎಂದು ಮನವಿ ಮಾಡಿದರು. ಸ್ವಲ್ಪ ಸಮಯದ ಮೊದಲು ಮಂಗಳೂರಿನಲ್ಲಿ ನಡೆದ ಘಟನೆಯ ಬಗ್ಗೆ ವಿಚಿತ್ರ ವಾದವಿತ್ತು. ಮಂಗಳೂರಿನ ತಮ್ಮ ಸ್ವಂತ ಕಾರ್ಖಾನೆಯನ್ನು ರಕ್ಷಿಸಲು ಅವರಿಗೆ ಸಾಧ್ಯವಾಗಲಿಲ್ಲ. ಅವರು ಸದಾಶಿವಗಡವನ್ನು ಆಕ್ರಮಣ ಮಾಡಬಹುದೆಂಬುದನ್ನು ತಡೆಯಲು ಸಾಧ್ಯವಾಗಲಿಲ್ಲ ಎಂಬುದನ್ನು ಅವರು ಅರ್ಥಮಾಡಿಕೊಳ್ಳಲು ವಿಫಲರಾದರು. ಹೀಗಾಗಿ ಹೈದರ್‌ಗೆ ಸಾಕಷ್ಟು ಸೌಕರ್ಯಗಳಿದ್ದುವು. ಅವರೊಂದಿಗೆ ಸೌಹಾರ್ದ ಸಂಬಂಧಗಳನ್ನು ಒಡೆದು ಮಂಗಳೂರಿನಿಂದ ಅವರನ್ನು ಹೊರಹಾಕಲು ಪ್ರಯತ್ನಿಸಿದನು. ಆದರೆ ಅದು ಸಾಧ್ಯವಾಗಲಿಲ್ಲ. ಬದಲಾಗಿ ತಮ್ಮ ಕರಾವಳಿ ಭೂಮಿಯನ್ನು ಬ್ರಿಟಿಷರಿಂದ ಕಿತ್ತುಕೊಂಡ ನಂತರ ತಮ್ಮ ಕಾರ್ಖಾನೆಯನ್ನು ಪುನಃ ಸ್ಥಾಪಿಸಿದರು. ಅವರು ಬಂಧಿತ ಪಾದ್ರಿಗಳನ್ನು ಬಿಡುಗಡೆ ಮಾಡಿದರು ಮತ್ತು ಧಾರ್ಮಿಕತೆಯನ್ನು ಪುನರುಚ್ಚರಿಸಿದರು.[30] ಅವರು ಮೊದಲು ಅವರಿಗೆ ಒಪ್ಪಿಕೊಂಡಿರುವ ವಾಣಿಜ್ಯ ಸವಲತ್ತುಗಳು. ಪೋರ್ಚುಗೀಸರ ಕಡೆಗೆ ಹೈದರ್ ಮೃದುತ್ವಕ್ಕೆ ಎರಡು ಅಥವಾ ಮೂರು ಕಾರಣಗಳಿವೆ ಎಂದು ಊಹಿಸಬಹುದು. ಅವರ ಪ್ರಮುಖಶತ್ರುಗಳು ಬ್ರಿಟಿಷರಾಗಿದ್ದರು. ಯಾರ ವಿರುದ್ಧ ಯಾರನ್ನು ಒಟ್ಟುಗೂಡಿಸಬೇಕೆಂದು ಅವರು ಬಯಸಿದ್ದರು. ಇದಲ್ಲದೆ, ಅವರು ಈಗಾಗಲೆ ಗೋವಾದಿಂದ ಯುದ್ಧ ಸಾಮಗ್ರಿಗಳ ಸರಬರಾಜುಗಳನ್ನು ಸಂಗ್ರಹಿಸಬಹುದು. ಅವುಗಳ ನಡುವೆ ವಾಣಿಜ್ಯ ವಿನಿಮಯ ಎರಡೂ ಕಡೆ ಲಾಭದಾಯಕ ಈ ಸಂದರ್ಭಗಳಲ್ಲಿ ಅವರೊಂದಿಗೆ ಶಾಂತಿಯನ್ನು ಮುರಿಯಲು ಸಾಧ್ಯವಿಲ್ಲ ಎನ್ನುವುದು ನಿಜಕ್ಕೂ ಅಪೇಕ್ಷಣೀಯವಾಗಿದೆ.

1763ರಲ್ಲಿ ಹೈದರಾಲಿಯು ಕೆಳದಿ ರಾಜ್ಯವನ್ನು ವಶಪಡಿಸಿಕೊಂಡನು. ಆದುದರಿಂದ ದಕ್ಷಿಣ ಕನ್ನಡ ಕರಾವಳಿಯು ಅವನ ಕೈಸೇರಿತು. ಆತನೂ ಪೋರ್ಚುಗೀಸರೊಡನೆ

ಸ್ನೇಹಮಯ ಸಂಬಂಧವನ್ನು ಬೆಳೆಸಿಕೊಂಡನು. ಮಂಗಳೂರಿನಲ್ಲಿ ಅವರ ವ್ಯಾಪಾರಕೇಂದ್ರವನ್ನು ಮೊದಲಿನಂತೆಯೇ ಇಟ್ಟುಕೊಳ್ಳಲು ಒಪ್ಪಿದನು. ಈ 300 ವರ್ಷಗಳ ಕಾಲಾವಧಿಯಲ್ಲಿ ಪೋರ್ಚುಗೀಸರು ದಕ್ಷಿಣ ಕನ್ನಡ ಕರಾವಳಿಯ ವ್ಯಾಪಾರಿಗಳೊಡನೆ ನಿಕಟಸಂಬಂಧವನ್ನು ಬೆಳೆಸಿಕೊಂಡು ಬಂದರು. ಕರಿಮೆಣಸು, ಅಕ್ಕಿ, ಅಡಿಕೆ ಇತ್ಯಾದಿ ದಕ್ಷಿಣ ಕನ್ನಡನಾಡಿನ ಸಾಮಾನುಗಳಿಗೆ ಗೋವೆಯಲ್ಲಿ ಬಹಳ ಬೇಡಿಕೆಯಿತ್ತು. ಗೋವೆಯಲ್ಲಿ ತಯಾರಾಗುತ್ತಿದ್ದ ಉಪ್ಪು ಇತ್ಯಾದಿ ವಸ್ತುಗಳ ಆವಶ್ಯಕತೆ ಇಲ್ಲಿ ಇತ್ತು. ಕೆಳದಿಯ ಅರಸರು ಬಲವಂತರಾಗಿದ್ದಾಗ ಪೋರ್ಚುಗೀಸರ ವ್ಯಾಪಾರ–ವ್ಯವಹಾರಗಳನ್ನು ಹತೋಟಿಯಲ್ಲಿ ಇಡುತ್ತಿದ್ದರು. ಆದರೆ ಆ ಅರಸರು ಬಲಹೀನರಾದಾಗ ಪೋರ್ಚುಗೀಸರು ತಮ್ಮ ವ್ಯಾಪಾರ ವಿನಿಮಯಗಳನ್ನು ತಮ್ಮಿಚ್ಛೆಯಂತೆ ನಡೆಸಲು ಪ್ರಯತ್ನಿಸುತ್ತಿದ್ದರು.[31]

## 3.5. ತುಳುನಾಡಿನ ನೌಕಾಯುದ್ಧ

ಸುಮಾರು 300 ಕಿ.ಮೀ. ಉದ್ದವಿರುವ ಕರ್ನಾಟಕ ಕರಾವಳಿಯು ಸಾಗರೋತ್ತರ ವ್ಯಾಪಾರ ನಡೆಸುವುದರೊಂದಿಗೆ ಕೆಲವು ಸಲ ನೌಕಾಸಮರಗಳನ್ನು ಕಂಡಿತ್ತೆಂಬ ಸಂಗತಿಗಳು ಕೆಲವು ಐತಿಹಾಸಿಕ ದಾಖಲೆಗಳಿಂದ ತಿಳಿದುಬಂದಿವೆ. ಇದರಲ್ಲಿ ಕೆಲವು ಸ್ಥಳೀಯ ಮತ್ತು ವಿದೇಶೀಯ ದಾಖಲೆಗಳು ಇವೆ. ಸ್ಥಳೀಯ ದಾಖಲೆಗಳಲ್ಲಿ ಸಾಹಿತ್ಯಕೃತಿ ಮತ್ತು ಶಾಸನಗಳು ಮುಖ್ಯವಾಗಿ ಇವುಗಳ ಶಿಲಾಫಟಕದಲ್ಲಿ ಮೂಡಿಬಂದ ಶಿಲ್ಪಗಳು ಗಮನಾರ್ಹ. ವಿದೇಶೀ ದಾಖಲೆಗಳಲ್ಲಿ ಪ್ರವಾಸಿಗರ ವರದಿಗಳು ಮತ್ತು ಇವರ ದಾಖಲೆಪತ್ರಗಳು ಗಮನಾರ್ಹ. ಈ ವಿದೇಶಿ ದಾಖಲೆಪತ್ರಗಳು ಪೋರ್ಚುಗೀಸ್, ಡಚ್ಚ್, ಫ್ರೆಂಚ್ ಮತ್ತು ಇಂಗ್ಲಿಷ್ ಭಾಷೆಗಳಲ್ಲಿವೆ. ಕ್ರಿ. ಶ. 1ನೇ ಶತಮಾನದಲ್ಲಿ ಪಶ್ಚಿಮ ಕರಾವಳಿಯಲ್ಲಿ ರೇವುಗಳಿದ್ದು, ಅಲ್ಲಿ ನೌಕೆಗಳು ಇದ್ದುದು ವಿದೇಶೀ ಪ್ರವಾಸಿಗಳ ವರದಿಗಳಲ್ಲಿ ವ್ಯಕ್ತವಾಗಿದೆ. ನೀರ್ಗಳ್ಳರೆಂಬ ಕರಾವಳಿ ಜನಾಂಗದವರು ಸಮುದ್ರವ್ಯಾಪಾರವನ್ನು ನಿಯಂತ್ರಿಸುತ್ತಿದ್ದರು. ಇವರು ನೌಕೆಗಳನ್ನು ಹೊಂದಿ ವಿದೇಶಿ ವ್ಯಾಪಾರಸ್ಥರೊಡನೆ ನೌಕಾಯುದ್ಧ ಮಾಡುತ್ತಿದ್ದರೆಂಬ ಸಂಗತಿಗಳು ವಿದೇಶೀಯ ಬರಹಗಾರರಿಂದ ತಿಳಿದುಬರುತ್ತದೆ.[32]

ಕರಾವಳಿ ಕರ್ನಾಟಕದಲ್ಲಿ ನೌಕಾಯುದ್ಧವು 14ನೇ ಶತಮಾನದಿಂದ ಆರಂಭವಾಗಿ 17ನೇ ಶತಮಾನದವರೆಗೆ ಮುಂದುವರಿಯಿತು. ಈ ಕಾಲದಲ್ಲಿ ವಿಜಯನಗರ ಚಕ್ರವರ್ತಿಗಳು ವಿಜಯನಗರವನ್ನು ಕೇಂದ್ರವಾಗಿಟ್ಟುಕೊಂಡು ಕರ್ನಾಟಕವನ್ನು ಆಳುತ್ತಿದ್ದರು. ಇವರು ಯುದ್ಧ

ನೌಕೆಯನ್ನು ಹೊಂದಿದ್ದರು. ಜೊತೆಗೆ ಲಕ್ಕಣ್ಣ ದಂಡೇಶನ ನಾಯಕತ್ವದಲ್ಲಿ ಸಿಂಹಳವನ್ನು ಗೆದ್ದಿದ್ದರು. ಇವರ ನೌಕಾ ಠಾಣೆ ಮಂಗಳೂರಿನಲ್ಲಿತ್ತು. ಈ ನೌಕಾಠಾಣ್ಯದ ಮುಖ್ಯಸ್ಥ 'ನಾವಿಕಪ್ರಭು' ಎಂದು ಶಾಸನದಲ್ಲಿ ವ್ಯಕ್ತವಾಗಿದೆ.[33] ತಿಮ್ಮೋಜಿ ಎಂಬ ನೌಕಾ ದಂಡನಾಯಕ ಹೊನ್ನಾವರದಲ್ಲಿದ್ದು ಸಾಗರೋತ್ತರ ವ್ಯಾಪಾರವನ್ನು ಹಿಡಿತದಲ್ಲಿಟ್ಟುಕೊಂಡು ವಿದೇಶಿ ವರ್ತಕರೊಡನೆ ಹೊನ್ನಾವರ ಸಮೀಪದಲ್ಲಿ ನೌಕಾಯುದ್ಧಗಳನ್ನು ನಡೆಸುತ್ತಿದ್ದನೆಂದೂ ಪೋರ್ಚುಗೀಸರಿಗೆ ಗೋವೆ ಗೆಲ್ಲಲು ಈ ತಿಮ್ಮೋಜಿ ಸಹಾಯ ಮಾಡಿದ್ದನೆಂದೂ ಇವರ ದಾಖಲೆ ತಿಳಿಸುತ್ತದೆ. ಹೀಗಿದ್ದರೂ ಇವನ ನೌಕೆ ತ್ವರಿತವಾಗಿ ಚಲಾವಣೆ ಇಲ್ಲದಿದ್ದುದರಿಂ ದಲೂ ಮತ್ತು ಅಸ್ತ್ರಗಳು ಸುಸಜ್ಜಿತವಾಗಲು ಅಸಮರ್ಥವಾದುದರಿಂದಲೂ ಪೋರ್ಚುಗೀಸರು ಇವನ ನೌಕೆಯನ್ನು ಸುಲಭದಲ್ಲಿ ಸೋಲಿಸಿದರು.[34]

ವಿಜಯನಗರದ ಚಕ್ರವರ್ತಿ ಕೃಷ್ಣದೇವರಾಯನು ಕರಾವಳಿ ಕರ್ನಾಟಕದಲ್ಲಿ ನೌಕಾಬಲವನ್ನು ವರ್ಧಿಸುವ ಪ್ರಯತ್ನ ಮಾಡಿದ. 16ನೇ ಶತಮಾನದ ಆರಂಭದಿಂದ ಕನ್ನಡ ಕರಾವಳಿಯಲ್ಲಿ ವಿದೇಶೀಯ ವ್ಯಾಪಾರಸ್ಥರ ಚಟುವಟಿಕೆಗಳು ಆರಂಭವಾದವು. ಈ ಯುರೋಪಿನ ವಿದೇಶೀಯರಲ್ಲಿ ಪೋರ್ಚುಗೀಸರು ಮೊದಲಿಗರಾಗಿದ್ದಾರೆ. ಇಂಗ್ಲಿಷರು ಕೊನೆಯವರು. ಹೀಗೆ ಬಂದ ಈ ಯುರೋಪಿನ ವ್ಯಾಪಾರಸ್ಥರು ಅಸ್ತ್ರಧಾರಿಗಳು. ಇವರ ಉದ್ದೇಶ ಈ ಕರಾವಳಿಯ ವ್ಯಾಪಾರದ ಏಕಸ್ವಾಮ್ಯವನ್ನು ಪಡೆಯುವುದು. ಇದನ್ನು ಸಾಧಿಸಲು ಕೈಗೊಂಡ ಕ್ರಮ ಭಂಡಸಾಲೆ ಕೋಟೆ (ಫ್ಯಾಕ್ಟರಿ ಪೋರ್ಟ್‌ನೆಸ್). ಇದನ್ನು ಸಾಧಿಸಲು ಪೋರ್ಚುಗೀಸರು ಕರಾವಳಿ ಕರ್ನಾಟಕದಲ್ಲಿ ನೌಕಾಯುದ್ಧವನ್ನು ಮಾಡಿದ್ದರು. ಈ ಘಟನೆ ಕರಾವಳಿ ಕರ್ನಾಟಕದ ಇತಿಹಾಸದಲ್ಲಿ ಒಂದು ಗೊಂದಲವನ್ನು ತಂದಿತು. ಪೋರ್ಚುಗೀಸರು ಉತ್ತಮ ಮಟ್ಟದ ಯುದ್ಧನೌಕೆಗಳನ್ನು ಹೊಂದಿದ್ದುದರಿಂದ ಕರಾವಳಿ ಕರ್ನಾಟಕದ ಸಾರ್ವಭೌಮತೆಯನ್ನು ಹೊಂದಿದ್ದ ವಿಜಯನಗರ ಅರಸರಿಗೆ ಈ ಪ್ರದೇಶದಲ್ಲಿ ಪೋರ್ಚುಗೀಸರ ನೌಕಾಬಲವನ್ನು ಎದುರಿಸುವಲ್ಲಿ ಸಮರ್ಥ ಕ್ರಮ ಕೈಗೊಳ್ಳಲು ಆಗದೇ ಹೋಯಿತು. ಇದರಿಂದಾಗಿ ಸ್ಥಳೀಯ ಸಾಮಂತ ಅರಸು ಮನೆತನದವರು ಆಗಿಂದಾಗ್ಗೆ ದಕ್ಷಿಣಕ್ಕಿರುವ ಮಲೆಯಾಳಿ ನಾವಿಕರ ಸಂಪರ್ಕ ಪಡೆದರು. ಇದರಿಂದಾಗಿ ಕರಾವಳಿ ಕರ್ನಾಟಕದಲ್ಲಿ ಮಲೆಯಾಳಿ ನಾವಿಕರ ವರ್ಚಸ್ಸು ಬೆಳೆಯಿತು. ಕರಾವಳಿಯ ತುಳುವರು ಮತ್ತು ಮಲಬಾರಿನ ಮಲೆಯಾಳಿ ನಾವಿಕರು ಒಂದಾಗಿ ದುಂಡಾವರ್ತಿ ವ್ಯಾಪಾರ ನಡೆಸುತ್ತಿದ್ದ ಪೋರ್ಚುಗೀಸರೊಡನೆ ನೌಕಾಸಮರವನ್ನು ನಡೆಸಿದರು. ಈ ನೌಕಾಯುದ್ಧಗಳು

ಮಂಗಳೂರು, ಬಾರಕೂರು, ಬಸ್ರೂರು, ಭಟ್ಕಳ, ಹೊನ್ನಾವರಗಳಲ್ಲಿ ನಡೆದ ಬಗ್ಗೆ ಪೋರ್ಚುಗೀಸ್ ದಾಖಲೆಗಳು ಉಲ್ಲೇಖಿಸುತ್ತವೆ. ಇಂತಹ ಒಂದು ನೌಕಾಯುದ್ಧ ಕ್ರಿ.ಶ. 1525–26ರಲ್ಲಿ ಬಾರಕೂರಿನಲ್ಲಿ ನಡೆಯಿತು. ಕಲ್ಲಿಕೋಟೆ–ಝಾಮೋರಿನ ನೌಕಾದಳಪತಿ 'ಕುಟ್ಟಿ ಅಲಿ' ಬಾರಕೂರು ಕರಾವಳಿಗೆ ಬಂದು ಸ್ಥಳೀಯ ನಾವಿಕರ ಸಹಾಯ ಪಡೆದು ಪೋರ್ಚುಗೀಸರ ನೌಕೆಗಳನ್ನು ಚದುರಿಸಲು ಸಮರ್ಥನಾದುದಲ್ಲದೆ, ಕೊಚ್ಚಿಯಿಂದ ಗೋವಾದವರೆಗಿನ ಕರಾವಳಿ ಪ್ರದೇಶದಲ್ಲಿ ತನ್ನ ನೌಕಾಬಲದ ಸಾಮರ್ಥ್ಯವನ್ನು ಸ್ಥಾಪಿಸಿದನು. ಆದರೆ ಮರುವರ್ಷ ಪೋರ್ಚುಗೀಸರ ಶಸ್ತ್ರಸಜ್ಜಿತ ನಾವೆಗಳು ಬಾರಕೂರಿಗೆ ಬಂದು ನೌಕಾಯುದ್ಧ ಮಾಡಿ ಕುಟ್ಟಿ ಅಲಿಯ ನೌಕಾಬಲವನ್ನು ಮುರಿಯಿತು. ಇದೇ ರೀತಿ 1569–70ರಲ್ಲಿ ಬಸ್ರೂರಿನಲ್ಲಿ ನಡೆದ ನೌಕಾಯುದ್ಧವು ಪೋರ್ಚುಗೀಸರನ್ನು ದಿಗಿಲುಗೊಳಿಸಿತು. ಇಲ್ಲಿ ಆಳಿಕೊಂಡಿದ್ದ ಸುರಾಲಿನ ತೋಳಹರು, ಹೊನ್ನೆ ಕಂಬಳಿಯವರು ಪೋರ್ಚುಗೀಸರೊಡನೆ ನೌಕಾಸಮರ ನಡೆಸುವಲ್ಲಿ ಗೇರುಸೊಪ್ಪೆ ರಾಣಿಯ ನೌಕಾದಳವು ಇವರೊಂದಿಗೆ ಸೇರಿಕೊಂಡಿತು. ಇದರಿಂದಾಗಿ ಪೋರ್ಚುಗೀಸರಿಗೆ ಸಮುದ್ರದಲ್ಲಿ ಬಹಳ ಸಂಕಷ್ಟಸ್ಥಿತಿ ಬಂದಿತು. ಇದೇ ವರ್ಷ ಬಿಜಾಪುರ ಸುಲ್ತಾನ ಝಮೋರಿನ್ ಮತ್ತು ಗೇರುಸೊಪ್ಪೆ ರಾಣಿಯರು ಒಂದಾಗಿ ಪೋರ್ಚುಗೀಸ್ ನೌಕಾಬಲವನ್ನು ಪ್ರಶ್ನಿಸಿದರು. ಇದು ಪೋರ್ಚುಗೀಸರನ್ನು ಅಪಾಯಕರ ಸಂದಿಗ್ಧಸ್ಥಿತಿಗೆ ತಂದು ಒಡ್ಡಿತು. ಕೊನೆಗೆ ಪೋರ್ಚುಗೀಸರು ವಿಜಯಿಗಳಾದರೂ ಅವರಿಗೆ ಸ್ಥಳೀಯರ ನೌಕಾಬಲದ ಅರಿವು ಉಂಟಾಯಿತು. ತಮ್ಮ ಮನಬಂದಂತೆ ವ್ಯಾಪಾರ ನಡೆಸಲು ಪೋರ್ಚುಗೀಸರು ಹಿಂಜರಿಯುತ್ತಿದ್ದರೆಂದು ಇವರ 1575ರ ದಾಖಲೆಯು ತಿಳಿಸುತ್ತದೆ.[35]

ಕ್ರಿ.ಶ. 17ನೇ ಶತಮಾನದಿಂದ ಆರಂಭವಾಗಿ ಮುಂದಿನ ಶತಮಾನದ ಮಧ್ಯಾವಧಿಯ ವರೆಗೆ ನೌಕಾಸಮರ ನಡೆಯಿತು. ಪೋರ್ಚುಗೀಸರ ನೌಕಾಬಲವನ್ನು ಸ್ಥಳೀಯರು ತಮ್ಮ ನೌಕಾಬಲದಿಂದ ಸಮರ್ಥವಾಗಿ ಎದುರಿಸಿದ್ದಲ್ಲದೆ, ಪೋರ್ಚುಗೀಸರ ನೌಕಾಬಲವನ್ನು ನಿಷ್ಕ್ರಿಯಗೊಳಿಸಿದ್ದು ಗಮನಿಸಬೇಕಾದ ಸಂಗತಿ. ಈ ಕಾಲದಲ್ಲಿ ನಡೆದ ನೌಕಾಸಮರಗಳಲ್ಲಿ ಉಳ್ಳಾಲದ ರಾಣಿ ಎರಡನೆ ಅಬ್ಬಕ್ಕ, ಕೆಳದಿ ಮತ್ತು ಸ್ವಾದಿ ಇಮ್ಮಡಿ ಬಸವಲಿಂಗ ನಾಯಕರು ಪ್ರಮುಖ ಪಾತ್ರವನ್ನು ವಹಿಸಿದ್ದರು. ಕ್ರಿ. ಶ. 1612ರಲ್ಲಿ ನಡೆದ ನೌಕಾಸಮರದಲ್ಲಿ ಅಬ್ಬಕ್ಕ ರಾಣಿ ಝಮೋರಿನ್ ನೌಕಾಬಲವನ್ನು ತರಿಸಿ ಪೋರ್ಚುಗೀಸರನ್ನು ಸಮರ್ಥವಾಗಿ ಉಳ್ಳಾಲದಲ್ಲಿ ಎದುರಿಸಿದಳು. ಇಲ್ಲಿ ನಡೆದ ನೌಕಾಯುದ್ಧದಲ್ಲಿ ವೈರಿಯ ಬಲವನ್ನು ನಿಷ್ಪ್ರಯೋಜಕ

ಗೊಳಿಸಿದಳು. ಅನಂತರ ಕೆಳದಿ ವೆಂಕಟಪ್ಪನಾಯಕನು ಪೋರ್ಚುಗೀಸರನ್ನು ಮಂಗಳೂರಿನಲ್ಲಿ ಹೀನಾಯವಾಗಿ ಸೋಲಿಸಿದನು. ಈ ಕೆಲಸದಲ್ಲಿ ಸ್ಥಳೀಯರ ಮತ್ತು ಕೆಳದಿ ನಾಯಕರ ನೌಕೆಗಳು ಪ್ರಮುಖ ಪಾತ್ರವಹಿಸಿದ್ದವು. ಇಷ್ಟಲ್ಲದೆ ಪೋರ್ಚುಗೀಸರಿಗೆ ಇಲ್ಲಿಯ ನೌಕಾಬಲವೂ ತಿಳಿಯಿತು. ಕ್ರಿ.ಶ. 1612ರ ನವಂಬರ್ 24ರ ಪತ್ರದಂತೆ ಕೆಳದಿ ವೆಂಕಟಪ್ಪ ನಾಯಕನ ದಂಡನಾಯಕನು ನೆಲ ಮತ್ತು ಸಮುದ್ರದಿಂದ ಬರುವ ಆಹಾರ ಸಾಮಗ್ರಿಗಳ ಪೂರೈಕೆಯನ್ನು ತಡೆಹಿಡಿದಿದ್ದರಿಂದ ಸೈನಿಕರು ಆಹಾರವಿಲ್ಲದೆ ಸಾಯುವ ಸ್ಥಿತಿಯಲ್ಲಿದ್ದಾರೆ. ಇಷ್ಟಲ್ಲದೆ ನಮ್ಮ ನೌಕಾದಳವು ಹತಾಶವಾಗಿದೆ.[36]

ಕೆಳದಿ ವೆಂಕಟನಾಯಕ ನೌಕಾದಳಪತಿ ಮುಜಾದಿ ಇವನು ನೌಕಾಯುದ್ಧದಲ್ಲಿ ಅತ್ಯಂತ ಪಳಗಿದವನೆಂದು ಆ ಕಾಲದಲ್ಲಿ ಇಟಲಿಯಿಂದ ಬಂದ ಪ್ರವಾಸಿ ಡೆಲ್ಲಾವೆಲ್ಲಿ ತನ್ನ ವರದಿಯಲ್ಲಿ ತಿಳಿಸಿದ್ದಾನೆ.[37]

ಕೆಳದಿ ಶಿವಪ್ಪ ನಾಯಕನ ಕಾಲದಲ್ಲಿ ನೌಕಾಬಲವು ಎಷ್ಟು ಸಮರ್ಥವಾಗಿತ್ತೆಂದರೆ ಪೋರ್ಚುಗೀಸರ ನೌಕಾಬಲವನ್ನು ನಿರ್ಬಲಗೊಳಿಸಿ ಮಂಗಳೂರು, ಹೊನ್ನಾವರ ಮತ್ತು ಗಂಗೊಳ್ಳಿಯಿಂದ ಅವರನ್ನು ಓಡಿಸಿ ಮಲೆಯಾಳಿಗರ ಸಮುದ್ರ ಶಕ್ತಿಯನ್ನು ಕುಗ್ಗಿಸಿ ಸಮುದ್ರ ದಡದಲ್ಲಿರುವ ಅದರ ಕೋರಿಗಳನ್ನು ಗೆದ್ದುಕೊಂಡದ್ದು ಕೆಲವು ಸಮಕಾಲೀನ ದಾಖಲೆಗಳಲ್ಲಿವೆ. ಕ್ರಿ.ಶ. 1654ರ ಪೋರ್ಚುಗೀಸ್ ದಾಖಲೆಯಂತೆ ಪೋರ್ಚುಗೀಸರ ಸಮುದ್ರ ವ್ಯಾಪಾರವನ್ನು ಶಿವಪ್ಪ ನಾಯಕನು ತನ್ನ ಹತೋಟಿಯಲ್ಲಿ ತರುವಲ್ಲಿ ಯಶಸ್ವಿಯಾದನು. ಪೋರ್ಚುಗೀಸರು ಗೋವಾ ಕರಾವಳಿ ಬಿಟ್ಟು ಹೋಗುವಂತೆ ಕೆಳದಿ ನೌಕಾಬಲ ಯಶಸ್ವಿಯಾಯಿತು.[38]

ಕ್ರಿ. ಶ. 1664ರಲ್ಲಿ 'ಬಸ್ರೂರು' ಪೋರ್ಚುಗೀಸ್ ಮತ್ತು ಡಚ್ಚರ ನೌಕಾಸ್ಪರ್ಧೆಯನ್ನು ಕಂಡಿತು. ಅದರಲ್ಲಿ ಸ್ಥಳೀಯ ಅರಸುಮನೆತನದವರಾದ ಬಂಗರು, ಉಳ್ಳಾಲ ಚೌಟರು ಇದ್ದರು. ಇವರನ್ನು ಮಲಬಾರಿನ ನಾಯಕರು ಪ್ರೋತ್ಸಾಹಿಸಿದರು. ಇವರೆಲ್ಲಾ ಸೇರಿಕೊಂಡು ಪೋರ್ಚುಗೀಸ್ ನೌಕಾದಳವನ್ನು ಎದುರಿಸಿದರು. ಇದರಲ್ಲಿ ಈ ಕೂಟದವರು ಯಶಸ್ವಿಯಾದರು. ಪೋರ್ಚುಗೀಸರ ಬೆಂಬಲಿಗರಾಗಿದ್ದ ನಾರಾಯಣ ಮಲ್ಯನು ಡಚ್ಚರೊಡನೆ ಸೇರಿಕೊಂಡು ಪೋರ್ಚುಗೀಸರ ನೌಕಾಬಲವನ್ನು ಸಂದಿಗ್ಧ ಸ್ಥಿತಿಗೆ ತಂದನು.[39] ಒಟ್ಟಿನಲ್ಲಿ

ಸ್ಥಳೀಯ ರಾಜಕೀಯ ಶಕ್ತಿಗಳು ತಮ್ಮ ನೌಕಾಶಕ್ತಿಯನ್ನು ಸಮರ್ಥವಾಗಿ ಪ್ರದರ್ಶಿಸಿರುವುದು ತುಳುನಾಡಿನ ನೌಕಾ ಇತಿಹಾಸದಲ್ಲಿ ಗಮನಾರ್ಹ ಸಂಗತಿ.

1699ರಲ್ಲಿ ಹೊನ್ನಾವರ ಸಮೀಪದ ದ್ವೀಪ 'ನವಿಲಗಡ'ದಲ್ಲಿ ನಡೆದ ನೌಕಾಸಮರದಲ್ಲಿ ಕೆಳದಿ ನಾಯಕ ನೌಕಾಬಲದ ಸಮರ್ಥತೆ ಉನ್ನತ ಮಟ್ಟವನ್ನು ತೋರಿಸಿತು. ಈ ನೌಕಾಸಮರವು ಕೆಳದಿ ನಾಯಕರ ಮತ್ತು ಮರಾಠರೊಳಗೆ ನಡೆಯಿತು. ಈ ಮರಾಠರು ತಮ್ಮ ನೌಕಾಬಲದಿಂದ ಕೆಳದಿ ರಾಜ್ಯಕ್ಕೆ ಸೇರಿದ 'ನವಿಲಗಡ'ವನ್ನು ಮುತ್ತಿಗೆ ಹಾಕಿದರು. ಇದನ್ನು ಪುನಃ ವಶಪಡಿಸಿಕೊಳ್ಳಲು ಕೆಳದಿ ನಾಯಕರು ತಮ್ಮ ಸುಸಜ್ಜಿತ ನೌಕಾಕಾರ್ಯ ನಡೆಸಿದರು. ಅಪ್ರಕಟಿತ ಇಂಗ್ಲಿಷ್ ದಾಖಲೆಯಂತೆ ಐದು ಹದಿನೆಂಟು 'ಮಚುವಾ' ಮತ್ತು ಐದುಸಾವಿರ ನೌಕಾದಳದೊಂದಿಗೆ ಮರಾಠರ ಆಕ್ರಮಣವನ್ನು ವಿಮುಕ್ತಗೊಳಿಸಲು ಕಾರ್ಯ ನಡೆಯಿತು. ಕ್ರಮೇಣ ಐದು ಹೊಸ ಹಡಗು ಮತ್ತು ಹದಿನಾಲ್ಕು 'ಎತ್ತರ ಮಚುವಾ'ಗಳು ಸೇರಿಕೊಂಡು ಮರಾಠರ ವಿರುದ್ಧ ಸೈನಿಕ ಕಾರ್ಯಾಚರಣೆ ನಡೆಸಿತು. ಇದರ ತೀಕ್ಷ್ಣತೆ ಹೆಚ್ಚಾದಂತೆ ಮರಾಠರು ದ್ವೀಪವನ್ನು ತೆರವು ಮಾಡಬೇಕಾಯಿತು. ವೈರಿಗಳ ಹಲವಾರು ನಾವಿಕರು ಕೆಳದಿಯ ನೌಕಾದಾಳಿಯನ್ನು ಎದುರಿಸಿ ಅಸುನೀಗಿದ್ದರು. ಅನಂತರ ನವಿಲಗಡ ದ್ವೀಪವು ಕೆಳದಿ ನಾಯಕರ ವಶಕ್ಕೆ ಬಂದಿತು. ಈ ದ್ವೀಪಕ್ಕೆ ಕೆಳದಿ ನಾಯಕರು 'ಬಸವರಾಜುದುರ್ಗ' ಎಂದು ಕರೆದರು.[40] 1700ರ ನಂತರ ಕೆಳದಿ ನಾಯಕರಿಗೆ ನೌಕಾಬಲವನ್ನು ಹೊಂದುವ ಆಕಾಂಕ್ಷೆ ಇದ್ದರೂ ಇದನ್ನು ಕಾರ್ಯಗತಗೊಳಿಸುವಲ್ಲಿ ನಾಯಕರು ವಿಫಲರಾಗಿದ್ದಾರೆ ಎಂದು ಪೋರ್ಚುಗೀಸ್ ದಾಖಲೆಗಳಲ್ಲಿ ವ್ಯಕ್ತವಾಗಿದೆ.[41]

1720ರಲ್ಲಿ ಕಡವಾಡದಲ್ಲಿ ಕೋಟೆಕಟ್ಟಿ ವ್ಯಾಪಾರ ಮಾಡುತ್ತಿದ್ದ ಇಂಗ್ಲಿಷರು ಸ್ವಾದಿ ರಾಜ್ಯದ ನೌಕಾಶಕ್ತಿಯನ್ನು ಎದುರಿಸಬೇಕಾಗಿ ಬಂತು. ಸ್ವಾದಿ ಬಸವಲಿಂಗಪ್ಪ ನಾಯಕನು ಕಡವಾಡದಲ್ಲಿದ್ದ ಇಂಗ್ಲಿಷ್ ಭಂಡಸಾಲೆಯನ್ನು ಸಮರ್ಪಕವಾಗಿ ಮುತ್ತಿಗೆ ಹಾಕಿ, ಅಲ್ಲಿರುವ ಇಂಗ್ಲಿಷರ ನೌಕೆಗಳನ್ನು ನಿಷ್ಕ್ರಿಯಗೊಳಿಸಿದ್ದಲ್ಲದೆ, ಇವನ ವೈರಿಗಳು ಕಾರವಾರ ತೀರದಲ್ಲಿ ಸ್ವಾದಿಯ ಅರಸರ ಕೈಸೆರೆಯಾಳಾಗಿ ಮಾಡಿದ್ದು ಅತ್ಯಂತ ರೋಚಕ ಸಂಗತಿ. ಕೊನೆಗೆ ಇಂಗ್ಲಿಷರು ಕಾರವಾರ ಬಿಟ್ಟು ಹೋಗುವಂತಾಯಿತು.[42] 1720ರ ನಂತರ ತುಳುನಾಡಿನಲ್ಲಿ ಸ್ಥಳೀಯ ನೌಕಾಬಲವು ವಿದೇಶಿಯರನ್ನು ಅವಲಂಬಿಸುವ ಸ್ಥಿತಿ ಬಂದಿತು. ಇದರಿಂದಾಗಿ

ಇಲ್ಲಿನ ನೌಕಾ ಇತಿಹಾಸದ ಪ್ರಗತಿ ತಾತ್ಕಾಲಿಕವಾಗಿ ಕ್ಷೀಣಗತಿ ಕಂಡಿತು. ಇದರ ಅಭಿವೃದ್ಧಿಯನ್ನು ಹೈದರಾಲಿ ನಡೆಸಿದ.

ತುಳುನಾಡಿನಲ್ಲಿ ನೌಕಾಸಮರದಲ್ಲಿ ಹಾಯಿಹಡಗು, ಪತ್ತಮಾರ, ಕಲ್ಲಹಡಗು, ಮಚುವಾಗಳನ್ನು ಬಳಸುತ್ತಿದ್ದರು. ಕೇರಳದಿಂದ 'ಷೇರ'ನ್ನು ಪಡೆದು ಬಳಸಿದ್ದು ಐತಿಹಾಸಿಕ ದಾಖಲೆಗಳಿಂದ ತಿಳಿಯುತ್ತದೆ.[43] ಹಾಗೆಯೇ ನೌಕಾದಳಪತಿಗಳಾಗಿ ತಿಮ್ಮೋಜಿ, ಮುಚಾರಿ, ಬಸವಲಿಂಗ, ಪೂಕಟುಬ್ಯಾರಿ, ಚೆನ್ನಬಸಪ್ಪ ಮತ್ತು ಇಕ್ಕೇರಿ ಮರಿಯಪ್ಪ ಇವರು ಕಾರ್ಯ ನಿರ್ವಹಿಸುತ್ತಿದ್ದರು. ತುಳುನಾಡಿನಲ್ಲಿ ನೌಕಾಯುದ್ದದ ವಿವರ ಸಿಗುವುದು ಕ್ರಿ. ಶ. 4ನೇ ಶತಮಾನ ಹಾಗೂ 10–11ನೇ ಶತಮಾನದಲ್ಲಿ ತುಳುನಾಡಿನ ನೌಕಾಯುದ್ಧದ ಸ್ಪಷ್ಟಚಿತ್ರಗಳು ಆಗಿನ ಕಾಲದ ವೀರಗಲ್ಲುಗಳ ಚಿತ್ರದಿಂದ ವ್ಯಕ್ತವಾಗುತ್ತದೆ. ಇವುಗಳ ಸ್ವಲ್ಪ ವಿವರವನ್ನು ಶಾಸನಗಳಲ್ಲಿ ಕಾಣಬಹುದು.

14ನೇ ಶತಮಾನದ ಅವಧಿಯಲ್ಲಿ ವಿಜಯನಗರದವರು ನೌಕಾಯುದ್ಧಗಳನ್ನು ನಡೆಸಿ ಸಾಗರೋತ್ತರದಲ್ಲಿ ತಮ್ಮ ಪರಾಕ್ರಮ ತಿಳಿಯುವಂತೆ ಮಾಡಿದರು. ಇವರ ನೌಕೆಯು ಮುಖ್ಯವಾಗಿ ಪಾಶ್ಚಿಮಾತ್ಯ ನೌಕಾಬಲವನ್ನು ಎದುರಿಸಲು ಸಾಧ್ಯವಾಗಲಿಲ್ಲ. ಏಕೆಂದರೆ, ಇವರ ಯುದ್ಧನೌಕೆಗಳು ಶಸ್ತ್ರ ತುಂಬಿಕೊಂಡು ಆಳವಾದ ಸಮುದ್ರದಲ್ಲಿ ಯುದ್ಧ ಮಾಡುವುದರಲ್ಲಿ ತರಬೇತಿ ಹೊಂದಿರಲಿಲ್ಲ. ಆದರೆ ಪೋರ್ಚುಗೀಸರ ಆಗಮನದಿಂದಾಗಿ ಇಲ್ಲಿನ ನೌಕಾಯುದ್ಧದಲ್ಲಿ ಒಂದು ಹೊಸ ತಿರುವನ್ನು ತಂದಿತು. ಕನ್ನಡೇತರರು ತುಳುನಾಡಿನಲ್ಲಿ ತಮ್ಮ ಪ್ರಾಬಲ್ಯವನ್ನು ಸಾಧಿಸಿದರು. ಇದು ಸ್ಥಳೀಯರಿಗೆ ಪ್ರತಿಕ್ರಿಯೆ ನಡೆದು ಇದರ ಪರಿಣಾಮವಾಗಿ ಪೋರ್ಚುಗೀಸರ ನೌಕಾಬಲ ತಗ್ಗಿತು. ಆದರೆ ಕೆಳದಿ ನಾಯಕರಿಗೆ ತಮ್ಮ ನೌಕಾಬಲವನ್ನು ಹೆಚ್ಚಿಸಿಕೊಳ್ಳುವ ಕನಸು ಕನಸಾಗಿಯೇ ಉಳಿಯಿತು.

### 3.6. ತುಳುನಾಡಿನಲ್ಲಿ ತೂಕ ಮತ್ತು ಅಳತೆಗಳು:

ತುಳುನಾಡಿನಲ್ಲಿ ಏಕಪ್ರಕಾರವಾದ ತೂಕ ಮತ್ತು ಅಳತೆಗಳ ವ್ಯವಸ್ಥೆಯಿರಲಿಲ್ಲ. ಧಾನ್ಯಗಳ ಅಳತೆಯ ಮಾನಗಳು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವ್ಯತ್ಯಾಸವಾಗುತ್ತಿದ್ದವು. ಮೂಡೆ ಅಥವಾ ಮುಡಿ (ಮುರಾ) ಎಂದು ಕರೆಯುತ್ತಿದ್ದ ಅಳತೆಯು ಧಾನ್ಯದ 42 ಸೇರುಗಳನ್ನು ಒಳಗೊಳ್ಳುತ್ತಿತ್ತು.[44] ಆದರೆ ಇದು ಕೂಡ ಬೇರೆ ಬೇರೆ

ಪ್ರದೇಶಗಳಲ್ಲಿ ಬೇರೆ ಬೇರೆಯಾಗಿರುತ್ತಿತ್ತು. ಆದುದರಿಂದ ಮೂಡೆ ಅಥವಾ ಮುಡಿಯು ಯಾವಾಗಲೂ ಕಾರ್ಕಳ ಹೋಲಿಕೆ, ಮಂಜೇಶ್ವರ ಹೋಲಿಕೆ ಅಥವಾ ಮಂಗಳೂರು ಮೂಡೆ ಅಥವಾ ಮುಡಿ ಎಂದು ನಿರ್ದಿಷ್ಟವಾಗಿ ಗುರುತಿಸಲಾಗುತ್ತದೆ. ಜಿಲ್ಲೆಯ ಹೆಚ್ಚಿನ ಕಡೆಗಳಲ್ಲಿ ಸೇರು ಅಂದರೆ ಎಪ್ಪತ್ತಾರು ತೊಲೆಗಳು, ಆದರೆ ಕುಂದಾಪುರದಲ್ಲಿ ಅದು ಎಂಬತ್ತು ತೊಲೆಗಳು. 1886ರಲ್ಲಿ ಎಂಬತ್ತು ತೊಲೆಗಳಷ್ಟು ಅಕ್ಕಿಯ ಮಾಪನವನ್ನು ಜಿಲ್ಲೆಯ ಎಲ್ಲ ಕಡೆಯೂ ಅನುಸರಿಸುವಿಕೆ ಆರಂಭವಾಯಿತು.[45] 1957ರಲ್ಲಿ ದಶಮಾಂಶ ಪದ್ಧತಿಯು ಬರುವವರೆಗೆ ತುಳುನಾಡಿನಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿದ್ದ ತೂಕ ಮತ್ತು ಅಳತೆಯನ್ನು ಈ ರೀತಿ ಕೊಡಬಹುದು.

**ಧಾನ್ಯದ ಅಳತೆಗಳು**

| | |
|---|---|
| ಅ) ಪಾವು ಅಥವಾ ¼ ಸೇರು | = 20 ತೊಲೆಗಳು |
| ಆ) ಅರ್ಧ ಸೇರು | = 40 ತೊಲೆಗಳು |
| ಇ) ಒಂದು ಸೇರು | = 80 ತೊಲೆಗಳು |
| ಈ) ಹದಿನಾಲ್ಕು ಸೇರು | = ಒಂದು ಕಳಸಿ |
| ಉ) ಮೂರು ಕಳಸಿಗಳು | = 1 ಮೂಡೆ ಅಥವಾ ಮುಡಿ (ಮುರಾ) |

**ದ್ರವ ಮಾಪಕಗಳು**

| | |
|---|---|
| ಅ) ಭಟ್ಟ ಇಳಿಸಿದ ನೀರಿನ ಆರು ತೊಲೆಗಳು | = ½ ಕುಡ್ತಿ |
| ಆ) ಭಟ್ಟ ಇಳಿಸಿದ ನೀರಿನ ಹನ್ನೆರಡು ತೊಲೆಗಳು | = 1 ಕುಡ್ತಿ |
| ಇ) ಐದು ಕುಡ್ತಿಗಳು | = ½ ಮೌಂಡ್ |
| ಈ) ಹತ್ತು ಕುಡ್ತಿಗಳು | = 1 ಮೌಂಡ್ |

**ದ್ರವ ತೂಕಗಳು**

| | |
|---|---|
| ಅ) ಆರು ತೊಲೆಗಳು | = ಸೇರು |
| ಆ) ಹನ್ನೆರಡು ತೊಲೆಗಳು | = ಸೇರು |

ಒಟ್ಟಾರೆಯಾಗಿ ಪೋರ್ಚುಗೀಸರು ವ್ಯಾಪಾರ ವಾಣಿಜ್ಯದಲ್ಲಿ ತುಳುನಾಡನ್ನು ಸಂಪೂರ್ಣವಾಗಿ ತಮ್ಮ ನಿಯಂತ್ರಣದಲ್ಲಿಟ್ಟುಕೊಂಡಿದ್ದರು. ಸ್ಥಳೀಯ ಮನೆತನ ಇರಬಹುದು ಹಾಗೂ ಇಲ್ಲಿನ ವರ್ತಕರ ಸಮುದಾಯ ಇರಬಹುದು ಎಲ್ಲವನ್ನೂ ಕೂಡಾ ತಮ್ಮ ನಿಯಂತ್ರಣದಲ್ಲಿಟ್ಟುಕೊಂಡಿದ್ದರು. ಕೆಳದಿ ನಾಯಕರ ಕಾಲದಲ್ಲಿ ಸಂಪೂರ್ಣವಾಗಿ ವ್ಯಾಪಾರ ವಾಣಿಜ್ಯದ ಮೇಲೆ ನಿಧಾನಗತಿಯಲ್ಲಿ ಹತೋಟಿಯನ್ನು ಕಳೆದುಕೊಂಡರು. ಅವರ ಏಕಸ್ವಾಮ್ಯ ವ್ಯಾಪಾರವನ್ನು ಬೆಂಬಲಿಸಲಿಲ್ಲ. 1578ರಲ್ಲಿ ಪೋರ್ಚುಗೀಸರ ಪತನವಾಯಿತು. ಅನಂತರದಲ್ಲಿ ಯುರೋಪಿಯನ್ನರ ಆಗಮನವಾಯಿತು. ಸ್ಥಳೀಯ ವ್ಯಾಪಾರಸ್ಥರು ನಿಧಾನವಾಗಿ ಪ್ರಾಬಲ್ಯ ಹೊಂದಿದರು.

## ಅಡಿಟಿಪ್ಪಣಿಗಳು ಮತ್ತು ಪರಾಮರ್ಶನಗಳು

1. ಪೋರ್ಚುಗೀಸರಿಗೆ ಸಂಬಂಧಪಟ್ಟ ಅನೇಕ ದಾಖಲೆಗಳು ಇಂಡಿಯಾ ಆಫೀಸ್ ಲೈಬ್ರರಿಯಲ್ಲಿ ಇವೆ. ಹಾಗೆಯೇ, ಲಿಸ್ಬನ್ನಿನ ನ್ಯಾಶನಲ್ ಲೈಬ್ರರಿಯಲ್ಲಿಯೂ, ಬ್ರಿಟಿಷ್ ಮ್ಯೂಸಿಯಂನಲ್ಲಿಯೂ ಅನೇಕ ಅಮೂಲ್ಯ ಕಾಗದಪತ್ರಗಳಿವೆ. ಮಲಬಾರಿನಲ್ಲಿ 'ಗ್ರಂಥವರಿಸ್' ಎಂಬ ದಾಖಲೆಗಳನ್ನು ಬರೆದಿಡುವ ಪುರಾತನ ಪದ್ಧತಿ ಇದೆ. ಆದರೆ ಇವು ಇನ್ನೂ ಪ್ರಕಟವಾಗಿಲ್ಲ. ಒಂದು ವೇಳೆ ಪ್ರಕಟವಾದಲ್ಲಿ ನಮಗೆ ಇನ್ನೂ ಹೆಚ್ಚಿನ ಮಾಹಿತಿಗಳು ಸಿಗಬಹುದು. (ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸಕ್ಕೆ ಸಂಬಂಧಿಸಿದ ವಿದೇಶೀ ಪ್ರವಾಸಿಗರು ತಿಳಿಸಿದ ವಿಚಾರಗಳನ್ನು ಎಚ್. ಎಲ್. ನಾಗೇ ಗೌಡರು ತಿಳಿಸಿದ್ದುದರಿಂದ ಅವರು ಹೇಳಿದ ಮುಖ್ಯ ಅಂಶಗಳನ್ನು ಈ ಬರಹದಲ್ಲಿ ತಿಳಿಸುವ ಪ್ರಯತ್ನ ಮಾಡಲಾಗಿದೆ. "ಪ್ರವಾಸಿ ಕಂಡ ದಕ್ಷಿಣ ಕನ್ನಡ", 'ಸುದರ್ಶನ', ಮುಲ್ಕಿ, 1977. ಇದೇ ಲೇಖಕರು "ಪ್ರವಾಸಿ ಕಂಡ ಇಂಡಿಯಾ –ಸಂ. 2", 1966, ಬೆಂಗಳೂರು, ಪುಟ 177.
2. ಪೋರ್ಚುಗೀಸ್ ಭಾಷೆಯಲ್ಲಿ 'ಮೂರರು' ಎಂದರೆ ಅರಬೀ ಮುಸ್ಲಿಮರು. Sanjay Subrahmanyam, ``*The Political Economy of commerce Southern India 1500-1600*``, 2004, New Delhi. Page Nos. 144. G.M. Moraes, ``Mangalore –A Historical Sketch`` (AES. 1991) p.5.
3. K.N. Chitnis, *Keladi Polity*, Dharwad, 1974 pp 24-36
4. ಎಂ. ಗಣಪತಿ ರಾವ್ ಐಗಳ್, ದಕ್ಷಿಣ *ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, 1923,* ಉಡುಪಿ. ಪುಟ. 119.
5. ಕೆ.ಜಿ. ವಸಂತಮಾಧವ, *ಕರಾವಳಿ ಕರ್ನಾಟಕದ ರಾಜಕೀಯ ಇತಿಹಾಸ ಅಧ್ಯಯನ ಸಂಶೋಧನೆ,* ನಮ್ಮಿ–ಅನಂತ ಪ್ರಕಾಶನ ಪಾವಂಜೆ, 1999, ಪು. 48
6. ಅದೇ
7. ಪೋರ್ಚುಗೀಸ್ ಭಾಷೆಯಲ್ಲಿರುವ ದಾಖಲೆಪತ್ರಗಳ ಮಹತ್ವವನ್ನು ದಿ। ಬಿ. ಎಸ್. ಶಾಸ್ತ್ರಿಯವರು ಅಧ್ಯಯನ ಮಾಡಿದ್ದಾರೆ. *"ಕೆಳದಿ ಅರಸರು ಮತ್ತು ಪೋರ್ಚುಗೀಸರು"* (ಧಾರವಾಡ, 1970), ಪು. 5–6; ಇದೇ ಲೇಖಕರು *Studies in Indo-Portugues History*, Bangalore, 1981. Sanjay Subrahmanyam, *The Political Economy of commerce Southern India 1500-1600*, Cambridge

university press2004, Pp. 121-123., ಎಚ್. ಎಲ್. ನಾಗೇಗೌಡ, ಪ್ರವಾಸಿ ಕಂಡ ಇಂಡಿಯಾ –ಸಂ. 2, 1966, ಪುಟ 329.

8. ಅದೇ, Sanjay Subrahmanyam; 2004, Pp. 121-123.

9. ಅದೇ

10. *ಬಸ್ರೂರು ಒಂದು ಅಧ್ಯಯನ*, ಶ್ರೀ ಶಾರದಾ ಕಾಲೇಜು ಟ್ರಸ್ಟ್, ಬಸ್ರೂರು, ದ.ಕ. 1997, ಪು.21–36

11. ಅದೇ

12. B.S.Shastry, *Studies in Indo-Portuguese History,* IBH, Bangalore, 1981 Pp.203-210., Sanjay Subrahmanyam, The Portuguese Port of Basrur and Rice Trade 1600-50. Pp. 30-31., *"ಹೆಸರಾದ ಪಟ್ಟಣ ಬಸ್ರೂರು ಒಂದು ಅಧ್ಯಯನ"*, 1997, ಪು. 42–43.

13. ಎಂ. ಗಣಪತಿ ರಾವ ಐಗಳ್, *ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ*, ಶಾರದಾ ಪ್ರೆಸ್ ಮಂಗಳೂರು, 1923 ಪು. 119., ಕೆ. ಜಿ. ವಸಂತಮಾಧವ, *ಜಿಲ್ಲೆಯ ಇತಿಹಾಸಕ್ಕೆ ವಿದೇಶೀ ಆಕರಗಳು –1800ರ ವರೆಗೆ*, 'ಪೊಲಿ', ಮಂಗಳೂರು, 2000, ಪು. 50.

14. ಬಿ.ಎಸ್.ಶಾಸ್ತ್ರಿ:1981,ಪುಟ. 221,226;, Sanjay Subrahmanyam:2004, Pp.26–27

15. ಅದೇ, ಪುಟ.30., ಗಣಪತಿ ರಾವ್ ಐಗಳ್ ಎಂ: 1923, ಪುಟ. 120–122. Sanjay Subrahmanyam:2004, Pp. 120–121., ಬಿ. ಸಚ್ಚಿದಾನಂದ ಹೆಗ್ಡೆ, *ತುಳುಭಾಷೆ-ತುಳುನಾಡು*, 2010, ಪುಟ, 196,198.,G.M. Moraes, Mangalore *–A Historical Sketches,* Mangalore 1927, Page Nos. 7-8; 19-21.

16. G.M. Moraes:1927, Page Nos. 39; 55-56., ಹೆಚ್.ಎಲ್‌ನಾಗೇಗೌಡ, *ಪ್ರವಾಸಿ ಕಂಡ ಇಂಡಿಯಾ*, ಸಂ. 2, 1966, ಪುಟ 77.,J. Sturrock, ``*Madras District Manuals- South Canara"* Vol., 1894, Pp. 180-181. Sanjay Subrahmanyam: 2004 Pp. Nos. 117, 120-123.

17. Sanjay Subrahmanyam:2004, p.120-123., J. Sturrock:1894, Pp. 180-181. G.M. Moraes:1927, p 19-21

18. Portuguese an Africa, Asia, America, E-occeania: obra classica. Monteiro, Jose Maria desousa, 1810-1881, chagas, Manuel Pinteiro, 1842-1849 p. 179).

19. K.M.Panikkar, Asia and western Dominance, p.29

20. ಅದೇ

21. B.S.Shastry, *Goa-Kanara Portuguese relations 1498-1763*, New Delhi,2000 P.21

22. K.N. Chitnis, *Keladi Polity,* Dharwad, 1974 pp 24-36

23. ಅದೇ

24. ಅದೇ

25. ಅದೇ

26. ಸಿ. ಹಯವದನ ರಾವ್, ಹಿಸ್ಟರಿ ಆಫ್ ಮೈಸೂರ್, ಸಂ–2, ಪುಟ 42

27. ಗೋವಾ ಪತ್ರಾಗಾರದಲ್ಲಿರುವ ದಾಖಲೆಗಳು ಕಡತಸಂಖ್ಯೆ 18, ಸಂ–5, ಲಿಸ್ಬನ್ 1884

28. ಗೋವಾ ಪತ್ರಾಗಾರದಲ್ಲಿರುವ ದಾಖಲೆಗಳು ಕಡತಸಂಖ್ಯೆ 18, ಸಂ–5, ಲಿಸ್ಬನ್ 1884

29. ಗೋವಾ ಪತ್ರಾಗಾರದಲ್ಲಿರುವ ದಾಖಲೆಗಳು ಕಡತಸಂಖ್ಯೆ 18, ಸಂ–5, ಲಿಸ್ಬನ್ 1884

30. ಗೋವಾ ಪತ್ರಾಗಾರದಲ್ಲಿರುವ ದಾಖಲೆಗಳು ಕಡತಸಂಖ್ಯೆ 18, ಸಂ–5, ಲಿಸ್ಬನ್ 1884

31. ಗೋವಾ ಪತ್ರಾಗಾರದಲ್ಲಿರುವ ದಾಖಲೆಗಳು ಕಡತಸಂಖ್ಯೆ 18, ಸಂ–5, ಲಿಸ್ಬನ್ 1652

32. ಗೋವಾ ಪತ್ರಾಗಾರದಲ್ಲಿರುವ ದಾಖಲೆಗಳು ಕಡತಸಂಖ್ಯೆ 18, ಸಂ–5, ಲಿಸ್ಬನ್ 1653

33. ಕೆ. ಜಿ. ವಸಂತಮಾಧವ, ಕರಾವಳಿ ಕರ್ನಾಟಕದ ನೌಕಾಯುದ್ಧಗಳ ಸಮೀಕ್ಷೆ, 1720,ಪು. 219.

34. ಬಿ. ಎಸ್ ಶಾಸ್ತ್ರಿ: 1981, ಪುಟ 92-130

35. M.N. Pearson, *Coastal Western India Studies from the Portuguese records concept*, New Delhi 1981, Pp. 32

36. ಬಿ. ಎಸ್. ಶಾಸ್ತ್ರಿ, ಕೆಳದಿಯ ಅರಸರು ಹಾಗೂ ಪೋರ್ಚುಗೀಸರು, 1972, ಧಾರವಾಡ ಪು. 31–32.

37. Pietro Della Valle, The Travels in India Vol. II AES, 1991, P. 225.

38. ಬಿ. ಎಸ್. ಶಾಸ್ತ್ರಿ:1972, ಪು. 93, 95, 99, 101, 108, 109, 110.

39. ಅದೇ. ಪುಟ 120–121.

40. Bombay factory Records 29, P. 18, 19.,Unpublished

41. ಬಿ. ಎಸ್. ಶಾಸ್ತ್ರಿ: 1972, ಧಾರವಾಡ, ಪುಟ 160, 165, 168

42. Alexander Hamilton, *New account of the East India*, Vol-2, London, 1930, P. 150, 151.

43. L.N.Swamy., *Maritime Contacts of Ancient India*, New Delhi. 2000, pp. 147-149

44. ಮಾಲತಿ ಕೆ. ಮೂರ್ತಿ, *ಟ್ರೇಡ್ ಅಂಡ್ ಕಾಮರ್ಸ್ ಇನ್ ಕೊಲೊನಿಯಲ್ ಸೌತ್ ಕೆನರಾ (1799–1862),* ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಪ್ರೌಢಪ್ರಬಂಧ, 1991 (ಅಪ್ರಕಟಿತ), ಪು.371–373

45. J. Sturrock., *South Canara*, Madras. 2003(Reprint), pp. 214-215

## ಅಧ್ಯಾಯ –ನಾಲ್ಕು

# ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ

### 4.1. ಪೀಠಿಕೆ:

ತುಳುನಾಡು ಬಹಳ ಹಿಂದಿನಿಂದಲೂ ಆಂತರಿಕ ಮತ್ತು ಬಾಹ್ಯ ವ್ಯಾಪಾರ ಕ್ಷೇತ್ರಗಳೆರಡರಲ್ಲೂ ಹೆಸರು ಮಾಡಿದೆ. ಪ್ರಾದೇಶಿಕವಾಗಿ ತುಳುನಾಡು ಸಮುದ್ರ ಕರಾವಳಿಯಲ್ಲಿ ಹರಡಿರುವ ಕಾರಣದಿಂದಲೇ ಇಲ್ಲಿನ ವ್ಯವಸಾಯ ಉತ್ಪನ್ನಗಳಿಗೆ ವಿದೇಶಿ ಬೇಡಿಕೆ ಗಳಿಸಲು ಮತ್ತು ಪೂರೈಸಲು ಸಾಧ್ಯವಾಯಿತು. ಘಟ್ಟದ ಮೇಲಿನ ಊರುಗಳಿಂದ ಆವಶ್ಯಕ ಸಾಮಗ್ರಿಗಳನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಕೃಷಿ ಉತ್ಪನ್ನಗಳಿಗೆ ಕರ್ನಾಟಕದ ಇತರೆಡೆಗಳಿಂದ ಮತ್ತು ವಿದೇಶಗಳಿಂದ ಬೇಡಿಕೆ ಹೆಚ್ಚಾದುದರ ಪರಿಣಾಮ ಅವುಗಳ ಉತ್ಪಾದನೆಯತ್ತ ಹೆಚ್ಚು ಗಮನ ಹರಿಸಲು ಕಾರಣವಾಯಿತು. ಹೀಗೆ ಕೃಷಿ ಮತ್ತು ವಾಣಿಜ್ಯ ಇವೆರಡೂ ಪರಸ್ಪರ ಆಂತರಿಕ ಸಂಬಂಧವನ್ನು ಉಳಿಸಿಕೊಂಡು ಬಂದವು. ಮಂಗಳೂರು, ಮೂಡಬಿದಿರೆ, ಕಾರ್ಕಳ, ಬಾರಕೂರು ಮತ್ತು ಬಸರೂರುಗಳು ಈ ಪ್ರದೇಶದ ಪ್ರಮುಖ ವ್ಯಾಪಾರಿ ಕೇಂದ್ರಗಳಾಗಿದ್ದವು. ಇಲ್ಲಿಂದ ಅಕ್ಕಿ, ಕಾಳು ಮೆಣಸುಗಳಂಥ ಕೃಷಿ ಉತ್ಪನ್ನಗಳು ರಫ್ತಾಗುತ್ತಿದ್ದವು. ಸಾಗಾಣಿಕೆಗೆ ಭೂಮಾರ್ಗವು ಹೆಚ್ಚು ಬಳಕೆಯಾಗುತ್ತಿತ್ತು. ಶಾಸನಗಳಲ್ಲಿ ಉಲ್ಲೇಖಗೊಂಡಿರುವಂತೆ ಹೆದ್ದಾರಿಗಳು ಪೂರಕವಾಗಿವೆ.[1] ಅಕ್ಕಿ, ಗೋಧಿ, ಕಡಲೆ, ಉದ್ದು, ಹೆಸರು, ಎಳ್ಳು, ಕಬ್ಬು, ಶುಂಠಿ, ತುಪ್ಪ, ಬೆಲ್ಲ, ಸಾಂಬಾರ ಪದಾರ್ಥಗಳನ್ನು ಘಟ್ಟದ ಮೇಲಿಂದ ತಲೆಹೊರೆಯಿಂದ ಮತ್ತು ಎತ್ತಿನ ಗಾಡಿಯಲ್ಲಿ ಹೇರಿ ತಂದು ವ್ಯಾಪಾರ ಮಾಡುತ್ತಿದ್ದುದು ಬಾರಕೂರಿನ ದಾಖಲೆಯಲ್ಲಿ ವ್ಯಕ್ತವಾಗುತ್ತದೆ.[2] ಆಗ ವ್ಯಾಪಾರದಲ್ಲಿ ಸುವ್ಯವಸ್ಥಿತ ಕ್ರಮವನ್ನು ಜಾರಿಗೆ ತಂದುದನ್ನು ತಿಳಿಸುವುದಲ್ಲದೆ ಭತ್ತವನ್ನು ಸಂಗ್ರಹಿಸಿಡಲು 'ಭಂಡಸಾಲೆ'ಗಳೆಂದು ಕರೆಯಲಾಗುವ ಗೋದಾಮುಗಳನ್ನು ಕಟ್ಟಿಸುತ್ತಿದ್ದುದು ಕ್ರಿ.ಶ. 1377ರ ಕೋಟೇಶ್ವರದ ಶಾಸನದಿಂದ ತಿಳಿದುಬರುತ್ತದೆ. ಬಾರಕೂರಿನ ಚೌಳಿಯಕೇರಿ ಮತ್ತು ಮೂರುಕೇರಿಯ ವ್ಯಾಪಾರಿ ವರ್ಗದವರ ನಡುವೆ ಉಂಟಾದ ವ್ಯಾಪಾರ ಸಂಬಂಧದ ವಿವಾದವನ್ನು ಕಾಣಬಹುದು. ಶಾಸನದಲ್ಲಿ ವಿವಿಧ ಸಾಮಗ್ರಿಗಳನ್ನು (ಧಾನ್ಯಗಳು) ಸಮಾನವಾಗಿ ಹಂಚಿಕೊಂಡು ಮಾರುವ ನಿಬಂಧನೆಯೊಂದಿಗೆ, ಸಕ್ಕರೆಯನ್ನು ಸಂಗ್ರಹಿಸಿಡಲು ಎರಡೂ ಕೇರಿಯವರು ಸೇರಿ ಮಳಿಗೆ (ಗೋದಾಮು)ಯನ್ನು ಕಟ್ಟಿಸಿ, ಒಳ್ಳೆಯ ಧಾರಣೆ ಬರುವ ತನಕ

ಕಾಯಲಾಗುತ್ತಿತ್ತು. ಆ ಬಳಿಕ ಎರಡೂ ಕಡೆಯವರು ಸೇರಿ ಮಾರಾಟ ಮಾಡಬೇಕು ಮತ್ತು ಉಳಿದ ಸಕ್ಕರೆ ಸ್ವಂತಕ್ಕೆ ಬಳಸದೆ ಮಳಿಗೆಯಲ್ಲಿಯೇ ಇರಿಸಬೇಕಿತ್ತು. ನೂಲು ಸೀರೆಯ ಮಾರಾಟದ ಸಂಪೂರ್ಣ ಹಕ್ಕು ಮೂರು ಕೇರಿಯವರಾಗಿದ್ದು ಉಳಿದೆಲ್ಲಾ ವಸ್ತುಗಳ ಮಾರಾಟದ ಹಕ್ಕು ಎರಡೂ ಕಡೆಯವರಿಗೆ ಸಮಾನವಾಗಿತ್ತು.[3]

ಕೃಷಿ ಕೆಲಸಗಳಿಗೆ ಉಪಯೋಗಿಸುವ ಜಾನುವಾರುಗಳನ್ನು ಕರ್ನಾಟಕದ ಇತರೆಡೆಗಳಿಂದ ತರಿಸಲಾಗುತ್ತಿತ್ತು. ಇದಕ್ಕೆ ದಾಖಲೆಯನ್ನು ಶಾಸನಗಳಲ್ಲಿ ಏಳು ಘಟ್ಟದಲ್ಲಿ ಇಳಿಯುವ ಗೋವುಗಳು[4] ಮತ್ತು 'ಎಂಟು ಘಟ್ಟದಲ್ಲಿ ಇಳಿಯುವ ಎತ್ತುಗಳ' ಉಲ್ಲೇಖ ಕಂಡುಬರುತ್ತದೆ.[5] ಶಾಸನವೊಂದರಲ್ಲಿ ಉಲ್ಲೇಖಗೊಂಡ 'ಬಸರೂರ ಅಳುವೆಯ ಒಳಗಿಂದ ಹೂವಂಥ ಸರಕು' ಎಂಬ[6] ಮಾತು ಅಲ್ಲಿನ ಬಂದರಿನ ಮೂಲಕ ವಸ್ತುಗಳ ಸಾಗಣೆ ನಡೆಯುತ್ತಿತ್ತೆನ್ನಲು ಆಧಾರವಾಗಿದೆ. ತುಳುನಾಡಿನ ವರ್ತಕ ಸಂಘಗಳಲ್ಲಿ ನಖರ[7], ಹಂಜಮಾನ,[8] ಸೆಟ್ಟಿಕಾರ, ಹಲರು ಮತ್ತು ಎಳಮೆಗೊಳಗಾದವರು ಪ್ರಸಿದ್ಧವಾಗಿದ್ದವು. ದಾನಗಳ ರಕ್ಷಣೆ ಮತ್ತು ದಾನದ ಪೋಷಣೆ, ಸಮರ್ಥವಾಗಿ ಮುಂದುವರಿಸಿಕೊಂಡು ಹೋಗುವ ಜವಾಬ್ದಾರಿ ಸೆಟ್ಟಿಕಾರರು ಮತ್ತು ಹಲರೆಂಬ ವ್ಯಾಪಾರಿ ಸಮುದಾಯದವರಾಗಿತ್ತೆಂದು ಬಸರೂರಿನ ದಾಖಲೆಯಿಂದ ತಿಳಿಯುತ್ತದೆ.[9] ಈ ಸಂಘಗಳು ಕೃಷಿ ಮತ್ತು ಕೃಷಿಯೇತರ ಭೂಮಿಗಳನ್ನು ಹೊಂದಿದ್ದವು. ಅಲ್ಲದೆ ಇತರರಿಂದ ಭೂಮಿಯನ್ನು ಖರೀದಿಸುತ್ತಿದ್ದುದೂ ಇತ್ತು.[10] ಸಂಘಗಳು ಸ್ವಂತವಾದ ಭೂಮಿಯಲ್ಲಿ ಕೃಷಿಯನ್ನೂ ಮಾಡುತ್ತಿದ್ದವು. ಸಂಘಗಳ ಸದಸ್ಯರು ವೈಯಕ್ತಿಕ ಭೂಮಿಯನ್ನು ಹೊಂದಿರುತ್ತಿದ್ದರು.[11] ಸಂಘಗಳು ಭೂಮಿ ಖರೀದಿಸುತ್ತಿದ್ದುದರೊಂದಿಗೆ ಮಾರುತ್ತಿದ್ದ ಉದಾಹರಣೆಗಳೂ ಇವೆ.[12] ಹೀಗೆ ಸಮಾಜದಲ್ಲಿ ಆರ್ಥಿಕವಾಗಿ ಉತ್ತಮ ಮಟ್ಟವನ್ನು ಹೊಂದಿದ್ದ ವರ್ತಕ ಸಂಘಗಳು ಅರಸ ಮತ್ತು ಇತರ ಉನ್ನತಾಧಿಕಾರಿಗಳಿಂದ ಭೂದತ್ತಿಯನ್ನು ಪಡೆಯುತ್ತಿದ್ದವು.

ವ್ಯಾಪಾರದ ವಿಚಾರದಲ್ಲಿ ಅವರು ಮಾಡಿಕೊಂಡಿದ್ದ ಕಟ್ಟುನಿಟ್ಟಿನ ನಿಯತಗಳು ಕೃಷಿ ವಸ್ತುಗಳ ಮಾರುಕಟ್ಟೆ ಅವುಗಳ ಬೆಲೆಯನ್ನು ಸಮರ್ಥವಾಗಿ ನಿಯಂತ್ರಿಸುತ್ತಿದ್ದವು. ಕರ್ನಾಟಕದ ಹೊರಗಿನಿಂದಲೂ ಜನರು ವ್ಯಾಪಾರ ನಿಮಿತ್ತ ಇಲ್ಲಿಗೆ ಬಂದು ನೆಲೆಸಿದ್ದರೆಂಬುದು 'ಪರದೇಶಿಗಳು' ಪರದೇಶದ ಬೆವಹಾರಿಗಳು, ಎಂಬ ಶಾಸನದ ಉಲ್ಲೇಖದಿಂದ ಸ್ಪಷ್ಟವಾಗಿದೆ.[13] ಇದಲ್ಲದೆ 'ನಾಗಮಂಗಲದ ಅರಿಕನಘಟ್ಟದ ಜೊಗಿಸೆಟ್ಟಿಯ ಕುಟುಂಬದವರು'[14] ಸಾಹು ಮತ್ತು

ಠಕುರ'[15] ಉಪನಾಮದ ಉತ್ತರ ಭಾರತದ ವ್ಯಾಪಾರಿ ಮನೆತನದ ವ್ಯಕ್ತಿಗಳು, ಜಂಬಖಂಡಿಯ ಸಿದ್ದಪ್ಪಗಳ ಮಕ್ಕಳು ಮಠಗಳನ್ನು ಕಟ್ಟಿಸಿ ದಾನದತ್ತಿಗಳನ್ನು ನೀಡಿದ್ದುದು ತಿಳಿದುಬರುತ್ತದೆ.[16] ಕಾಂತಾವರದ ದಾಖಲೆಯೊಂದರಲ್ಲಿ 'ಧಾರುವಡ (ಧಾರವಾಡ) ಹರಿಯ ಮಗ'ನ ಉಲ್ಲೇಖವಿದೆ.[17] ಇವು ಪರಸ್ಥಳದ ವ್ಯಕ್ತಿಗಳು ಇಲ್ಲಿಗೆ ವ್ಯಾಪಾರಕ್ಕಾಗಿ ಬಂದುದಲ್ಲದೆ, ಇಲ್ಲಿಯೇ ನೆಲೆಸಿ ಜನಜೀವನದಲ್ಲಿ ಸೇರಿಹೋದುದನ್ನು ದೃಢಪಡಿಸುತ್ತವೆ. ಚೀನಾದೇಶದಿಂದ ಬಟ್ಟೆಗಳನ್ನು ತರಿಸಿ ಇಲ್ಲಿ ಮಾರಲಾಗುತ್ತಿತ್ತೆಂಬುದು ಬಹಳ ಹಿಂದಿನ ವಿಚಾರ ಮೂಡುಬಿದಿರೆಯ ಶಾಸನವೊಂದರ 'ಚೀನಾಂಬರ' ವಿಕ್ರಯ ಕ್ರಯಿಕರಿಂ' ಎಂಬ ಉಲ್ಲೇಖದಿಂದ ಸ್ಪಷ್ಟವಾಗುತ್ತದೆ.[18] ರತ್ನ, ಕಾಂಚನಗಳ ವ್ಯಾಪಾರವಿತ್ತು. ಅವನ್ನು ವಿಕ್ರಯಿಸುವ ವ್ಯಾಪಾರಿಗಳಲ್ಲಿ ಕೆಲವರನ್ನು ಅದೇ ಹೆಸರಿನಿಂದ ಕರೆಯುತ್ತಿದ್ದಿರಬೇಕು. ಹಾಗಾಗಿ ಶಾಸನಗಳಲ್ಲಿ ರತುನಸೆಟ್ಟಿ, ಸೀರೆಸೆಟ್ಟಿ, ಕುದುರೆಯ ನೇಮಣ್ಣಸೆಟ್ಟಿ ಎಂಬ ಹೆಸರಿನ ಉಲ್ಲೇಖಗಳು ಸಿಗುತ್ತವೆ.[19] ವಿದೇಶಗಳಿಂದ ಕುದುರೆಗಳನ್ನು ತರಿಸಿ ಮಾರುತ್ತಿದ್ದರೆಂದು ಮೇಲೆ ಹೇಳಿದ ಕುದುರೆಯ ನೇಮಣ್ಣಸೆಟ್ಟಿ ಎಂಬ ಹೆಸರಿನಿಂದ ತಿಳಿಯಬಹುದಾಗಿದೆ.

### 4.2. ತುಳುನಾಡಿನ ವ್ಯಾಪಾರ ಸಂಘಟನೆಗಳು

ಪ್ರಾಚೀನ ಕಾಲದಿಂದಲೂ ವರ್ತಕ ಶ್ರೇಣಿಯನ್ನು ಕಾಣುತ್ತೇವೆ. ಈ ಸಂಘದ ಹೆಸರು ಕಂಡುಬರುವ ಅತ್ಯಂತ ಪ್ರಾಚೀನ ಶಾಸನವೆಂದರೆ ಫ್ಲೀಟ್‌ರವರದು, ಇವರ ಪ್ರಕಾರ ಸುಮಾರು 800ರ ಐಹೊಳೆಯ ಶಾಸನ[20] ಇದಕ್ಕಿಂತಲೂ ಹಿಂದೆಯೂ ವರ್ತಕ ಶ್ರೇಣಿಗಳಿದ್ದುವು ಎಂಬುದಕ್ಕೆ ಶಾಸನಾಧಾರಗಳಿವೆ.[21] ಈ ಸಂಘಗಳನ್ನೇ ಪಾರಿಭಾಷಿಕವಾಗಿ 'ಶ್ರೇಣಿ'ಗಳೆಂದು ನೀತಿಗ್ರಂಥಗಳು ಕರೆಯುತ್ತವೆ. ಈ ರೀತಿಯ ವೃತ್ತಿಯನ್ನು ಅವಲಂಬಿಸುವವರು ಒಂದು ಶ್ರೇಣಿಗೆ ಸೇರಿದವರೆಂದು ಮಿತಾಕ್ಷರವು ಹೇಳುತ್ತದೆ ಪ್ರಾಚೀನ ಕರ್ನಾಟಕದಲ್ಲಿ ವರ್ತಕರು ಮಾತ್ರವಲ್ಲದೆ ಉಳಿದ ಬೇರೆಬೇರೆ ವೃತ್ತಿಗಳನ್ನು ಒಟ್ಟಾಗಿ ವ್ಯವಹರಿಸುತ್ತಿದ್ದಂತೆ ತಿಳಿದುಬರುತ್ತದೆ. ಇಂತಹ ಕಡೆಗಳಲ್ಲಿ ಜಾತಿಯು ಅವರನ್ನು ಒಟ್ಟಿಗೆ ಸೇರಿಸುತ್ತಿದ್ದ ಅಂಶವಾಗಿದ್ದಿತು. ಯಾವುದಾದರೂ ಕ್ರಮವನ್ನು ಕೈಗೊಳ್ಳಬೇಕಾದರೆ ಒಂದು ಜಾತಿಯವರು ಒಟ್ಟಿಗೆ ಸೇರಿ ಒಂದು ನಿರ್ಧಾರಕ್ಕೆ ಬರುತ್ತಿದ್ದರು. ಈ ಶ್ರೇಣಿ ಅಥವಾ ಸಂಘಗಳಲ್ಲಿ ಮೂರು ರೀತಿಗಳನ್ನು ಗುರುತಿಸಬಹುದು: 1) ಕೇವಲ ಜಾತಿಯ ಆಧಾರದ ಮೇಲೆ ಮಾಡಿಕೊಂಡಿದ್ದ ಅಥವಾ ತಮ್ಮಷ್ಟಕ್ಕೆ ತಾವೇ ರೂಪಿತವಾಗಿದ್ದ ಗುಂಪುಗಳು ಉದಾ. ಮೇದರು, ತೆಲ್ಲಿಗರು 2) ಜಾತಿಯ

ಆಧಾರದ ಮೇಲೆ ಒಂದು ಗುಂಪಾಗಿದ್ದರೂ ತಮ್ಮ ಗುಂಪು ಯಾವುದೋ ಒಂದು ಸಂಖ್ಯೆಯ ಮೂಲಪುರುಷರಿಂದ ಆರಂಭವಾಯಿತೆಂದು ಹೇಳಿಕೊಳ್ಳತಕ್ಕವರು ಉದಾ: ಉಗುರ ಮೂನೊರ್ವರು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ರಚಿತವಾದ ಶಾಸನಗಳಲ್ಲಿ 'ಉಗುರ ಮೂನೂರ್ವರು' ಎಂದೇ ಇದೆ[22] ಇವರಿಬ್ಬರಿಗಿಂತ ಹೆಚ್ಚು ಸುವ್ಯವಸ್ಥಿತವಾದ ಬಹುಮಟ್ಟಿಗೆ ಎರಡನೇಯ ಗುಂಪನ್ನು ಹೋಲುವ ಗುಂಪು ಉದಾ: ವರ್ತಕರ ಶ್ರೇಣಿ ತಮ್ಮ ಮೂಲ ಪುರುಷರು ಅಯ್ಯಾವೊಳೆಯ ಐನೂರ್ವರು ಎಂದು ಇವರು ಭಾವಿಸುತ್ತಾರೆ.

ದೊಡ್ಡ ಸಂಖ್ಯೆಯ ಶಾಸನಗಳ ಅಧ್ಯಯನವು ಅವರ ಸಂಘಟನೆಯ ವಿಭಿನ್ನ ಹೆಸರುಗಳ ಅಡಿಯಲ್ಲಿ ವ್ಯಾಪಾರ ಸಮುದಾಯಗಳು ಕರಾವಳಿ ಕರ್ನಾಟಕದಲ್ಲಿ ಕೆಲಸ ಮಾಡಿತ್ತಿವೆ ಎಂದು ಊಹಿಸಲು ಶಕ್ತವಾಗಿದೆ. ತಮ್ಮ ಉತ್ತಮ ಹೆಣೆದ ಸಂಸ್ಥೆಗಳ ಕಾರಣದಿಂದಾಗಿ ಈ ಪ್ರದೇಶದ ಐತಿಹಾಸಿಕ ಅಭಿವೃದ್ಧಿಯಲ್ಲಿ ಅವರು ಪ್ರಭಾವ ಬೀರಿದ್ದರು. ವ್ಯಾಪಾರ ಸಮುದಾಯಗಳ ಈ ಸಂಘಟನೆಗಳು ಸೆಟ್ಟಿಕಾರರು, ಹಂಜಮಾನ, ನಕರ, ನಾನಾದೇಸಿ ಮತ್ತು ಪರದೇಸಿಗಳಂತಹ ಹೆಸರುಗಳಿಂದ ತಿಳಿದುಬಂದಿದೆ. ಕೆಲವು ಶಾಸನಗಳಲ್ಲಿ ನಾವು ಇಳಂಜಿಯರ್ ಮತ್ತು ಎಲಿಮೆಗಲ್ಗಳನ್ನು ಕೂಡಾ ಕಾಣುತ್ತೇವೆ, ಈ ಎಲ್ಲಾ ಸಂಘಗಳು ಉತ್ತಮವಾದ ಅಭಿವೃದ್ಧಿ ಹೊಂದಿದ ನಗರಗಳೊಂದಿಗೆ ವಿಶಾಲ ರಸ್ತೆಗಳು ಮತ್ತು ಉತ್ತಮ ಸಂವಹನ ಮಾಧ್ಯಮಗಳೊಂದಿಗೆ ತಮ್ಮ ಸ್ವಂತ ವ್ಯಾಪಾರಕೇಂದ್ರಗಳನ್ನು ಹೊಂದಿದ್ದವು. ಜೀವನಾವಶ್ಯಕ ವಸ್ತು ಮತ್ತು ಕ್ರಿಯೆಗಳಿಗೆ ಮಾತ್ರ ಸೀಮಿತವಾಗಿದ್ದ ಮಾನವನ ಆರಂಭದ ವೃತ್ತಿಗಳು ಹೆಚ್ಚು ನೈಸರ್ಗಿಕವಾಗಿದ್ದವು. ಕಾಲಕ್ರಮೇಣ ನಿಸರ್ಗಜೀವಿಯಾದ ಮಾನವನು ಸಮಾಜ ಜೀವಿಯಾಗಿ ಬೆಳೆದಂತೆ ಈ ನೈಸರ್ಗಿಕ ವೃತ್ತಿಗಳೊಂದಿಗೆ ಅನೇಕ ಸಾಮಾಜಿಕ ವೃತ್ತಿಗಳು ಹುಟ್ಟಿಕೊಂಡವು. ಮೊದಮೊದಲು ವೃತ್ತಿಯಾಗಿದ್ದ ಇವು ಕ್ರಮೇಣ ನಾಡಿನ ವ್ಯಾಪಾರ ಕ್ಷೇತ್ರದಲ್ಲಿ ಪ್ರಧಾನ ಪಾತ್ರವಹಿಸಿದವು. ಶಾಸನಗಳಲ್ಲಿ ವಿನಿಮಯ ವರ್ತಕ ಪ್ರಕಾರದವರ ವ್ಯವಹಾರ ಚಟುವಟಿಕೆಗಳು ವಿಶೇಷವೆನಿಸಿವೆ. ಇವುಗಳಲ್ಲಿ ಸೆಟ್ಟಿ, ಬಣಂಜಿಗ, ಸೆಟ್ಟಿಗುತ್ತ, ನಕರ, ಮುಂಮುರಿದಂಡ, ವಡ್ಡ ವ್ಯವಹಾರಿ, ಗವರೆ, ಗಾತ್ರಿಗ, ಸೆಟ್ಟಿಕಾರ, ಹಲರು, ಎಳಮೆ, ಸಾಲಿಕೆ ಬಲ್ಲಳುಗಳು, ಇವೆಲ್ಲಾ ವರ್ತಕ ಪ್ರಕಾರಗಳೆಂಬ ಹೊಸವಿಚಾರವನ್ನು ಇಲ್ಲಿ ಸ್ಥಾಪಿಸಲಾಗಿದೆ. ಇದರಂತೆ ಉತ್ಪಾದಕ–ವಿನಿಮಯ ವೃತ್ತಿಯ ಕುಂಬಾರ, ಅಕ್ಕಸಾಲಿ, ಮದಿಗ, ಸಮಗಾರ, ಮೇದರು ಆಯಾವಸ್ತುಗಳನ್ನು ಉತ್ಪಾದಿಸುವುದರೊಂದಿಗೆ ವ್ಯಾಪಾರ

ಕಾರ್ಯವನ್ನು ಪೂರೈಸಿದ್ದಾರೆ. ಹೀಗೆ ಉತ್ಪಾದನೆ-ಮಾರಾಟ ಕಾರ್ಯಗಳೆರಡನ್ನು ಜೊತೆ-ಜೊತೆಯಾಗಿ ಮಾಡಿದ ಸಂಯುಕ್ತ ಶ್ರೇಯಸ್ಸು ಇವರದಾಗಿದೆ. ಆದರೆ ಈ ಉತ್ಪಾದಕ-ವಿನಿಮಯ ವರ್ತಕರು ಸ್ವರೂಪ, ಕಾರ್ಯಕಲಾಪಗಳಲ್ಲಿ ವಿನಿಮಯ ವರ್ತಕರಿಗಿಂತ ಭಿನ್ನವಾಗಿ ಕಂಡುಬರುತ್ತಾರೆ. ವ್ಯಾಪಾರ ಧರ್ಮ, ವಾಣಿಜ್ಯಧೋರಣೆಗಳನ್ನು ಪರಿಪಾಲಿಸಿಕೊಂಡು ಬಂದ ಈ ವಿನಿಮಯ ವರ್ತಕರು ಮತ್ತು ಉತ್ಪಾದಕ-ವಿನಿಮಯ ವರ್ತಕರು ನಾಡಿನ ಆರ್ಥಿಕಾಭಿವೃದ್ಧಿ, ಜೀವನಮಟ್ಟ, ಮಾರಾಟಗಳಲ್ಲಿ ಗಣನೀಯ ಪ್ರಗತಿ ಸಾಧಿಸಲು ಅವಿಶ್ರಾಂತವಾಗಿ ಶ್ರಮಿಸಿದರು. ಕರ್ನಾಟಕದ ಜನಮನದಲ್ಲಿ ವ್ಯಾಪಾರ ಪರಿಶ್ರಮ ಬಹುದೊಡ್ಡದಾಗಿದೆ. ಇಲ್ಲಿ ವೈದಿಕ, ಜೈನ, ಶೈವಮತೀಯ ವರ್ತಕ ಸಮುದಾಯವನ್ನು ಕಾಣಬಹುದಾಗಿದೆ.

ವರ್ತಕಸಂಘಗಳಲ್ಲಿ ಮತ್ತೊಂದು ಪ್ರಕಾರ ಉತ್ಪಾದಕ-ವಿನಿಮಯ ಸಂಘ. ಈ ವರ್ತಕ ಸಂಘದಲ್ಲಿ ಸೇರಿಕೊಳ್ಳುವ ತೆಲ್ಲಿಗರೈವತ್ತೊಕ್ಕಲು, ಮಾಲೆಗಾರ ನಾಲ್ವತ್ತೊಕ್ಕಲು, ತೋಟಿಗರೈನೂರ್ವರು, ಸಾಲೆಸಾಸಿರ್ವರು ಅಥವಾ ಸಮಯಸಾಸಿರ್ವರು, ಚಿಪ್ಪಿಗಗೊತ್ತಳಿ, ಕುರುಬಸೇಣಿ, ಕಂಚಗಾರಗೊತ್ತಳಿಗಳು ಮತ್ತು ಇವುಗಳ ಸದಸ್ಯರು ವೈಯಕ್ತಿಕವಾಗಿ, ಸಾಂಘಿಕವಾಗಿ (ಆಯಾವಸ್ತುಗಳ) ಉತ್ಪಾದನೆ, ಮಾರಾಟಗಳೆರಡನ್ನು ನಿರ್ವಹಿಸಿದರು. ಹೀಗಾಗಿ ನಾಡಿನಲ್ಲಿ ವ್ಯಾಪಾರ, ವಾಣಿಜ್ಯಗಳು ವ್ಯಾಪಕವಾಗಿ ಬೆಳೆಯಲು ಸಾಧ್ಯವಾಯಿತು. ಮಧ್ಯಕಾಲೀನ ಕರ್ನಾಟಕದ ಈ ವರ್ತಕ ಪ್ರಕಾರದವರ ವ್ಯಾಪಾರಕ್ಕೆ ಸಂಬಂಧಿಸಿದ ಸಂತೆ, ಪೇಟೆ, ಪಟ್ಟಣ, ಅಂಗಡಿಗಳ ವಿಷಯ ಕುತೂಹಲಕಾರಿಯೆನಿಸಿದೆ. ಗೌಡ ಮಹಾಪ್ರಭು ವರ್ತಕ ಮೊದಲಾದವರು ಪಟ್ಟಣದ ಹೊರವಲಯದಲ್ಲಿ ಸಂತೆ ನಡೆಸುತ್ತಿದ್ದರು.

ತುಳುನಾಡಿನ ಆರ್ಥಿಕ ಸುಭದ್ರತೆಗೆ ಅದರ ಭೌಗೋಳಿಕ ಪರಿಸರ ಮತ್ತು ಸಂಪನ್ಮೂಲಗಳ ಜೊತೆಗೆ ವೃತ್ತಿ ಸಂಘಗಳೂ ಕೂಡಾ ಕೊಡುಗೆ ನೀಡಿದವು. ಈ ವೃತ್ತಿ ಸಂಘಗಳಲ್ಲಿ ಪ್ರಬಲವಾಗಿದ್ದ ವರ್ತಕ ಸಂಘಗಳು ರಾಜಕೀಯ ಗಡಿಗಳನ್ನು ಮೀರಿದ ಸಂಘಟನೆ ಹೊಂದಿದ್ದವು. ಅದರಿಂದಾಗಿ ಅವು ಭಾರತದಾದ್ಯಂತ ತಮ್ಮ ಶಾಖೆಗಳ ಮೂಲಕ ಮತ್ತು ಸೋದರ ಸಂಘಗಳ ಮೂಲಕ ವಾಣಿಜ್ಯ ವ್ಯವಹಾರ ನಡೆಸುತ್ತಿದ್ದವು. 'ಸಾರ್ಥ' ಅಥವಾ ವ್ಯಾಪಾರಿ ತಂಡಗಳನ್ನು ಕಟ್ಟಿಕೊಂಡು ದ್ವೀಪಾಂತರಗಳಿಗೆ ಹೋಗಿ ಪರದೇಶಗಳೊಂದಿಗೆ ವ್ಯಾಪಾರ ನಡೆಸುತ್ತಿದ್ದವು. ಇವು ತಮ್ಮ ಮಹತ್ವದಿಂದಾಗಿ ಎಲ್ಲ ಕಾಲದ

ಎಲ್ಲ ರಾಜರ ಪ್ರೋತ್ಸಾಹ ಪಡೆದು ಪ್ರಾಚೀನ ಮತ್ತು ಮಧ್ಯಯುಗ ಭಾರತದ ಅಂತಾರಾಷ್ಟ್ರೀಯ ಸಂಪರ್ಕದಲ್ಲಿ ಅದ್ವಿತೀಯ ಪಾತ್ರ ವಹಿಸಿದ್ದು ಕಂಡುಬರುತ್ತದೆ.[23] ನಮಗೆ ವೃತ್ತಿಸಂಘಗಳ ಬಗ್ಗೆಯಾಗಲಿ ವರ್ತಕರ ಬಗ್ಗೆಯಾಗಲಿ, ಅತ್ಯಂತ ಹಿಂದಿನ ಉಲ್ಲೇಖಗಳು ಮತ್ತು ಪ್ರಾಚೀನ ವಿವರಣೆಗಳು ಸಿಗುವುದು ಪ್ರಾಚೀನ ಬೌದ್ಧ ಸಾಹಿತ್ಯದಲ್ಲಿ. ಆದರೆ ಅದಕ್ಕೂ ಮೊದಲೇ ವೈದಿಕ ಸಾಹಿತ್ಯದಲ್ಲಿ ಅಂದರೆ ವೇದಗಳು ಮತ್ತು ಉಪನಿಷತ್‌ಗಳಲ್ಲಿ ಬರುವ ಕೆಲವು ಪ್ರಸ್ತಾಪಗಳಿಂದ ಆ ಕಾಲದ ವಣಿಕರ ಬಗ್ಗೆ ಕೆಲವೊಂದು ಸೂಚನೆಗಳು ಕಂಡುಬರುತ್ತವೆ. ವೈದಿಕ ಯುಗದಲ್ಲಿ ವರ್ತಕರು ಮತ್ತು ಸಮುದ್ರಯಾನದ ಬಗ್ಗೆ ಪರಿಚಯವಿತ್ತೆಂದು ತಿಳಿದುಬಂದಿದೆ. ಸ್ಥಳೀಯ ವರ್ತಕರ ಆರ್ಯರು ಹೊಂದಿದ್ದ ಭಾವನೆಗಳನ್ನು ಮೋತಿಚಂದ್ರರು ಹೀಗೆ ನಿರೂಪಿಸಿದ್ದಾರೆ "ಪಣಿಯು ಈ ಯುಗದ ಧನವಂತ ವ್ಯಾಪಾರಿಯಾಗಿದ್ದನು. ಬಹುಶಃ ಅವನು ತನ್ನ ಜೀವಿತದಿಂದ ಬ್ರಾಹ್ಮಣರ ಹಗೆಯಾಗಿದ್ದನು. ಅಂತೆಯೇ ಅವನಿಗೆ ವೈದಿಕಮಂತ್ರಗಳಲ್ಲಿ ತಪ್ಪು ಒಪ್ಪುಗಳನ್ನು ಹೇಳಲಾಗಿದೆ. ಕೆಲವು ಮಂತ್ರಗಳಲ್ಲಿ ಪಣಿಗಳನ್ನು ದಂಡಿಸಲಿಕ್ಕೆಂದು ದೇವತೆಗಳ ಪ್ರಾರ್ಥನೆಯಿರುತ್ತದೆ. ಒಮ್ಮೊಮ್ಮೆಯಂತೂ ಅವರು ತಮ್ಮ ಕೃಪಣತೆಗಾಗಿ ಜೀವವನ್ನು ಕಳೆದುಕೊಳ್ಳತ್ತಿದ್ದರು. ಕೆಲವು ಕಡೆ ಅವರು ವೈದಿಕ ಯಜ್ಞಗಳ ವಿರೋಧಿಗಳೆಂದು ತಿಳಿಯಲಾಗಿದೆ".[24] ಮೋತಿಚಂದ್ರರು ಮುಂದುವರಿದು "ಮಾವ ಉಲ್ಲೇಖದಿಂದ ತಿಳಿದಂತೆ ಪಣಿಗಳು ಬಹುಶಃ ಅನಾರ್ಯ ವ್ಯಾಪಾರಿಗಳಾಗಿದ್ದು ಅವರಿಗೆ ವೈದಿಕಧರ್ಮದಲ್ಲಿ ವಿಶ್ವಾಸವಿರದಿದ್ದುದರಿಂದ ಇಷ್ಟು ಘಾತಕರಾಗಿದ್ದರು. ಅಂತೆಯೇ ಅವರ ಮೇಲೆ ಆರ್ಯರ ದೋಷವಿದ್ದಿತು"[25] ಎಂದು ವಿವರಣೆ ನೀಡಿದ್ದಾರೆ. ವೈದಿಕಯುಗದಲ್ಲಿ ವ್ಯಾಪಾರಿಗಳಿಗೆ 'ವಣಿಜ್' ಎಂಬ ಪದ ಬಳಸುತ್ತಿದ್ದರು. ಬೃಬುವು ದೊಡ್ಡ ಸಮುದ್ರ ವ್ಯಾಪಾರಿಯಾಗಿದ್ದನೆಂದು ಭಾವಿಸಲಾಗಿದೆ. ಕೆಲವೆಡೆ ಅವರನ್ನು ದಾಸರೆಂದೂ ಕರೆಯಲಾಗಿದೆ. ಶಕ ಉಷವದತ್ತನ ನಾಸಿಕ್ ಶಾಸನದಿಂದ ಎದ್ದು ಕಾಣುವ ಇನ್ನೊಂದು ಅಂಶವೆಂದರೆ, ವೃತ್ತಿ ಸಂಘವು ಬ್ಯಾಂಕ್‌ರನಾಗಿ, ಬಂಡವಾಳಗಾರನಾಗಿ ಮತ್ತು ನ್ಯಾಸಧಾರಿಯಾಗಿ ಸಹ ಕಾರ್ಯನಿರ್ವಹಿಸಬಲ್ಲದಾಗಿತ್ತು. ಆದರೆ ಸಾಮಾನ್ಯವಾಗಿ ಈ ಕಾರ್ಯಗಳು ವ್ಯಾಪಾರಿಗಳ ಪ್ರತ್ಯೇಕವರ್ಗದಿಂದ ನಿರ್ವಹಿಸಲ್ಪಡುತ್ತಿದ್ದವು. ಇವರನ್ನು ಶ್ರೇಷ್ಠಿನರು ಅಥವಾ ಬಂಡವಾಳದಾರರೆಂದು ಕರೆಯಲಾಗುತ್ತಿತ್ತು".

"ಅತ್ಯಂತ ಲಾಭದಾಯಕ ಸಮುದ್ರ ವ್ಯಾಪಾರವೆಂದರೆ ದಕ್ಷಿಣ ಭಾರತದೊಂದಿಗೆ ನಡೆಯುತ್ತಿದ್ದ ರೋಮನ್ ವ್ಯಾಪಾರ. ಯವನ ವ್ಯಾಪಾರಿಗಳು (ಅಂದರೆ ಪಶ್ಚಿಮ ಏಷ್ಯಾ ಮತ್ತು ಮೆಡಿಟರೇನಿಯನ್ ಸಮುದ್ರ ವ್ಯಾಪಾರಿಗಳು) ಸಾತವಾಹನ ರಾಜ್ಯಗಳಲ್ಲೂ ಮತ್ತು ದೂರ ದಕ್ಷಿಣದ ರಾಜ್ಯಗಳಲ್ಲೂ ವ್ಯಾಪಾರ ಸಂಸ್ಥೆಗಳನ್ನು ಹೊಂದಿದ್ದರು". ಹೀಗೆ ದೇಶೀಯವಾದ ಮತ್ತು ಅಂತರ್ದೇಶೀಯವಾದ ವೃತ್ತಿಸಂಘಗಳು ನಡೆಸುತ್ತಿದ್ದ ವಾಣಿಜ್ಯ ವ್ಯಾಪಾರಗಳು ಸ್ಥಿರವ್ಯವಸ್ಥೆಯಿಂದ ಕೂಡಿದ್ದವು.[26] ಇತಿಹಾಸದ ಪ್ರಾರಂಭಕಾಲದಿಂದಲೂ ವೃತ್ತಿ ಸಂಘಗಳೂ ಮತ್ತು ವರ್ತಕರು ತಮ್ಮ ಚಟುವಟಿಕೆಗಳಲ್ಲಿ ತೊಡಗಿರುವುದನ್ನು ಕಾಣಬಹುದು. ರೋಮನ್ ಯುಗದ ವಾಣಿಜ್ಯದಿಂದಾಗಿ ಈ ಸಂಘಗಳು ಸದೃಢವಾಗಿ ಬೆಳೆದವು. ಹೀಗೆ ಸುಸಂಘಟಿತವಾಗಿದ್ದ ವೃತ್ತಿಸಂಘಗಳು ಗುಪ್ತರ ಕಾಲಕ್ಕೆ ಉಚ್ಛ್ರಾಯ ಸ್ಥಿತಿಗೆ ಬಂದವು. ಉಪಕಸುಬುಗಳವರೂ ತಮ್ಮ ತಮ್ಮ ಸಂಘಗಳನ್ನು ಅಥವಾ ಶ್ರೇಣಿಗಳನ್ನು ಕಟ್ಟಿಕೊಂಡರು. ಈ ಬಗ್ಗೆ ಬೌದ್ಧ ಮತ್ತು ಸಾಹಿತ್ಯದಲ್ಲಿ ವಿಪುಲ ಮಾಹಿತಿ ದೊರೆಯುತ್ತದೆ. ಜಂಬುದ್ವೀಪ ಪ್ರಶಸ್ತಿಯಲ್ಲಿ 18 ಶ್ರೇಣಿಗಳನ್ನು ಉಲ್ಲೇಖಿಸಲಾಗಿದೆ. ಅವರನ್ನು ಮೋತಿಚಂದ್ರರು ಹೀಗೆ ಪಟ್ಟಿಮಾಡಿದ್ದಾರೆ. ಕುಂಬಾರ, ರೇಷ್ಮೆ ನೇಯುವವರು (ಪಟ್ಟಯಿಲ್ಲಾ), ಅಕ್ಕಸಾಲಿಗ (ಸುವರ್ಣಕಾರ), ಅಡುಗೆಯವ (ಪೂವಕಾರ), ಗಾಯಕ (ಗಂಧಬ್ಬ), ನಾಪಿತ (ಕಾಸವಗ), ಮಾಲಕಾರ, ಕಚ್ಚಕಾರ (ಕಾಥೀ), ವೀಳ್ಯದ ಎಲೆಗಾರ, ಸಮಗಾರ (ಚಮ್ಮಯರು), ಎಣ್ಣೆಗಾರ (ದಂತಪೀಲಗ), ಪಂಚೆಗಳನ್ನು ಮಾರುವವ (ಗಂಭೀ), ಬಟ್ಟೆಗಳ ಮೇಲೆ ಅಚ್ಚು ಹಾಕುವವ (ಛಿಂಚ), ಕಂಚುಗಾರ (ಕಂಸಕಾರ), ಸಿಂಪಿಗ (ಸೀವಗ), ಗವಳಿಗ (ಗುವಾರ), ಬೇಟೆಗಾರ ಮಿಲ್ಲ) ಮತ್ತು ಮೀನುಗಾರ[27] 'ಮಹಾವಸ್ತುವಿನಲ್ಲಿ' ಇನ್ನೂ ಕೆಲವು ಶ್ರೇಣಿಗಳ ಉಲ್ಲೇಖವಿದೆ. ಅವುಗಳಲ್ಲಿ ಗಮನಾರ್ಹವೆಂದರೆ ಶಂಖದ ಕೆಲಸಗಾರರು (ಶಾಂಖಿಕ), ಹಸ್ತಿದಂತದ ಕೆಲಸಗಾರರು (ದಂತಕಾರ), ಮಣಿಗಾರರು (ಮಣಿಕಾರ) ಕಲ್ಲಿನ ಕೆಲಸಗಾರರು (ಪಾಸ್ತರಿಕ), ಗಂಧಿಗಳು, ರೇಷ್ಮೆ ಮತ್ತು ಎಣ್ಣೆಯ ಬಟ್ಟೆಯ ಕೆಲಸಗಾರರು (ಕೋಶಾವಿಕ), ಸುಗಂಧ ಎಣ್ಣೆ ಮಾರುವವರು (ಗಂಧ–ತೈಲಿಕ), ಸಕ್ಕರೆಯನ್ನು ಮಾರುವವರು (ಶರ್ಕರ ವಣಿಜ) ಇತ್ಯಾದಿ, ಶಿಲ್ಪಾಯತನವೆಂಬ ಶ್ರೇಣಿಯೂ ಇದ್ದುದು ಕಂಡುಬರುತ್ತದೆ. ಅದರಲ್ಲಿ ಲೋಹಕಾರರು, ತಾಮ್ರ ಕೆಲಸಗಾರರು, ಕಂಚುಗಾರರು, ಚಮಗಾರರು, ಹಿತ್ತಾಳೆಯನ್ನು ಮಾಡುವವರು; ಇತ್ಯಾದಿ ಲೋಹದ ಕೆಲಸಗಾರರು, ಗಾಜಿನ ಕೆಲಸಗಾರರು ಮತ್ತು ಚರರೇ ಯಂತ್ರಕಾರರು ಚಿತ್ರಕಾರರು

ಮುಖ್ಯವಾಗಿ ಸೇರಿದ್ದರು. ಸ್ಥಪತಿಗಳು, ಸೂತ್ರದಾರರು, ನಾವಿಕರು ಮೊದಲಾದ ಸಮುದ್ರ ಯಾನ ವೃತ್ತಿಯವರಿದ್ದರು.[28]

ವರ್ತಕರು ಪಾದಮಾರ್ಗ, ಜಲಮಾರ್ಗಗಳ ಮೂಲಕ ವ್ಯಾಪಾರಕ್ಕೆ ಹೊಗುತ್ತಿದ್ದರು. ಇದಕ್ಕಾಗಿ ಇವರು ಬಳಸುತ್ತಿದ್ದ ಸರಕು ತುಂಬುವ ಸಲಕರಣೆ, ಸಾಗಾಣಿಕೆಯ ಸಾಧನಗಳ ವಿವರಣೆ ಅಪೂರ್ವವೆನಿಸಿವೆ. ಮಾರ್ಗಮಧ್ಯದಲ್ಲಿ ವರ್ತಕರು ದಾರಿಗಳ್ಳರಿಂದ ತೊಂದರೆ ಅನುಭವಿಸುತ್ತಿದ್ದರು. ತಾವು ತಂದ ಸರಕುಗಳನ್ನು ಸಂತೆ, ಪೇಟೆ, ಪಟ್ಟಣಗಳಲ್ಲಿ ತೂಗಿ, ಎಣಿಸಿ, ಅಳೆದು ಮಾರುತ್ತಿದ್ದರು. ಆಗ ವರ್ತಕರು ನಡೆಸುತ್ತಿದ್ದ ವಂಚನೆಗಳನ್ನು ಕಾವ್ಯ, ಶಾಸನಗಳು ಬಯಲಿಗೆ ಎಳೆದಿವೆ. ಸಂತೆಗೆ ಬರುವ ಸರಕುಗಳ ಮೇಲೆ ವಿಧಿಸುತ್ತಿದ್ದ ಸಂತೆಯ ಆಯಾ, ಮಾರಾಟದ ವಿವಿಧ ಸರಕುಗಳ ಮೇಲೆ ವಿಧಿಸುತ್ತಿದ್ದ ಮಾರಾಟ ತೆರಿಗೆಗಳು ಆಯಾ ಪ್ರದೇಶ, ಕಾಲಗಳಲ್ಲಿ ಬೇರೆಬೇರೆಯಾಗಿದ್ದವು. ಇದಲ್ಲದೆ ವರ್ತಕರು ಸೆಟ್ಟಿಬಣ ಅಥವಾ ವರ್ತಕಸುಂಕ, ಕೀಳ್ವಟ್ಟೆ ಸುಂಕ, ಮೇಲ್ವಟ್ಟೆ ಸುಂಕ, ಎತ್ತಿನ ಸುಂಕ, ಗಾಡಿ ಸುಂಕ, ನದಿಯ ಬೀಯ ಮೊದಲಾದ ತೆರಿಗೆಗಳನ್ನೂ ಸಲ್ಲಿಸುತ್ತಿದ್ದರು. ಇದರಿಂದ ಶಾಸನಗಳಿಂದ ಹೊರನಾಡಿನ ವ್ಯಾಪಾರ ಸಂಬಂಧವು ಗೊತ್ತಾಗುತ್ತಿತ್ತು. ದವಸ–ಧಾನ್ಯಗಳನ್ನು ಅಳೆಯಲು ಕೊಳಗ, ಬಳ್ಳ, ಮಾನ, ಸೊಲ್ಲಗೆ, ಸಟ್ಟುಗ, ಪಡಿ, ಅದ್ದನ, ಗಿದ್ದನ, ಪಳಿಗೆ, ದಳ, ಹಾನೆ, ಸೆಡೆ ಮಾಪುಗಳನ್ನೂ ಇಂಗು, ಹತ್ತಿ ಮೊದಲಾದ ವಸ್ತುಗಳನ್ನು ತೂಗಲು ಭಾರ, ಮಳವೆ, ಪಲ, ಬಿಸಿಗೆ, ಕೊಡಿಗೆ, ಬೆಲ್ಲಳಿಗೆ, ತೂಕವಿಶೇಷಗಳನ್ನೂ ಬಳಸುತ್ತಿದ್ದರೆಂಬ ಅಂಶಗಳತ್ತ ಶಾಸನಗಳು ನಮ್ಮ ಗಮನಸೆಳೆಯುತ್ತವೆ.

ಆಳುಪರ ಕಾಲದಲ್ಲಿ ಬಾರಹಕನ್ಯಾಪುರ, ಬಸುರೆಪಟ್ಟಣ, ಮೂಡುಬಿದರೆ, ಮಂಗಳಪುರ ಮುಂತಾದ ಪ್ರಮುಖ ವಾಣಿಜ್ಯ ಕೇಂದ್ರಗಳಲ್ಲಿ ನಖರ, ಸೆಟ್ಟಿಕಾರ, ಹಂಜಮಾನ, ಎಂಬ ಮೂರು ವರ್ತಕ ಸಂಘಗಳು ಪ್ರಮುಖವಾಗಿದ್ದವು. ಸೆಟ್ಟಿಕಾರರು, ಹಲರು, ಎಳಮೆ, ಸಾಲಿಕೆಬಲ್ಲಾಳು, ಹೊರಗಿನವರು, ತುಳುನಾಡಿನ ಶಾಸನಗಳಲ್ಲಿ ಮಾತ್ರ ಅಧಿಕವಾಗಿ ಕಾಣಸಿಗುವ ವರ್ತಕ ಪ್ರಕಾರಗಳಿವು. ಆದುದರಿಂದ ಸೆಟ್ಟಕಾರ, ಹಲರು, ಎಳಮೆ, ಸಾಲಿಕೆ ಬಲ್ಲಾಳುಗಳು ತುಳುನಾಡಿನ ವರ್ತಕರೆಂದು ಹೇಳಬೇಕಾಗುತ್ತದೆ. ಇವರು ತುಳುನಾಡಿನ ವರ್ತಕ ಪ್ರಕಾರಗಳ ಗುಂಪಿಗೆ ಸೇರುವರು. 'ಪಡುಕೇರಿಯ ಹಲರು ಸೆಟ್ಟಿಕಾರರು"[29] 'ಮಣಿಗಾರಕೇರಿಯ ಮೂವರು ಸೆಟ್ಟಿಕಾರರು, 150 ಎಳಮೆಗೊಳಗಾದವರು, ಸಮಸ್ತ

ಹಲರು'[30] ಎಂಬ ಶಾಸನ ವಾಕ್ಯಗಳು ಒಂದೇ ಕೇರಿಯಲ್ಲಿ ಎರಡು ಇಲ್ಲವೆ ಮೂರು ಪ್ರಕಾರದ ವರ್ತಕರು ವಾಸಿಸುತ್ತಿದ್ದರು. ಎಂಬುದನ್ನೂ ಕೆಲವೊಮ್ಮೆ 'ಚೌಳಿಕೇರಿಯ ಆಯಿವರು ಹಲರು' ಈ ಉಲ್ಲೇಖ ಕೆಲವೊಮ್ಮೆ ಒಂದೊಂದು ಕೇರಿಯಲ್ಲಿ ಒಂದೊಂದು ವರ್ತಕ ಪ್ರಕಾರದವರು ಇರುತ್ತಿದ್ದರೆಂದು ತಿಳಿಸುತ್ತದೆ.[31] ಸೆಟ್ಟಿಕಾರರು, ಹಲರು, ಎಳಮೆಗಳು ತುಳುನಾಡಿನ ಬಾರಕೂರು, ಬಸರೂರು, ಮೂಡಬಿದರೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿಯೂ ಹಾಗೂ ಭಟ್ಕಳ, ಹಾರುಮಸ್ಕೇರಿ (ಕುಮುಟಾ ತಾಲೂಕು), ಉದಯವಾರಗಳಲ್ಲಿ ವಿರಳ ಸಂಖ್ಯೆಯಲ್ಲಿಯೂ ಇದ್ದುದು ಸ್ಪಷ್ಟವಾಗುತ್ತದೆ. ಹೀಗೆ ವಿವಿಧ ವ್ಯಾಪಾರ ಸಂಘಟನೆಗಳ ಬಗ್ಗೆ ತಿಳಿಯಬಹುದು. ಅವುಗಳೆಂದರೆ,

**ಗವರೆ ಅಥವಾ ಗಾತ್ರಿಗರು:** ಗವರೆ, ಗಾತ್ರಿಗರು 'ತಂಬುಲಿಗ ಸಾಸಿರ್ವರು' ಎಂಬ ವರ್ತಕ ಸಂಘವನ್ನು ರಚಿಸಿಕೊಂಡು ಇವರು ವೀಳ್ಯದೆಲೆ ವ್ಯಾಪಾರ ನಡೆಸುತ್ತಿದ್ದರು. ಇವರು ವೀಳ್ಯದೆಲೆಯನ್ನು ತಲೆಯ ಮೇಲೆ ಮತ್ತು ಪ್ರಾಣಿಗಳ ಮೇಲೆ (ಕತ್ತೆಗಳು), ಹಾಗೂ ಹೆಗಲ ಮೇಲೆ ಹೊತ್ತು ಮಾರುತ್ತಿದ್ದರು.[32] ಆದ್ದರಿಂದ ಗವರೆ ಮತ್ತು ಗಾತ್ರಿಗರನ್ನು ಪ್ರತ್ಯೇಕವಾದ ವೀಳ್ಯದೆಲೆ ವರ್ತಕರೆಂದು ಪರಿಗಣಿಸಬಹುದು. ಇವರು ಪ್ರಭಾವಶಾಲಿ ವ್ಯಾಪಾರಿಗಳಾಗಿರಲಿಲ್ಲ. ವಸ್ತುಗಳ ಬೇಡಿಕೆ ಎಲ್ಲಿರುತ್ತಿತ್ತೊ ಅಲ್ಲಲ್ಲಿ ಮಾರಾಟ ಮಾಡುತ್ತಿದ್ದರು. ಇವರ ವ್ಯಾಪಾರದ ಬೆಳವಣಿಗೆಗೆ ಪ್ರಮುಖ ಕಾರಣವೆಂದರೆ ಮಧ್ಯಯುಗೀನ ಕಾಲದಲ್ಲಿ ಅಡಿಕೆ ಮತ್ತು ವೀಳ್ಯದೆಲೆ ಬೆಳೆಗಳಾಗಿತ್ತು. ಇವರು ವ್ಯಾಪಾರದಿಂದ ಬಂದ ಲಾಭದ ಒಂದು ಅಂಶವನ್ನು ದೇವಸ್ಥಾನಗಳಿಗೆ ದೇಣಿಗೆಯಾಗಿ ಕೊಡುತ್ತಿದ್ದರು.

**ಅಯ್ಯಾವೊಳೆ ಐನೂರ್ವರು:** ವ್ಯಾಪಾರ ವೃತ್ತಿಯಿಂದ ಜೀವನ ನಡೆಸುತ್ತಿದ್ದ ವರ್ತಕರು ರಚಿಸಿಕೊಂಡ ಸಂಘ, ವಿನಿಮಯ ಸಂಘವಾಗಿದೆ. ವ್ಯಾಪಾರ ವೃತ್ತಿಯಿಂದ ಅಯ್ಯಾವೊಳೆ ಐನೂರ್ವರು, ತಂಬುಲಿಗರು, ಹಂಜಮಾನರು ಸಂಘಗಳನ್ನು ವರ್ತಕ ಸಂಘಗಳೆಂದು ಶಾಸನಗಳೆಂದು ತಿಳಿಯಬಹುದಾಗಿದೆ. 8ನೆಯ ಶತಮಾನದ ಪೂರ್ವದಲ್ಲಿ ಅಯ್ಯಾವೊಳೆಯ 500 ಜನ ಸದಸ್ಯರ ವರ್ತಕ ಸಂಘದ ವ್ಯಾಪಾರಶಾಹಿ ಪ್ರಭುತ್ವದಿಂದ ಪ್ರಖ್ಯಾತಿ ಪಡೆದಿತ್ತು. ಅಯ್ಯಾವೊಳೆ ಐನೂರ್ವರ ವರ್ತಕ ಸಂಘ ಬಾದಾಮಿ ಚಾಲುಕ್ಯರ ಕಾಲದಲ್ಲಿ (ಕ್ರಿ.ಶ. 535–757) ಐಹೊಳೆಯಲ್ಲಿ ಅಸ್ಥಿತ್ವದಲ್ಲಿತ್ತೆಂಬುದು ಖಚಿತ ಆದರೆ ತದನಂತರದಲ್ಲಿ 8ನೇ ಶತಮಾನದಿಂದ ಪುರೋಹಿತಶಾಹಿ ಪ್ರಭುತ್ವದ ಪ್ರವೇಶದಿಂದಾಗಿ ಅಯ್ಯಾವೊಳೆಯಲ್ಲಿದ್ದ

ವ್ಯಾಪಾರಿಶಾಹಿ ಪ್ರಭುತ್ವ ಮಂಕಾಗುತ್ತಾ ಬಂದಿತು. ಏಕೆಂದರೆ ವಿವಿಧ ವ್ಯಾಪಾರಗಳಲ್ಲಿ ಬೇರೆಬೇರೆ ಜಾತಿಯ ಸದಸ್ಯರು ಈ 'ಅಯ್ಯಾವೊಳೆ ಐನೂರ್ವರು' ವರ್ತಕ ಸಂಘ ನಾಸವಾಗಿ ಅಲ್ಲಲ್ಲಿ ವ್ಯಾಪಾರ ಮಾಡುವವರು ಈ ಹೆಸರಿನಿಂದ ತಮ್ಮನ್ನು ಕರೆಸಿಕೊಳ್ಳುವಂತಾಯಿತು. ವಿಪರ್ಯಾಸವೆಂದರೆ, ಶಾಸನಗಳಲ್ಲಿ ಈ ಪದ ಅಯ್ಯಾವೊಳೆ ಐನೂರ್ವರು ಬಳಕೆಯಾಗುವ ಕಾಲದಲ್ಲಿ ಈ ಸಂಘ ಐಹೊಳೆಯಲ್ಲಿ ಅಸ್ಥಿತ್ವದಲ್ಲಿರಲಿಲ್ಲವೆಂದು ಹೇಳಲಾಗಿದೆ[33]. ಅಯ್ಯಾವೊಳೆ ಐನೂರ್ವರ ವರ್ತಕ ಸಂಘದವರು, ಸೆಟ್ಟಿಯರು, ತಳದ ಬಣಜಿಗ ಸೆಟ್ಟಿಯರು, ಮುಂಮರಿದಂಡರು, ಗವರೆಗಳು, ಗಾತ್ರಿಗರು, ಪಟ್ಟಣಸ್ವಾಮಿಗಳು, ಹಲರು, ನಕರರು, ತಂಬುಲಿಗ, ಸಾಸಿರ್ವರು, ಅಯ್ಯೆತ್ತೊಕ್ಕಲು ಇತ್ಯಾದಿ ಬೇರೆ ಬೇರೆ ಅರ್ಥ ಬರುತ್ತವೆ. ಹೀಗೆ ನಕರ, ಮುಂಮರಿದಂಡ ಮುಂತಾದ ವರ್ತಕ ಪ್ರಕಾರದವರಂತೆ' ಅಯ್ಯಾವೊಳೆ ಐನೂರ್ವರು' ಎಂಬ ವರ್ತಕ ಸಂಘದವರೂ ಆಯಾ ಗ್ರಾಮ, ಪಟ್ಟಣಗಳಲ್ಲಿದ್ದರೆಂಬುದು ವ್ಯಕ್ತವಾಗಿದೆ. ಹೀಗೆ ಅಯ್ಯಾವೊಳೆ ಮೊದಲು 500 ಜನ ಸದಸ್ಯರ ವರ್ತಕ ಸಂಘದ ಸ್ಥಳವೆನಿಸಿ ಆಮೇಲೆ 500 ಮಹಾಜನರ ಅಗ್ರಹರವಾಗಿ ನಿಂತಿತು.[34] "ಈ ಸಂಘದ ಹೆಸರು ಕಂಡುಬರುವ ಅತ್ಯಂತ ಪ್ರಾಚೀನ ಶಾಸನವೆಂದರೆ, ಫ್ಲೀಟ್ ಅವರ ಪ್ರಕಾರ ಸು. 800ರ ಐಹೊಳೆ ಶಾಸನ. ಈ ಶಾಸನದಲ್ಲಿ ಬೆಣ್ಣಮ್ಮ ಸೋಮಯಾಜಿ ಎನ್ನುವವನು ಐಹೊಳೆಯ ಐನೂರ್ವರ 'ಚಾತುರ್ವಿದ್ಯ ಸಮುದಾಯ'ಕ್ಕೆ ಕೊಟ್ಟ ದಾನವನ್ನು ಹೆಳಿದೆ. ಅನ್ನಪ್ರಾಶನ ಪುಂಸವನ, ಮದುವೆ, ಉಪನಯನ, ಸಮಾವರ್ತನ, ಪಶುವಿಧಿ, ಚಾತುರ್ಮಾಸ, ಇತ್ಯಾದಿಗಳಿಗಾಗಿ ದಾನವನ್ನು ಕೊಡಲಾಗಿದೆ. ದಾನದ ವಿವರವನ್ನು ನೋಡಿದರೆ ದತ್ತಿಯನ್ನು ಸ್ವೀಕರಿಸಿದವರು ಐಹೊಳೆಯ ಐನೂರ್ವರು ಬ್ರಾಹ್ಮಣರಿರಬೇಕೇ ಹೊರತು, ಐನೂರ್ವರ ಸಂಘವಿರಲಾರದು. ಆದುದರಿಂದ 'ಅಯ್ಯಾವೊಳೆ ಐನೂರ್ವರ ಹೆಸರನ್ನು ಹೇಳುವ ಅತ್ಯಂತ ಪ್ರಾಚೀನ ಶಾಸನವಿದು" ಎಂಬ ಫ್ಲೀಟ್‌ರ ಅಭಿಪ್ರಾಯವನ್ನು ಒಪ್ಪಲಾಗುವುದಿಲ್ಲ.[35] ಎಂಬ ಎಂ. ಚಿದಾನಂದಮೂರ್ತಿಯವರ ವಿಚಾರವನ್ನು ಸೀಕರಿಸಬುಹುದೆಂದು ಬಿ. ಆರ್. ಹಿರೇಮಠರ[36] ಹೇಳಿಕೆಯಾಗಿದೆ. ಆದರೆ ಕರಾವಳಿ ಪ್ರದೇಶದ ಶಾಸನಗಳಲ್ಲಿ ಅಯ್ಯಾವೊಳೆ ಐನೂರ್ವರ ಪ್ರಶಸ್ತಿ ದೊರೆಯುವುದಿಲ್ಲ. ಈ ವರ್ತಕ ಪ್ರಕಾರದವರು ಸಾಮೂಹಿಕವಾಗಿ, ವೈಯಕ್ತಿಕವಾಗಿ ವ್ಯಾಪಾರ ಕಾಯಕವನ್ನು ಮುಂದುವರೆಸಿಕೊಂಡು ಬಂದರು.

ವ್ಯಾಪಾರ ಸಂಘಗಳು ಕರ್ನಾಟಕದಲ್ಲಿ 7–8ನೇ ಶತಮಾನದಿಂದ ಹೆಚ್ಚು ಪ್ರಚಲಿತಕ್ಕೆ ಬಂದಂತೆ ಕಾಣುತ್ತದೆ. ಬಾದಾಮಿ ಚಾಲುಕ್ಯರ ಕಾಲದಿಂದ ಇವು ಉನ್ನತಿಗೆ ಬರುತ್ತವೆ.

'ಅಯ್ಯಾವೊಳೆ ಐನೂರ್ವ'ರೆಂದು ವಣಿಕ ಸಂಘ ವಿಜಯನಗರ ಕಾಲದವರೆಗೂ ಉಚ್ಛ್ರಾಯ ಸ್ಥಿತಿಯಲ್ಲಿದ್ದುದು ಕಂಡುಬರುತ್ತದೆ. ಇದು ಬಾದಾಮಿ ಚಾಲುಕ್ಯರ ಕಾಲದಲ್ಲಿ ಸ್ಥಾಪನೆಯಾಗಿರ ಬಹುದು. ಕಲ್ಯಾಣಿ ಚಾಲುಕ್ಯ, ಹೊಯ್ಸಳ ಮತ್ತು ವಿಜಯನಗರ ಸಾಮ್ರಾಜ್ಯದ ಕಾಲದ ಅನೇಕ ಶಾಸನಗಳಲ್ಲಿ ಅಯ್ಯಾವೊಳೆ ಐನೂರ್ವರ ಸಂಘಕ್ಕೆ ಸಂಬಂಧಿಸಿದ ಮಾಹಿತಿ ದೊರೆಯುತ್ತದೆ. ಜೊತೆಗೆ ತಮಿಳುನಾಡು ಮತ್ತು ಕೇರಳದ ವರ್ತಕರೂ ಸಹ ಈ ಸಂಘದ ಸದಸ್ಯತ್ವ ಹೊಂದಿದ್ದರು. ಈ ಸಂಘದ ವರ್ತಕರೆಲ್ಲರೂ ಬೇರೆಬೇರೆ ಪಟ್ಟಣಗಳಿಗೆ ಸಂಚರಿಸಿ ಸರಕುಗಳನ್ನು ಕೊಳ್ಳುವ ಮತ್ತು ಮಾರುವ ಕಾರ್ಯದಲ್ಲಿ ತೊಡಗಿದ್ದರು. ಅಂತರ್ದೇಶಿಯ ಸಾಗಾಣಿಕೆಗೆ ಕುದುರೆ, ಎತ್ತು, ಕೋಣ, ಕತ್ತೆ, ಒಂಟೆ, ಆನೆಗಳನ್ನು ಉಪಯೋಗಿಸುತ್ತಿದ್ದರು. ಈ ವರ್ತಕರು ಬಟ್ಟೆ, ಭತ್ತ, ಹತ್ತಿ, ಸಕ್ಕರೆ, ಗೋಧಿ, ಅಡಿಕೆ, ಸಾಸುವೆ, ಜೀರಿಗೆ, ಮೆಣಸು, ಅರಿಶಿನ, ಇಂದ್ರನೀಲ, ಚಂದ್ರಕಾಂತ ಮತ್ತು ಮಾಣಿಕ್ಯ, ವಜ್ರ, ವೈಡೂರ್ಯ, ಗೋಮೇದಿಕ, ಪುಷ್ಯರಾಗ, ಪದ್ಮರಾಗ, ಪವಳ, ಮರಕತ, ಕರ್ಕೇತನ, ಚಂದನ, ಕಸ್ತೂರಿ, ಕುಂಕುಮ ಮೊದಲಾದ ವಸ್ತುಗಳನ್ನು ಅವುಗಳು ದೊರೆಯುವ ಸ್ಥಳದಿಂದ ಖರೀದಿಸಿ ಆವಶ್ಯಕತೆಯಿರುವ ಪ್ರದೇಶಗಳಿಗೆ ಸಾಗಿಸಿ ಮಾರುತ್ತಿದ್ದರು. ಈ ಸಂಘದ ವರ್ತಕರು ಅನೇಕ ದೇವಾಲಯಗಳನ್ನು ಮತ್ತು ಕೆರೆಗಳನ್ನು ಕಟ್ಟಿಸಿದ್ದಾರೆ. ಜೊತೆಗೆ ಮಠಗಳಿಗೂ ದಾನದತ್ತಿಗಳನ್ನು ನೀಡಿರುತ್ತಾರೆ.[37] ರಾಜರುಗಳು ತಮ್ಮ ವ್ಯಾಪ್ತಿಗೆ ಬರುವ ರಾಜ್ಯಗಳಲ್ಲಿ ನಡೆಯುತ್ತಿದ್ದ ವ್ಯಾಪಾರದ ಮೇಲೆ ಸುಂಕ ವಿಧಿಸುತ್ತಿದ್ದರು. ಇದನ್ನು ನೋಡಿಕೊಳ್ಳಲು ಅಧಿಕಾರಿಗಳಿರುತ್ತಿದ್ದರು. ಮಂಗಳೂರಿನ 1204ರ ಶಾಸನದಿಂದ ಅಂಗಡಿಯಲ್ಲಿ ಅಧಿಕಾರಿ ಇರುವಿಕೆಯ ಬಗ್ಗೆ ತಿಳಿಯುತ್ತದೆ.[38]

**ಸೆಟ್ಟಿ, ಬಣಂಜಿಗ** : ಶ್ರೇಷ್ಠಿನ್, ವಣಿಜ ಸಂಸ್ಕೃತ ಪದಗಳ ಕನ್ನಡ ರೂಪ ಸೆಟ್ಟಿ, ಬಣಂಜಿಗ – ಇವು ವೃತ್ತಿ ಸೂಚಕವಾಗಿದ್ದವು. ಕ್ರಮೇಣ ಜಾತಿಸೂಚಕವಾಗಿ ಬೆಳೆದವು.[39] (ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪುಟ 12) ಸೆಟ್ಟಿ, ಬಣಂಜಿಗ ವರ್ತಕದ ಸಮಾನಾರ್ಥ ಶಬ್ದಗಳಾಗಿದ್ದು, ವ್ಯಾಪಾರವೃತ್ತಿಯನ್ನು ಜೀವನೋಪಾಯದ ಸಾಧನವನ್ನಾಗಿಸಿಕೊಂಡವರು. ಇವರು ಸರಕುಗಳನ್ನು ಎತ್ತು, ಕತ್ತೆ, ಕೋಣಗಳ ಮೇಲೆ ಹೇರಿಕೊಂಡು, ತಲೆಯ ಮೇಲೆ ಹೊತ್ತುಕೊಂಡು ಹೋಗಿ ಸಂತೆ ಪಟ್ಟಣಗಳಲ್ಲಿ ವ್ಯಾಪಾರ ವ್ಯವಹಾರ ನಡೆಸುತ್ತಿದ್ದರು. ಸರಕುಗಳನ್ನು ಹೇರುತ್ತಿದ್ದರಿಂದ ಇವರಿಗೆ, 'ಹೇರುವ ಬಣಂಜಿಗ', 'ಹೇರುವ ಸೆಟ್ಟಿ' ಯರೆನಿಸಿದರು. ಅಲ್ಲದೇ ಎತ್ತಿನ ವಣಿಜರು, ಕೋಣನ ಸೆಟ್ಟಿ, ಕತ್ತೆಯ ಸೆಟ್ಟಿ, ಬಣಂಜಿಗ

ಸೆಟ್ಟಿಯರೆಂದೂ ಕೂಡಾ ಇವರನ್ನು ಕರೆಯಲಾಗಿದೆ.[40] ಸೆಟ್ಟಿಕಾರರಿಗೆ ಸಂಬಂಧಿಸಿದಂತೆ ಅನ್ಯಂಟರ ಬಳಿ, ಗೋಳರ ಬಳಿ, ನರಯಿನಬಳಿ, ಕುಡೆಯರ ಬಳಿಗಳು ಕಂಡುಬರುತ್ತವೆ. ಇಲ್ಲಿ ಬಳ್ಳಿ ಎಂದರೆ, ವಂಶ, ಪರಂಪರೆ ಎಂದರ್ಥ. ಕೆಲವು ಜನ ಸೆಟ್ಟಿಕಾರರಿಗೆ ರುದ್ರಾಕ್ಷಿ ಒಡೆಯರು ಗುರುವಾಗಿದ್ದ ವಿಷಯ ಬಸರೂರು ಶಾಸನದಲ್ಲಿದೆ.[41] ಬಸರೂರು ತಾ. ಕುಂದಾಪುರ (ಕ್ರಿ.ಶ. 1487) ಸೆಟ್ಟಿಕಾರರಲ್ಲಿ ಜೈನ, ಶೈವ ಮತೀಯರಿದ್ದರು. ಸೆಟ್ಟಿಕಾರರು ಸ್ವದೇಶೀ ಸರಕುಗಳ ವಹಿವಾಟು ನಡೆಸುತ್ತಿದ್ದರು.[42] ಶೆಟ್ಟಿ ಎನ್ನುವ ಪದವು ಆರ್ಯವೈಶ್ಯರಿಗಷ್ಟೇ ಅಲ್ಲ, ವೀರಶೈವ ಶೆಟ್ಟಿ, ಜೈನಶೆಟ್ಟಿಗಳು, ದೇವಾಂಗದವರಲ್ಲೂ ಸೆಟ್ಟಿಗಳಿದ್ದಾರೆ. ಇದನ್ನು ನೋಡಿದರೆ ನಮ್ಮ ಸಮಾಜದಲ್ಲಿ ಈ ಶೆಟ್ಟಿ ಪದವು ಒಂದು ಜಾತಿಗಷ್ಟೇ ಸೀಮಿತವಾಗಿರದೆ, ವ್ಯಾಪಾರ ಮಾಡುವವರನ್ನು ಶೆಟ್ಟಿ, ಸೆಟ್ಟಿ ಎಂದು ಕರೆಯುತ್ತಿದ್ದರೆಂದು ಬಿ. ಆರ್. ಹಿರೇಮಠರು ಬರೆದ "ಶಾಸನಗಳಲ್ಲಿ ಕರ್ನಾಟಕದ ವರ್ತಕರು" ಎನ್ನುವ ಕೃತಿಯಲ್ಲಿ ತಿಳಿಸಿರುವರು. 'ಶೆಟ್ಟಿ' ಎನ್ನುವ ಪದ 'ಶ್ರೇಷ್ಠಿನ್' ಎನ್ನುವ ಸಂಸ್ಕೃತ ಪದದ ರೂಪ. ಹೇಗಿದ್ದರೂ ಮೂಲದಲ್ಲಿ ಸೆಟ್ಟಿ ಪ್ರತಿಷ್ಠಾ ಸೂಚಿ. 'ವಣಿಜ' ವೃತ್ತಿಸೂಚಿ ಆಗಿರಬೇಕೆನಿಸುತ್ತದೆ. ಆಮೇಲೆ ಎರಡೂ ಪದಗಳು ವೃತ್ತಿಸೂಚಿಯಾಗಿ ಪರಿಣಮಿಸಿರಬಹುದು. ಕಾರನ ಸೆಟ್ಟಿ, ಬಣಂಜಿಗ ಎಂಬ ರೂಪಗಳು ಮೂಲತಃ ವೃತ್ತಿವಾಚಿಗಳಾಗಿದ್ದು ಕ್ರಮೇಣ ಜಾತಿಸೂಚಕವಾಗಿ ಬೆಳೆದವು. ಸುಂಕದ ಬಂಕಣ್ಣಗಳ ವಚನದಲ್ಲಿ[43] ಬರುವ ಸರಕು ತುಂಬುವ ಚೀಲದ ವರ್ಣನೆಯಿದೆ.

> "ಸಾಕಾರವೆಂಬ ಚೀಲದಲ್ಲಿ ಪ್ರಕೃತಿ ವಿಕಾರವೆಂಬ
> ಕ್ರಿಯಾ ಧರ್ಮಗಳೆಂಬ ದಾರವ ದಾರದಲ್ಲಿ ಸೇರಿಸಿ
> ಕಟ್ಟಲರಿಯದ ಅಣ್ಣಗಳಿಗೆ ಜಗಸೆಟ್ಟಿತನವೇಕೆ ?"

ಈ ವಚನದ ಆಧಾರದ ಮೇಲೆ ನಾವು ಸೆಟ್ಟಿ ಪದವು ವೃತ್ತಿವಾಚಕ ಎನ್ನಬಹುದು. ಸೆಟ್ಟಿ, ಬಣಂಜಿಗ, 'ವರ್ತಕ'ದ ಸಮಾನಾರ್ಥ ಪದಗಳು. ವ್ಯಾಪಾರ ವೃತ್ತಿಯನ್ನು ಜೀವನೋಪಾಯದ ಸಾಧನವಾಗಿಸಿಕೊಂಡವರು ಬಣಂಜಿಗ ಅಥವಾ ಸೆಟ್ಟಿಯರು.

> ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
> ಹರದ ಕುಳ್ಳಿರ್ದ ನಮ್ಮ ಮಹಾದೇವ ಸೆಟ್ಟಿ
> ಒಮ್ಮನವಾದಡೆ ನುಡಿವನು, ಇಮ್ಮನವಾದಡೆ ನುಡಿಯನು
> ಕಾಣಿಯ ಸೋಲ, ಅರ್ಧಗಾಣಿಯಗೆಲ್ಲ
> ಜಾಣ ನೋಡಪ್ಪ ನಮ್ಮ ಕೂಡಲಸಂಗಮದೇವ.

ಗ್ರೀಕ್ ದೇಶದ ಅರಿಸ್ಟಾಟಲ್‌ರ 'ದೇವರು ಲೆಕ್ಕಾಚಾರಸ್ಥ' ಎಂಬ ನಂಬಿಕೆಯ ಮಾತನ್ನೇ ನಮ್ಮ ದೇಶದಲ್ಲಿ 12ನೆಯ ಶತಮಾನದಲ್ಲಿ ಆಗಿ ಹೋದ ಶರಣ ಬಸವಣ್ಣನವರೂ ತಮ್ಮ ವಚನವೊಂದರಲ್ಲಿ ಈ ಮೇಲಿನಂತೆ ಹೇಳಿದ್ದಾರೆ. ಇಲ್ಲಿ ಸೆಟ್ಟಿ ಪದದ ಬಳಕೆ ವ್ಯಾಪಾರಿಗಳಿಗೆ ಸೀಮಿತವಾಗಿದೆ ಎಂದೆನಿಸದೇ ಇರದು. ಜಾನಪದ ಹಾಡಿನಲ್ಲಿ ಬರುವ 'ಭಾಗ್ಯದ ಬಳೆಗಾರ ಹೋಗಿ ಬಾ ನನ್ನ ತವರೀಗೆ' ಎನ್ನುವಲ್ಲಿ ಬಳೆಗಾರ ಸೆಟ್ಟಿ ಎಂದು ಬಳೆಗಾರರನ್ನು ಸಂಬೋಧಿಸಿದ್ದು ನೋಡಿದರೆ, ಸೆಟ್ಟಿ ಪದವು ವ್ಯಾಪಾರವರ್ಗಕ್ಕೆ ಉಪಯೋಗಿಸುವ ಅನ್ವರ್ಥಕ ಎನ್ನಿಸುವುದು. ಹೀಗೆ ವೃತ್ತಿಗೆ, ವ್ಯಾಪಾರಕ್ಕೆ ಸಂಬಂಧಪಟ್ಟ ವರನ್ನು ಸೆಟ್ಟಿಗಳೆಂದು ಕರೆಯುವರು. ವೃತ್ತಿಗೆ ಮಾನವನ ಇತಿಹಾಸದಷ್ಟು ಪ್ರಾಚಿನತೆಯಿದೆ. ವ್ಯಕ್ತಿಯ ಜೀವನಾಧಾರವೇ ವೃತ್ತಿ, ವೃತ್ತಿಯಿಲ್ಲದೇ ಬಾಳುವುದು ಬದುಕುವುದು ಮನುಷ್ಯನಿಗೆ ಕಷ್ಟಸಾಧ್ಯ. "ಉದ್ಯೋಗಂ ಪುರುಷ ಲಕ್ಷಣಂ' ಎನ್ನುವ ಮಾತು ಈ ಸಂದರ್ಭದಲ್ಲಿ ನೆನಪಾಗದೆ ಇರದು. ಆರಂಭದಲ್ಲಿ ವೃತ್ತಿಗಳು ಆನುವಂಶಿಕವಾಗಿದ್ದವು. ಅಲ್ಲದೆ ಜಾತಿವಾಚಿ, ಧರ್ಮವಾಚಿಗಳಾಗಿರದೇ ವೃತ್ತಿವಾಚಿಗಳೆನಿಸಿದ್ದವು. ಕ್ರಮೇಣ ಇವು ಜಾತಿನಿಷ್ಠ, ಜನಾಂಗನಿಷ್ಠ, ಪ್ರದೇಶನಿಷ್ಠೆಗಳಾಗಿಯೂ ಬೆಳೆದುಬಂದವು. ವ್ಯಾಪಾರವನ್ನು ಮತ್ತು ವ್ಯಾಪಾರವನ್ನೇ ವೃತ್ತಿಯಾಗಿಸಿಕೊಂಡವರು ವರ್ತಕರು. ಭಾರತದಲ್ಲಿ ವೈದಿಕ ಸಾಹಿತ್ಯದಿಂದ ಮೊದಲು ಮಾಡಿ ಇತಿಹಾಸದುದ್ದಕ್ಕೂ ಅನೇಕ ಆಕರಗಳಲ್ಲಿ ಇವರ ಉಲ್ಲೇಖ ಕಂಡುಬರುತ್ತದೆ. ಆದರೆ ಕರ್ನಾಟಕದ ಶಾಸನಗಳಲ್ಲಿ ಮಾತ್ರ ಇವರ ಉಲ್ಲೇಖ 7–8ನೆಯ ಶತಮಾನದಿಂದ ದೊರೆಯುತ್ತದೆ. ವ್ಯಾಪಾರ ಮಾಡುವ ವರ್ಗ ಶೆಟ್ಟಿ ಎಂಬ ನಾಮಧೇಯದಿಂದ ಕರೆಯಲ್ಪಡುತ್ತಿತ್ತು. ಒಂದೇ ಜಾತಿಗೆ ಸೇರಿದ ಒಂದೇ ತರಹ ವೃತ್ತಿಯಿಂದ ಜೀವನ ಮಾಡುವ ಜನರ ಒಂದು ಗೋಷ್ಠಿಯೇ 'ಶ್ರೇಣಿ' ಎಂದು ಅಪಾರ್ಕನ ಯಾಜ್ಞವಲ್ಕ್ಯ ವ್ಯಾಖ್ಯಾನದಲ್ಲಿ ವಿವರಿಸಲಾಗಿದೆ. ವ್ಯಾಪಾರಿಗಳ ಸಮುದಾಯವು ಸಾಮೂಹಿಕವಾಗಿ ನಡೆಸುವ ಚಟುವಟಿಕೆ 'ಶ್ರೇಣಿ' ಎಂದೂ ಕರೆಯಬಹುದಾಗಿದೆ. ವೃತ್ತಿಗಳನ್ನು ಉತ್ಪಾದಕ ವೃತ್ತಿ, ಉತ್ಪಾದಕ ವಿನಿಮಯ ವೃತ್ತಿ ಮತ್ತು ಇತರ ವೃತ್ತಿ ಎಂದು ವರ್ಗೀಕರಿಸಿಕೊಡುವಲ್ಲಿ ಬಿ. ಆರ್. ಹಿರೇಮಠರ ಜಾಣ್ಮೆ ಮೆಚ್ಚುವಂಥದ್ದು, ವಿನಿಮಯ ವರ್ತಕರಲ್ಲಿ ಸೆಟ್ಟಿ, ಬಣಂಜಿಗ, ಸೆಟ್ಟಿಗುತ್ತ, ನಕರ, ಮುಂಮುರಿದಂಡ, ವಡ್ಡವ್ಯವಹಾರಿ, ಗವರಿಗ, ಗಾತ್ರಿಗ, ಸೆಟ್ಟಿಕಾರ, ಹಲರು, ಎಳಮೆ, ಸಾಲಿಕೆ ಬಲ್ಲಾಳುಗಳೆಂಬ ಪ್ರಕಾರಗಳನ್ನು ಗುರುತಿಸುವರು. ಉತ್ಪಾದನೆ, ವಿನಿಮಯ

ಕಾರ್ಯಗಳೆರಡನ್ನೂ ಮಾಡುವ ಕುಂಬಾರ, ಅಕ್ಕಸಾಲಿಗ, ಮಾದಿಗ, ಸಮಗಾರ, ಮೇದಾರ ಮೊದಲಾದವರು ಉತ್ಪಾದಕ ವಿನಿಮಯ ವರ್ತಕರಿದ್ದಾರೆ. ಸರಕನ್ನು ಎತ್ತಿನ ಮೇಲೆ ಹೇರಿಕೊಂಡು ಮತ್ತು ತಲೆಯ ಮೇಲೆ ಹೊತ್ತುಕೊಂಡು ಮಾರುವ ಸೆಟ್ಟಿಯರ ಚಿತ್ರವೊಂದು ಹೀಗಿದೆ.

ಸಾಕಾರವೆಂಬ ಶೆಟ್ಟಿ ಜೀವವೆಂಬ ಎತ್ತಿನ ಮೇಲೆ; ಎತ್ತಿ ಹೊಡೆಯಲಾಗಿ ಬಹುವಿಧ ಚರಿತ್ರದ; ಬೆವಹಾರದ ಒಡೆಯಂಗೆ ಕೊಡಿ; ಕರಣಂಗಳೆಂಬ ಸರಕು ಹೊತ್ತು ಮಾರುವ ಸೆಟ್ಟಿಗಳೆಲ್ಲರೂ ಕೂಡಿ ಬಂಕೇಶ್ವರ ಲಿಂಗಕ್ಕೆ ಸುಂಕವ ಸರಕು ಹೇರುತ್ತಿದ್ದುದರಿಂದ ಇವರು 'ಹೇರುವ ಬಣಂಜಿಗ' 'ಹೇವಸೆಟ್ಟಿ'ಯರೆನಿಸಿದರು. ಹೀಗೆ ಸೆಟ್ಟಿಕುಲವು ನಾನಾರ್ಥಗಳನ್ನು ಹೊಂದಿದೆ.

ಸೆಟ್ಟಿಕಾರರು ಎಂಬ ಪದವು ಸೆಟ್ಟಿ ಎಂಬ ಶಬ್ದದಿಂದ ಹುಟ್ಟಿಕೊಂಡಿದೆ. ಸೆಟ್ಟಿ ಎಂಬ ಪದವು ಹಟ್ಟಿಯಂಗಡಿ ಶಾಸನದಲ್ಲಿ ಕ್ರಿ.ಶ. 9ನೇ ಶತಮಾನದ ಭಾಗದಿಂದ ಅದರ ಮೂಲವನ್ನು ಹೊಂದಿತ್ತು. ಆ ಕಾಲದಿಂದಲೂ ಸೆಟ್ಟಿಸ್ ಶಾಸನಗಳಲ್ಲಿ ಕಾಣಿಸಿಕೊಂಡಿಲ್ಲ, ಆದರೆ ಸಟ್ಟಿಕಾರಗಳಂತೆ ಹೊರಹೊಮ್ಮಿತು. ಅವರು ಶತಮಾನಗಳ ಕಾಲದಲ್ಲಿ ನಗರ ಕೇಂದ್ರಗಳಾದ ಮಂಗಳೂರು, ಉದ್ಯಾವರ, ಬಾರ್ಕೂರು ಮತ್ತು ಬಸ್ರೂರುಗಳಲ್ಲಿ ಕಾಣಿಸಿಕೊಂಡರು. (12ನೇ ಶತಮಾನದಲ್ಲಿ ಮೊದಲ ಬಾರಿಗೆ ಸೆಟ್ಟಿಕಾರ ಪದ ಸ್ಥಾನ ಪಡೆದು ಕೊಂಡಿತು[44] ಅವರು ಕೈಕಿನಿ, ಭಟ್ಕಳ ಮತ್ತು ಸಂಗೀತಪುರ ಮತ್ತು ಗೇರುಸೊಪ್ಪೆಯಿಂದ ಬಂದ ವ್ಯಾಪಾರಿ ಸಂಘಗಳಲ್ಲಿ ಒಂದಾಗಿರುವ ಶಾಸನಗಳಲ್ಲಿ ಕೂಡ ಕಾಣಿಸಿಕೊಂಡರು. ಸ್ಥಳೀಯ ಸರಕುಗಳ ವ್ಯವಹಾರ ಸಂಬಂಧಿಸಿರುವ ಸೆಟ್ಟಿಕಾರ, ಹಾಗೆಯೇ ನಕರ ಎಂದು ಕರೆಯಲ್ಪಡುವ ಅದೇ ತರಹದ ಸಂಘಟನೆಯನ್ನು ಸಮುದ್ರ ವ್ಯಾಪಾರದ ಸಂಪರ್ಕದ ಮೇಲೆ ಸಂಬಂಧಿಸಿದೆ.[45]

**ಹಲರು**: ಬಾರಕೂರು, ಬಸರೂರು, ಕಾರ್ಕಳ, ಮುಡುಬಿದರೆಯ ಹಲರು ಅತ್ಯಂತ ಪ್ರಸಿದ್ದರು[47] 1407ರಲ್ಲಿ ಮಹಾಬಲದೇವ ಒಡೆಯನನ್ನೇ ಗಾಲಿಯಿಂದ ಕೆಳಗಿಳಿಸುವಲ್ಲಿ ಈ ಹಲರು ಪ್ರಮುಖ ಪಾತ್ರ ವಹಿಸಿದ್ದರು ಎಂಬುದನ್ನು ಶಾಸನದಿಂದ ತಿಳಿಯಬಹುದು.[48]

**ಎಳಮೆಗಳು ಅಥವಾ ಎಳಮೆಗೊಳಗಾದವರು:** 3ನೇ ವೀರ ಬಲ್ಲಾಳನ ಆಳ್ವಿಕೆಯ ಕ್ರಿ.ಶ. 1436ಕ್ಕೆ ಬಾರಕೂರಿನ ಶಾಸನದಲ್ಲಿ 150 ಎಳಮೆಗಳು ಮತ್ತು ಕ್ರಿ.ಶ. 1342ಕ್ಕೆ ಸೇರಿದ ಮೂಡುಬಿದರೆಯ ಶಾಸನವೊಂದರಲ್ಲಿ ನಾಲ್ವರು ಎಳಮೆಗಳು ಎಂಬ ಎರಡು ಸಂಘಗಳ ಉಲ್ಲೇಖವಿದೆ. ಮುಂದೆ ಇದುವೆ ವಿಜಯನಗರ ಕಾಲದಲ್ಲಿ ಎಳಮೆಗೊಳಗಾದವರು ಎಂದು ಕರೆಯಲಾಗುತ್ತದೆ. "ಎಳಮೆಗಳು ಆಥವಾ ಎಳಮೆಗೊಳಗಾದವರು ಎಂಬುದು ಒಂದು ಸಂಘದ ಹೆಸರಿದ್ದಿರಬೇಕೆಂದು ಗ್ರಹಿಸಬಹುದಾಗಿದೆ"[49] ಎನ್ನುವ ಕೆ. ವಿ. ರಮೇಶ್ ಅವರ ಗ್ರಹಿಕೆಯಂತೆ ಎಳಮೆ ವರ್ತಕ ಸಂಘವಲ್ಲ, ವರ್ತಕ ಸಮಾಜ ಎಂಬುದನ್ನು ಬಿ.ಆರ್. ಹಿರೇಮಠರವರು ತಿಳಿಸಿದ್ದಾರೆ.[50] ಎಳಮೆಗಳ ಸಂಖ್ಯೆ ಬಾರಕೂರು, ಕಾರ್ಕಳ, ಮುದಿಕೇರಿ, ಮೂಡಬಿದರೆ ಶಾಸನಗಳಲ್ಲಿ ಈ ಪ್ರದೇಶಗಳಲ್ಲಿದ್ದ ಎಳಮೆಗಳ ಒಟ್ಟು ಸಂಖ್ಯೆಯನ್ನು ಪ್ರತಿನಿಧಿಸುತ್ತದೆಯೇ ಹೊರತು ಸಂಘವನ್ನಲ್ಲ ಎಂಬುದನ್ನು ಬಿ. ಆರ್. ಹಿರೇಮಠರವರು ತಿಳಿಸಿದ್ದಾರೆ. ಈ ಸಂಘವು ವಿಜಯನಗರಕಾಲದವರೆಗೂ ಮುಂದುವರೆದಿರಬಹುದು.

**ನಖರ:** ಮಧ್ಯಯುಗೀನ ತುಳುನಾಡಿನಲ್ಲಿ ವ್ಯಾಪಾರ-ವಾಣಿಜ್ಯ ಅಭಿವೃದ್ಧಿಗೊಂಡಿದ್ದು, ಆ ನಾಡಿನ ಪ್ರಧಾನ ವಾಣಿಜ್ಯ ಕೇಂದ್ರಗಳಲ್ಲಿಯ ವರ್ತಕ ಸಂಘಗಳು ಆ ಕಾಲದ ಹಲವು ಶಾಸನಗಳಲ್ಲಿ ಉಲ್ಲೇಖವಾಗಿವೆ. ಅಂತಹ ಸಂಘಗಳೆಂದರೆ, 1. ನಖರ, 2. ಸೆಟ್ಟಿಕಾರ, ಮತ್ತು 3. ಹಂಜಮಾನ. ಇವುಗಳ ಪೈಕಿ 'ನಖರ' ಸಂಘವನ್ನು 'ಸಮಸ್ತ ನಖರ', 'ನಗರ' ಮತ್ತು 'ನಗರ ಸಮೂಹ'ವೆಂದೂ, ಹಂಜಮಾನವನ್ನು 'ನಖರ ಹಂಜಮಾನ'ವೆಂದೂ ಸಹ ಶಾಸನಗಳಲ್ಲಿ ಹೆಸರಿಸಲಾಗಿದೆ. 'ನಖರ' ಶಬ್ದವು ಸಂಸ್ಕೃತ ಭಾಷೆಯ 'ನಗರ' ಶಬ್ದದ ಪರಿವರ್ತಿತ ರೂಪವೆಂಬುದರಲ್ಲಿ ಸಂದೇಹಕ್ಕೆಡೆಯಿಲ್ಲ. ಅಂದ ಮೇಲೆ ತುಳುನಾಡಿನ ಪ್ರಧಾನ ವರ್ತಕ ಪಟ್ಟಣಗಳಲ್ಲಿಯ ವ್ಯಾಪಾರಿಗಳ ಪ್ರಾತಿನಿಧಿಕ ಸಂಘಗಳಿಗೆ 'ನಖರ'ವೆನ್ನುತ್ತಿದ್ದಾರೆಂದು ಗ್ರಹಿಸಬಹುದಾಗಿದೆ. ಬಹುಶಃ 'ನಖರ' ವಿದೇಶಿ ಸರಕುಗಳ ವ್ಯಾಪಾರ ನಡೆಸುತ್ತಿದ್ದ ತುಳುನಾಡಿನ ವರ್ತಕ ಸಂಘವಿದ್ದಿರಬೇಕು. ಅದರಂತೆಯೇ 'ಸೆಟ್ಟಿಕಾರ' ಶಬ್ದವು ಸ್ವದೇಶಿ ಸರಕುಗಳ ಮಾರಾಟ ಮಾಡುತ್ತಿದ್ದ ತುಳುನಾಡಿನ ವ್ಯಾಪಾರಿಗಳ ಸಂಘದ ಹೆಸರಿದ್ದಿರಬೇಕು. ಮಂಗಳೂರು, ಬಾರಕೂರು, ಬಸರೂರು, ಬೈಂದೂರು, ಕಾರ್ಕಳ, ಮೂಡುಬಿದರೆ, ವೇಣೂರು ಮುಂತಾದ ಪ್ರಮುಖ ವಾಣಿಜ್ಯ ಕೇಂದ್ರಗಳಲ್ಲಿಯ ಶಾಸನಗಳಲ್ಲಿ ಆಯಾ ನಗರದ ವರ್ತಕ ಸಂಘಗಳ ಉಲ್ಲೇಖಗಳು ಕಂಡುಬರುತ್ತವೆ.[80]

ನಖರವು ನಗರ, ನಕರ, ಸಮಸ್ತ ನಖರ, ನಗರ ಸಮುಹ ಎಂದೂ ಶಾಸನಗಳಲ್ಲಿ ಉಲ್ಲೇಖವಿದೆ. ಇದು ವ್ಯಾಪಾರಿ ಸಂಘಗಳ ಹೆಸರಾಗಿತ್ತೆಂದು ಕೆ. ವಿ. ರಮೇಶ್ ತಿಳಿಸಿದ್ದಾರೆ. ನಖರ ಶಬ್ದವು ಸಂಸ್ಕೃತ ಭಾಷೆಯ ನಗರ ಶಬ್ದದ ಪರಿವರ್ತಿತ ರೂಪವಾಗಿದೆ. ತಮಿಳುನಾಡಿನ ವರ್ತಕಸಂಘಗಳಿಗೆ ನಗರವೆಂಬ ಹೆಸರಿತ್ತೆಂದು ಅಲ್ಲಿಯ ಶಾಸನಗಳಿಂದ ತಿಳಿಯಬಹುದು.[51] ನಖರದವರು ವಿದೇಶೀ ಸರಕುಗಳ ವಹಿವಾಟು ನಡೆಸುತ್ತಿದ್ದರು. ಈ ನಖರದವರು ತಮ್ಮ ಸಂಘದ ಹೆಸರಿನಲ್ಲಿ ಬಸರೂರಿನಲ್ಲಿ ನಖರೇಶ್ವರ ದೇವಸ್ಥಾನವನ್ನು ಕಟ್ಟಿಸಿದ ದಾಖಲೆ ಕ್ರಿ.ಶ. 1154ರ ಶಾಸನದಲ್ಲಿ ವ್ಯಕ್ತವಾಗಿದೆ. ಪಣಂಬೂರಿನಲ್ಲಿ ಒಂದು ನಖರೇಶ್ವರ ದೇವಸ್ಥಾನ ಕಟ್ಟಿಸಿದ್ದಾರೆ. ಈ ದೇವಾಲಯಗಳಿಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ನಖರೇಶ್ವರದ ಗಣಪತಿಗೆ ಕೊಡಲಾಗಿರುವ ಪ್ರಧಾನ ಸ್ಥಾನವನ್ನು ನೋಡಿದರೆ ವಿನಾಯಕನೆ ನಕರ ಸಂಘಗಳ ಇಷ್ಟದೇವತೆ ಇರಬಹುದೆಂದು ಕೆ. ವಿ. ರಮೇಶ್ ತಿಳಿಸಿದ್ದಾರೆ.[52]

**ಸಾಲಿಕೆ ಬಲ್ಲಾಳುಗಳು:** ತುಳುನಾಡಿನ ವರ್ತಕ ಪ್ರಕಾರದ ಗುಂಪಿಗೆ ಸೇರಿರುವವರು "ಸಾಲಿಕೆ ಬಲ್ಲಾಳುಗಳು" ಇವರು ಅಂಗಡಿ ವರ್ತಕರೆಂದು ಕೆ. ವಿ. ರಮೇಶ್ ತಿಳಿಸಿದ್ದಾರೆ. "ಸಾಲಿಕೆ ಎಂದರೆ ಅಂಗಡಿ ಎಂದರ್ಥ. ಬಲ್ಲಾಳು ಎಂದರೆ ಬಲ್ಲವನು ನಿಪುಣ ಎಂದರ್ಥ". ಹೀಗಾಗಿ ಸಾಲಿಕೆಯ ಬಲ್ಲಾಳುಗಳು ಕೂಡಾ ವರ್ತಕ ಸಂಘದವರೇ ಇದ್ದಿರಬೇಕು ಎಂದಿದ್ದಾರೆ.

**ಹೊರಗಿನವರು:** ಇವರು ಹೊರಗಿನಿಂದ ಸರಕುಗಳನ್ನು ತಂದು ತುಳುನಾಡಿನ ಅಂಗಡಿಗಳಲ್ಲಿ ವ್ಯಾಪಾರ ಮಾಡುವ 'ಹೊರನಾಡಿನ ವರ್ತಕರೆಂದು ಹೇಳಲಾಗಿದೆ. ಇವರ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿರುವುದಿಲ್ಲ[53].

**ಉಭಯ ನಾನಾದೇಶಿಗಳು:** ನಾನಾದೇಶಿ ವರ್ತಕ ಸಂಘವು ದಕ್ಷಿಣ ಭಾರತದಲ್ಲಿ ಪ್ರಮುಖವಾಗಿದೆ. ಉಭಯನಾನಾದೇಶೀ ಸಂಘದವರು ವಿದೇಶಗಳಲ್ಲಿಯೂ ವ್ಯಾಪಾರ ಮಾಡುತ್ತಿದ್ದರು ಎಂದು ಹೇಳಲಾಗಿದೆ. ಉಭಯ ಶಬ್ದವು ಸ್ವದೇಶಿ ಮತ್ತು ವಿದೇಶಿ ವ್ಯಾಪಾರಿಗಳ ಎರಡು ಶಾಖೆಗಳ ಬಗ್ಗೆ ಸೂಚಿಸುತ್ತದೆಯೆಂದು ಕೆ. ವಿ. ರಮೇಶ್ ತಿಳಿಸಿದ್ದಾರೆ.[54] ಉಭಯ ನಾನಾದೇಶಿ ವಿವಿಧ ದೇಶ ಅಥವಾ ಪ್ರದೇಶದ ಸೆಟ್ಟಿ, ಸೆಟ್ಟಿಗುತ್ತ, ನಖರ, ಮುಂಮುರಿದಂಡ, ವಡ್ಡ, ವ್ಯವಹಾರಿ, ಪಟ್ಟಣಸ್ವಾಮಿ, ಹಲರು, ಎಳಮೆ, ಸೆಟ್ಟಿಕಾರ, ಹಂಜಮಾನ, ಗವರೆ, ಗಾತ್ರಿಗ ಮೊದಲಾದ ವರ್ತಕರನ್ನು ಸೂಚಿಸುತ್ತದೆ. ದೇಶವೆಂದರೆ, ಸ್ಥಳ, ಪ್ರದೇಶವೆಂದೂ ಉಭಯವೆಂದರೆ, ಪಾದಮಾರ್ಗ, ಜಲಮಾರ್ಗ, ಮೂಲಕ ವ್ಯಾಪಾರ

ನಡೆಸುತ್ತಿದ್ದರು. ಕೆಲವು ಸಲ ಉಭಯ ನಾನಾದೇಶಿ ಬದಲಾಗಿ ಉಭಯ ಮಾರ್ಗಗಳ ಮೂಲಕ ಉಭಯ ದೇಶೀಯರು ವ್ಯಾಪಾರ ನಡೆಸುತ್ತಿದ್ದಿರಬಹುದು ಎಂಬ ಅಭಿಪ್ರಾಯವನ್ನು ಹಿರೇಮಠರವರು ವ್ಯಕ್ತಪಡಿಸಿದ್ದಾರೆ. ಕ್ರಯ–ವಿಕ್ರಯ ವ್ಯಾಪಾರ ನಡೆಸುತ್ತಾ ನಾಡಿನ ತುಂಬಾ ಓಡಾಡಿದ್ದಾರೆ. ಕೆಲವು ಉಭಯನಾನಾದೇಶಿಗಳು ಜೈನಧರ್ಮದ ಮೂಲಸಂಘಕ್ಕೆ ಸೇರಿದವರಾಗಿದ್ದಾರೆ. ಇವರು ಎಣ್ಣೆ, ಅಡಕೆ, ವೀಳ್ಯದೆಲೆ, ಭತ್ತ, ತೆಂಗು, ಶೇಂಗಾ, ಸೀರೆ ಮತ್ತು ಬೆಲ್ಲ ಮುಂತಾದ ವಸ್ತುಗಳನ್ನು ಸಂತೆಗಳಲ್ಲಿ ಕೊಂಡು ವ್ಯಾಪಾರ ನಡೆಸುತ್ತಿದ್ದರು. ಇವರು ತಮ್ಮ ಆದಾಯದ ಸ್ವಲ್ಪ ಭಾಗವನ್ನು ಧಾರ್ಮಿಕ ಕಾರ್ಯಗಳಿಗೆ ಮತ್ತು ಸಾರ್ವಜನಿಕ ಕಾರ್ಯಗಳಿಗೆ ದಾನ ಮಾಡುತ್ತಿದ್ದರು.[55] ಒಟ್ಟಿನಲ್ಲಿ ಉಭಯ ನಾನಾದೇಶೀಯರ ವ್ಯಾಪಾರ ನಿಷ್ಠೆ, ಸಂಚಾರ, ಸಾಹಸಗಳು ಮಹತ್ವದಾಗಿದೆ. ನಾಡಿನ ವ್ಯಾಪಾರೋದ್ಯಮವನ್ನು ಶ್ರೀಮಂತಗೊಳಿಸಿದವರು. ಆರ್ಥಿಕಾಭಿವೃದ್ಧಿ, ಜೀವನ ಮಟ್ಟವನ್ನು ಸುಧಾರಿಸುವಲ್ಲಿ ಇವರ ಪಾತ್ರ ಗಣನೀಯವಾಗಿದೆ.

**ಹಂಜಮಾನ:** ವರ್ತಕ ಸಂಘಗಳಲ್ಲಿ ಹಂಜಮಾನರು ಕ್ರಿ.ಶ. 14 ಮತ್ತು 15ನೇ ಶತಮಾನದಲ್ಲಿ ತುಳುನಾಡಿನಲ್ಲಿ ವ್ಯಾಪಾರ ಮತ್ತು ಒಕ್ಕಲುತನ ಮಾಡುತ್ತಿದ್ದರು. ಈ ಹಂಜಮಾನ ಸಂಘ, ಕೂಟದ ಅರ್ಥದ ಪರ್ಶಿಯನ್ ಪದ 'ಅಂಜುಮನ್'ದಿಂದ ಹಂಜಮಾನ ಬಂದಿದೆ. ವ್ಯಾಪಾರ ವೃತ್ತಿಯಿಂದ ಭಾರತದ ಕರಾವಳಿಯಲ್ಲಿ ನೆಲೆಸಿದ ಪರ್ಶಿಯಾ ದೇಶದ ವರ್ತಕರ ಠಾಣ್ಯವನ್ನು 'ಹಂಜಮಾನ' ಶಬ್ದ ಸೂಚಿಸುತ್ತಿದೆಯೆಂಬುದು ಬಹುಜನ ವಿದ್ವಾಂಸರ ಒಮ್ಮತದ ಅಭಿಪ್ರಾಯ.[56] ಇನ್ನು 'ಹಂಜಮನ' ಅಥವಾ 'ನಖರ ಹಂಜಮಾನ' ಶಬ್ದವೂ ಅರಬ, ಪರ್ಶಿಯಾ ಮುಂತಾದ ವಿದೇಶಗಳಿಂದ ಸರಕುಗಳನ್ನು ಹಡಗುಗಳ ಮೂಲಕ ತುಳುನಾಡಿಗೆ ಸಾಗಿಸಿ ವ್ಯಾಪಾರ ನಡೆಸುತ್ತಿದ್ದ ವಿದೇಶೀ ವ್ಯಾಪಾರಿಗಳ ಸಂಘವನ್ನು ಗುರುತಿಸುತ್ತದೆ. 'ಹಂಜುಮಾನ' ಶಬ್ದವು ಪರ್ಶಿಯನ್ ಭಾಷೆಯ 'ಅಂಜುಮಾನ್ ಶಬ್ದದ ತದ್ಭವವಿದ್ದು ಅದು ಪಶ್ಚಿಮ ಕರಾವಳಿಯಲ್ಲಿ, 'ಹಂಜುಮಾನ' ಶಬ್ದವು ವಿದೇಶೀ ವರ್ತಕರನ್ನೇ ಸೂಚಿಸುತ್ತದೆ ಯೆಂಬುದಕ್ಕೆ ಕ್ರಿ.ಶ. 1427ರಲ್ಲಿ ಹುಟ್ಟಿದ ಕಾಯ್ಕಿಣಿಯ ಶಾಸನವೊಂದರಲ್ಲಿ ಉಮ್ಮರ ಮರಕ್ಕಾಲನೆಂಬಾತನು 'ಹಂಜಮಾನ ಮುಖ್ಯ'ನಿದ್ದನೆಂದು ಹೇಳಲಾಗಿರುವುದು ಒಂದು ಮುಖ್ಯ ಆಧಾರ. ಏಕೆಂದರೆ ಆ 'ಹಂಜಮಾನ ಮುಖ್ಯ'ನ 'ಉಮ್ಮರ' ಎಂಬ ಹೆಸರು ಪರ್ಶಿಯನ್ನರಲ್ಲಿ ಬಳಕೆಯಲ್ಲಿದ್ದ ಅಂಕಿತನಾಮವಷ್ಟೇ ಅಲ್ಲದೆ ಅವನನ್ನು 'ಮರಕ್ಕಾಲ'ನೆಂದು ಕರೆದಿರುವುದರಿಂದ ಅವನು ಕಡಲು ದಾಟಿ ತುಳುನಾಡಿಗೆ ಬಂದು ನೆಲೆಸಿದ್ದ ವ್ಯಾಪಾರಿಯೆಂದೂ ಆಗುತ್ತದೆ.

ಹಂಜಮಾನದವರು ಸ್ವಂತ ಭೂಮಿಯನ್ನು ಹೊಂದಿ ಒಕ್ಕಲುತನವನ್ನು ಮಾಡುತ್ತಿದ್ದರು ಕೆಲವು ಸಮಯದಲ್ಲಿ ತಮ್ಮ ಮೇಲೆ ವಿಧಿಸಿದ ತೆರಿಗೆಯನ್ನು ಸಾಮ್ರಾಜ್ಯದ ಬೊಕ್ಕಸಕ್ಕೆ ಕೊಡಲು ಅಸಮರ್ಥರಗಿ ಬೆಳೆಗಳನ್ನು ಅಧಿಕಾರಿಗಳಿಗೆ ಒಪ್ಪಿಸಿದ ಪ್ರಸಂಗ ಬಸರೂರು ಶಾಸನದಲ್ಲಿದೆ.[57] ಇವರು ಪರ್ಷಿಯಾದೇಶದ ವರ್ತಕರ ಸಂಘವಾಗಿದೆ. ಹಂಜಮಾನ ಶಬ್ದವು ಪರ್ಷಿಯನ್ ಪದವಾದ 'ಅಂಜಮಾನ್'ದಿಂದ ಬಂದಿದೆ. ವ್ಯಾಪಾರದ ಉದ್ದೇಶದಿಂದ ಪರ್ಶಿಯಾ ದೇಶದಿಂದ ಭಾರತಕ್ಕೆ ಬಂದು ಅದರಲ್ಲಿಯೂ 14ನೇ ಶತಮಾನದಲ್ಲಿ ತುಳುನಾಡಿಗೆ ಬಂದು ನೆಲೆಸಿದ ಪರ್ಷಿಯನ್ ವರ್ತಕರ ಸಂಘ ಹಂಜಮಾನ ಸದಸ್ಯರ ಹೆಸರು ಹಂಜಮಾನದವರು ಆಗಿದ್ದಾರೆ. ನಂತರದಲ್ಲಿ ಪ್ರಮುಖ ಪಟ್ಟಣಗಳಲ್ಲಿ ಇಂಥ ಸಂಘಗಳು ರಚನೆಗೊಂಡವು. ಇವುಗಳಲ್ಲಿ ಬಸರೂರು, ಹಂಜಮಾನ, ಹೊನ್ನಾವರ ಹಂಜಮಾನ, ಬಾರಕೂರು ಹಂಜಮಾನ, ಮಂಗಳೂರು ಹಂಜಮಾನಗಳನ್ನು ನೋಡಬಹುದು. ಹೊನ್ನಾವರದಲ್ಲಿ ಹಂಜಮಾನ ಮುಖ್ಯಸ್ಥ ಉಮ್ಮರಮರಕಾಲನೆಂಬ ವಿಷಯವನ್ನು ಕೈಕಿಣಿ (ಈಗಿನ ಉತ್ತರಕನ್ನಡ ಜಿಲ್ಲೆ) ಗ್ರಾಮದಲ್ಲಿ ದೊರೆತಿರುವ ಶಾಸನದಿಂದ (ಕ್ರಿ.ಶ.1427) ತಿಳಿಯಬಹುದಾಗಿದೆ. ಇವರ ಮೇಲೆ ವಿಧಿಸಿದ ತೆರಿಗೆಯು ಸಾಮ್ರಾಜ್ಯದ ಬೊಕ್ಕಸಕ್ಕೆ ಸೇರುತ್ತಿತ್ತು. ತೆರಿಗೆಯು ಹಣದ ರೂಪದಲ್ಲಿರುತ್ತಿತ್ತು ಇಲ್ಲವೆ ಬೆಳೆಗಳ ರೋಪದಲ್ಲಿಯೂ ಕೂಡಾ ಅಧಿಕಾರಿಗಳಿಗೆ ಒಪ್ಪಿಸುತ್ತಿದ್ದರು. ಇದಕ್ಕೆ ಸಾಕ್ಷಿ ಎಂಬಂತೆ ಬಸರೂರು ಶಾಸನದಲ್ಲಿದೆ.[58] ಇದರಿಂದಾಗಿ ಹಂಜಮಾನ ವರ್ತಕ ಸಂಘದವರು ತುಳುನಾಡಿನಲ್ಲಿ ಸ್ವಂತ ಭೂಮಿಯನ್ನು ಹೊಂದಿದ್ದಾರೆಂಬುದು ಇದರಿಂದ ತಿಳಿಯಬಹುದಾಗಿದೆ. ಇದರಲ್ಲಿ ವ್ಯವಸಾಯವನ್ನು ಮಾಡುತ್ತಿದ್ದರು.[59] ನಂತರದಲ್ಲಿ ತಿಮ್ಮಣ್ಣ ಒಡೆಯನೊಂದಿಗೆ ಹೊನ್ನಾವರದ ಹಂಜಮಾನ ಮುಖ್ಯಸ್ಥ ಉಮ್ಮರಮರಕಾಲನು ವಿರೋಧ ಕಟ್ಟಿಕೊಂಡು ತೊಂದರೆ ಅನುಭವಿಸಿದ ಸಂಗತಿಯನ್ನು ಕೈಕಿಣಿ ಶಾಸನದಲ್ಲಿ ವ್ಯಕ್ತವಾಗಿದೆ[60] ಹಂಜಮಾನ ವರ್ತಕ ಸಂಘ ತುಳುನಾಡಿನಲ್ಲಿ 14 ಮತ್ತು 15 ನೇ ಶತಮಾನದಲ್ಲಿ ವ್ಯಾಪಾರ ವ್ಯವಹಾರ ಮತ್ತು ಒಕ್ಕಲುತನ ಮಾಡುತ್ತಿದ್ದರು. ಹಂಜಮಾನರ ಪ್ರಾಬಲ್ಯವನ್ನು ಸುಮಾರು 16ನೆಯ ಶತಮಾನದವರೆಗೂ ಅಂದರೆ ಪೋರ್ಚುಗೀಸರ ಆಗಮನದ ವರೆಗೂ ಕಾಣಬಹುದು ಆನಂತರದಲ್ಲಿ ಕ್ರಮೇಣ ಗತಿಯಲ್ಲಿ ಹಂಜಮಾನರು ತಮ್ಮ ವರ್ಚಸ್ಸನ್ನು ಕಳೆದುಕೊಂಡರು.

ಈ ಅಂಗಡಿಗಳು ಸಗಟು ವ್ಯಾಪಾರದ ಮಳಿಗೆಗಳಿರಬೇಕು. ದೇಶೀಯ ಮತ್ತು ವಿದೇಶೀಯ ವರ್ತಕರು ತಮಗೆ ಬೇಕಾದ ವಸ್ತುಗಳನ್ನು ಇಲ್ಲಿಂದ ಕೊಳ್ಳುತ್ತಿದ್ದರು. ತುಳುನಾಡಿನಲ್ಲಿ ಇಂತಹ 'ಅಂಗಡಿ' ಎಂಬ ಉಪನಾಮವುಳ್ಳ ಅನೇಕ ಸ್ಥಳಗಳಿರುವುದು ಕಂಡುಬರುತ್ತದೆ. ಉದಾ: ಬೆಳ್ತಂಗಡಿ, ಉಪ್ಪಿನಂಗಡಿ, ಹೊಸಂಗಡಿ, ಅಳದಂಗಡಿ, ಹಳೆಯಂಗಡಿ ಇತ್ಯಾದಿ. ವರ್ತಕರುಗಳು ರಾಜಧಾನಿಗಳು ಬದಲಾದಂತೆ ಮತ್ತು ವಿವಿಧ ಬಂದರುಗಳಲ್ಲಿ ವಿದೇಶಿ ವಾಣಿಜ್ಯದ ಪ್ರಮಾಣ ಏರಿಳಿದಂತೆ ಹಾಗೂ ವಾಣಿಜ್ಯ ಸಂಪರ್ಕ ವ್ಯವಸ್ಥೆ ಬದಲಾಯಿಸಿದಂತೆ ತಮ್ಮ ಸಂಘದ ಕೇಂದ್ರ ಸ್ಥಳವನ್ನು ಬದಲಾಯಿಸಿಕೊಳ್ಳುತ್ತಿದ್ದರು. ಉದಾ: ಐನೂರ್ವರ ಸಂಘ ಐಹೊಳೆಯಿಂದ ಬಳ್ಳಿಗಾಮೆಗೂ ನಂತರ ದ್ವಾರಾವತಿಗೂ (ಹಳೇಬೀಡು) ಹಾಗೂ ಮುಂದೆ ಕುರುಗೋಡಿಗೂ ಬದಲಾಯಿತು. ವಿವಿಧ ವೃತ್ತಿ ಸಂಘಗಳ ನಡುವೆ ದೇಶೀಯ ಮತ್ತು ವಿದೇಶೀಯ ವಾಣಿಜ್ಯದ ಬಗ್ಗೆ ಹಾಗೂ ಮಾರುಕಟ್ಟೆಗಳಲ್ಲಿ ಮಾರುವ ಬಗ್ಗೆ ಒಪ್ಪಂದಗಳಾಗುತ್ತಿದ್ದುದು ತಿಳಿದುಬರುತ್ತದೆ. ವಾಣಿಜ್ಯ ಪ್ರಧಾನ ಪಟ್ಟಣಗಳಲ್ಲಿ ಈ ಬಗೆಯ ಒಪ್ಪಂದಗಳು ರಾಜನ ಅಥವಾ ಪ್ರಾಂತಾಧಿಕಾರಿಯ ಒಪ್ಪಿಗೆಯ ಮೇರೆಗೆ ಆಗುತ್ತಿದ್ದುದುಂಟು. ರೋಮನ್ ಯುಗದಲ್ಲೂ ಕೇಳಿಬರುವ ತುಳುನಾಡಿನ ಬಾರಕೂರು ಮತ್ತು ಬಸರೂರುಗಳಲ್ಲಿ ಹೊಯ್ಸಳರ ಕಾಲದಲ್ಲಿ ಪ್ರಮುಖ ವಾಣಿಜ್ಯ ಕೇಂದ್ರಗಳಾಗಿದ್ದವು. ಅವುಗಳ ಮಹತ್ವ ವಿಜಯನಗರ ಕಾಲಕ್ಕೂ ಮುಂದುವರಿಯಿತು. ಬಾರಕೂರಿನ 1430ರ ಶಾಸನದಲ್ಲಿ ಕಂಡುಬರುವ ವಾಣಿಜ್ಯ ಒಪ್ಪಂದವನ್ನು ವೆಂಕಟರತ್ನಂರವರು ಹೀಗೆ ವಿಶ್ಲೇಷಿಸಿದ್ದಾರೆ. "ಬಾರಕೂರಿನ ಮೂರುಕೇರಿ ಮತ್ತು ಚೌಳಿಕೇರಿ ವ್ಯಾಪಾರ ಸಮುದಾಯಗಳ ಒಂದು ಒಪ್ಪಂದವನ್ನು ದಾಖಲೆ ಮಾಡಿದೆ. ಅಲ್ಲದೆ ಹೊರಗಿನ ವರ್ತಕರಿಗೆ (ಪರದೇಶಿ) ಒಂದು ನಿರ್ದಿಷ್ಟ ಸ್ಥಳವನ್ನು ಮೀಸಲಾಗಿಟ್ಟಿರಬೇಕೆಂದು ಒಂದು ಷರತ್ತು ಅದರಲ್ಲಿದೆ. ಈ ಸ್ಥಳದಲ್ಲಿ ಘಟ್ಟದ ಮೇಲಿನಿಂದ ತಂದ ಸಕ್ಕರೆ ಮೂಟೆಗಳನ್ನು ದಾಸ್ತಾನು ಮಾಡುತ್ತಿದ್ದರು. ಈ ಶಾಸನಗಳಲ್ಲಿ ಮಣಿಗಾರಕೇರಿ, ಹತ್ತುಕೇರಿ, ಕೋಟಿಕೇರಿ ಮೂವತ್ತು ಪಡುವಕೇರಿಗಳಿಗೆ ಸೂಚನೆಗಳಿವೆ. ಪ್ರತಿ ಕೇರಿಯಲ್ಲೂ 'ಸೆಟ್ಟಿಕಾರ' 'ನಖರ' ಮತ್ತು 'ನಖರ ಹಂಜಮಾನ' ಎಂದು ಕರೆಯಲ್ಪಡುತ್ತಿದ್ದ ಶ್ರೇಣಿ ಇದ್ದಿತು."[61] ಆದ್ದರಿಂದ ವಿದೇಶಿ ವಾಣಿಜ್ಯ ವ್ಯವಹಾರ ತುಳುನಾಡಿನಲ್ಲಿ ವ್ಯವಸ್ಥಿತವಾಗಿ ನಡೆಯುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ.

ಸ್ಥಳೀಯ ಸಂಘಗಳಲ್ಲಿನ ಸಂಘದ ಸಂವಿಧಾನ ಮತ್ತು ಕೆಲಸವು ಸ್ಥಳದಿಂದ ಸ್ಥಳಕ್ಕೆ ಮತ್ತು ಕಾಲಕಾಲಕ್ಕೆ ಭಿನ್ನವಾಗಿರಬೇಕು. ಬಾರಕೂರಿನಲ್ಲಿ ಪ್ರತಿ ಗಿಲ್ಡ್ ಸಂಸ್ಥೆಯು ತನ್ನದೇ ಆದ

ನಾಯಕರನ್ನು ಹೊಂದಿದ್ದು, ಸಂಸ್ಥೆಗಳ ಕಾರ್ಯಚಟುವಟಿಕೆಯ ಮೇಲೆ ಕೆಲವು ನಿಯಂತ್ರಣವನ್ನು ಹೊಂದಿದ್ದವು ಮತ್ತು ಸರಕಾರಗಳೊಂದಿಗೆ ವ್ಯವಹರಿಸುವಾಗ ಅದರ ಮಾನ್ಯತೆ ಪಡೆದ ಪ್ರತಿನಿಧಿಗಳಾಗಿ ಕಾರ್ಯನಿರ್ವಹಿಸಿತು.[62] ಆದ್ದರಿಂದ ಬಾರ್ಕೂರು ವ್ಯಾಪಾರದೊಂದಿಗೆ ಬಂದರು ಪಟ್ಟಣವಾಗಿದ್ದು, ಒಳನಾಡಿನ ಮತ್ತು ವಿದೇಶಿ ಎರಡೂ ದೂರದ ಪ್ರದೇಶಗಳಿಂದ ವ್ಯಾಪಾರಿಗಳನ್ನು ಆಕರ್ಷಿಸಿತು. ಸ್ಥಳೀಯರ ಜೊತೆಗೆ ವ್ಯಾಪಾರಿಗಳು ಕೆಲಸ ಮಾಡಿದರು ಮತ್ತು ವ್ಯಾಪಾರದಲ್ಲಿ ತಮ್ಮ ಆಸಕ್ತಿಯನ್ನು ಕಾಪಾಡಿಕೊಂಡರು. ಅವರು ಕೆಲವು ದೇವರನ್ನು ಅಥವಾ ಇತರರಿಗೆ ದೇವಾಲಯಗಳನ್ನು ನಿರ್ಮಿಸಿದರು. ಮತ್ತು ಸರ್ಕಾರದ ಆರ್ಥಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಪಾಲ್ಗೊಂಡರು.[63] ಆ ಮೂಲಕ ಅವರು ರಾಜಧಾನಿಯಲ್ಲಿ ದಿನನಿತ್ಯದ ಜೀವನದಲ್ಲಿ ಪ್ರಾಮುಖ್ಯ ಪಡೆದರು. ಅವುಗಳ ವರ್ಗಾವಣೆಯ ಚಟುವಟಿಕೆಗಳು ಈ ವ್ಯಾಪಾರಿಗಳ ಆರ್ಥಿಕ ಸ್ವಭಾವವನ್ನು ಸೂಚಿಸುತ್ತದೆ. ಬಾರ್ಕೂರಿನ ಶಿಲಾಶಾಸನಗಳಲ್ಲಿ ಈ ವ್ಯಾಪಾರಿಗಳ ಪ್ರತಿಯೊಂದು ಉಲ್ಲೇಖದ ವಿವರಗಳನ್ನು ನಾವು ವಿವರವಾಗಿ ಪರೀಕ್ಷಿಸಿದರೆ, ಮೆಟ್ರೋಪಾಲಿಟನ್ ನಗರದ ಆರ್ಥಿಕ ಜೀವನದಲ್ಲಿ ಮತ್ತು ಅವರ ಕೆಲಸದ ವ್ಯವಸ್ಥೆಯಲ್ಲಿ ಅವರು ವಹಿಸಿದ ಪಾತ್ರವು ಹೆಚ್ಚು ಸ್ಪಷ್ಟವಾಗುತ್ತದೆ.

ಕರ್ನಾಟಕದ ಪಾಶ್ಚಿಮಾತ್ಯ ವ್ಯಾಪಾರಿಗಳು ಭಾರತದ ಉತ್ತರ ಭಾಗಗಳಲ್ಲಿರುವಂತೆ ಸ್ಪರ್ಧಾತ್ಮಕ ಜಗತ್ತಿನಲ್ಲಿ ವಾಸಿಸುತ್ತಿದ್ದರು. ಆದರೆ ಸಾಮಾಜಿಕ ಸಂಪರ್ಕಕ್ಕೆ ಅವರು ಪ್ರಮುಖ ಮಿತಿಗಳನ್ನು ಸ್ವೀಕರಿಸಿದರು. ಅದೇ ಕುಟುಂಬದ ಗುಂಪಿನಿಂದ ಸಾಂದರ್ಭಿಕ ವ್ಯಾಪಾರಿ ಪಾಲುದಾರರೊಂದಿಗೆ ವ್ಯವಹಾರವನ್ನು ಕುಟುಂಬದ ಸುತ್ತ ಆಯೋಜಿಸಲಾಯಿತು. 16ನೇ ಶತಮಾನಕ್ಕೆ ಮುಂಚಿತವಾಗಿ ಬಣಜಿಗಳು ಮತ್ತು ಮುಸ್ಲಿಂ ಸಮುದಾಯಗಳು ಕರಾವಳಿ ಪ್ರದೇಶದಲ್ಲಿ ವ್ಯಾಪಾರ ಮಾಡುತ್ತಿದ್ದರು. ಉದಾಹರಣೆಗೆ, ಪೋರ್ಚುಗೀಸ್ ಆಗಮನದ ಮುಂಚೆ ಬಸ್ರೂರು ಬಂದರಿನಲ್ಲಿನ ನಿವಾಸಿಗಳು ಅಕ್ಕಿ ವ್ಯಾಪಾರವನ್ನು ನಿಯಂತ್ರಿಸುತ್ತಿದ್ದರು. ಅವರು ಶ್ರೀಮಂತರು ಮತ್ತು ಕೃಷಿ ಉತ್ಪನ್ನಗಳ ಸಮೃದ್ಧ ವ್ಯಾಪಾರವನ್ನು ಹೊಂದಿದ್ದರು. ಮುಸ್ಲಿಮರು ಕಾಸರಗೋಡು, ಮಂಗಳೂರು, ಹೊನ್ನಾವರ, ಮಿರ್ಜಾನ್ ಮತ್ತು ಗೋವಾ ಬಂದರುಗಳಲ್ಲಿ ವಿವಿಧ ಬಗೆಯ ಅಕ್ಕಿ, ಮೆಣಸು, ತೆಂಗಿನಕಾಯಿ, ಕಬ್ಬು ಮುಂತಾದ ಕೃಷಿ ಉತ್ಪನ್ನಗಳ ಶ್ರೀಮಂತ ವ್ಯಾಪಾರಿಗಳಾಗಿದ್ದರು.[64] ವಿದೇಶೀ ವರ್ತಕರು ಹಡಗುಗಳನ್ನು ನಿರ್ವಹಿಸುತ್ತಿದ್ದರು ಮತ್ತು ಒಳನಾಡಿನ ವ್ಯಾಪಾರದಲ್ಲಿ ಪಾಲ್ಗೊಂಡಿದ್ದರು. ವಿವಿಧ ಸಮುದಾಯಗಳ ಇತರ ವ್ಯಾಪಾರಿಗಳು ಸರಕುಗಳಿಗಾಗಿ ಈ ಹಡುಗುಗಳಲ್ಲಿ ಸ್ಥಳಾವಕಾಶವನ್ನು

ಪಡೆದುಕೊಳ್ಳುವುದರ ಜೊತೆಗೆ ಮತ್ತು ಅವರ ಸರಕುಗಳೊಂದಿಗೆ ಪ್ರಯಾಣಿಸಬಹುದಾಗಿತ್ತು. ಮಲಬಾರ್ ಕರಾವಳಿಯಲ್ಲಿ ಮುಸ್ಲಿಂ ವ್ಯಾಪಾರಿಗಳು ಪ್ರಾಯೋಗಿಕವಾಗಿ ಎಲ್ಲಾ ಹಡಗುಗಳನ್ನು ನಿಯಂತ್ರಿಸಿದರು. ಅವರು ಕೆಳಜಾತಿಯ ಇತರ ಹಿಂದೂ ಗುಂಪುಗಳನ್ನು ನೌಕಾಪಡೆಗಳಾಗಿ ಅಥವಾ ಒರ್ಸ್ಮೆನ್ನಗಳಾಗಿ ನೇಮಿಸಿದರು. ಹೀಗಾಗಿ ಹಿಂದೂಗಳು ಮತ್ತು ಮುಸ್ಲಿಂರು ನಿಕಟ ವ್ಯವಹಾರ ಸಂಬಂಧಗಳಲ್ಲಿ ಒಗ್ಗೂಡಿದರು.[65] ಒಬ್ಬರ ಸಮುದಾಯದೊಳಗೆ ವ್ಯವಹಾರವನ್ನು ಸೀಮಿತಗೊಳಿಸುವುದು ಮುಖ್ಯ ಪ್ರವೃತ್ತಿಯಾಗಿದೆ. ಕರ್ನಾಟಕದ ಬಂದರುಗಳಲ್ಲಿ ಚೀನಿಯರು ಮತ್ತು ಅರಬ್ಬರು ಮುಖ್ಯ ವಿದೇಶೀ ವ್ಯಾಪಾರಿಗಳಾಗಿದ್ದರು. ಕೃಷಿ ಸರಕುಗಳ ವ್ಯಾಪಾರಕ್ಕೆ ಮಂಗಳೂರು, ಹೊನ್ನಾವರ ಬಂದರುಗಳ ಭೇಟಿ ಆದಾಗ್ಯೂ, ಪೋರ್ಚುಗೀಸ್, ಆಗಮನದಿಂದ 16ನೇ ಶತಮಾನದ ಆರಂಭದಲ್ಲಿ ವ್ಯಾಪಾರ ಚಟುವಟಿಕೆಗಳಿಗೆ, ಒಂದು ಹೊಸ ನಾಂದಿಯಾಯಿತು. ಅವರು ಬಂದರುಗಳಲ್ಲಿ ಅಕ್ಕಿ, ಮೆಣಸು, ಮತ್ತು ಇತರ ಉತ್ಪನ್ನಗಳ ವ್ಯಾಪಾರವನ್ನು ಏಕಸ್ವಾಮ್ಯದ ಉದ್ದೇಶದಿಂದ ಹೊಸ ವಿಧಾನವನ್ನು ಅಳವಡಿಸಿ ಕೊಳ್ಳಲು ಪ್ರಯತ್ನಿಸಿದರು. ಪೋರ್ಚುಗೀಸರ ಈ ಕ್ರಿಯೆಯು ಸ್ಥಳೀಯ ವ್ಯಾಪಾರಿಗಳಿಗೆ ವಿರೋಧವನ್ನು ಉಂಟುಮಾಡಿತು. ಉದಾಹರಣೆಗೆ, 1502 ಮತ್ತು 1570ರಲ್ಲಿ ಬಂಟ್ವಾಳ, ಹೊನ್ನಾವರ ಮತ್ತು ಗೇರುಸೊಪ್ಪದಲ್ಲಿ ಅಕ್ಕಿ ಮತ್ತು ಮೆಣಸುಗಳ ಏಕಸ್ವಾಮ್ಯ ವ್ಯಾಪಾರವನ್ನು ಪೋರ್ಚುಗೀಸರ ಪ್ರಯತ್ನದಿಂದಾಗಿ ಸ್ಥಳೀಯ ವ್ಯಾಪಾರಿಗಳ ವಿಕೋಪಕ್ಕೆ ಕಾರಣವಾಯಿತು. 1525ರಲ್ಲಿ ಪೋರ್ಚುಗೀಸರು ಮಂಗಳೂರಿನಲ್ಲಿ ವ್ಯಾಪಾರ ಮಾಡುತ್ತಿದ್ದ ಮಲಬಾರಿಗಳ ಒಡೆತನದ ಹಡಗುಗಳನ್ನು ನಾಶಪಡಿಸಿದರು. ಅದೇ ರೀತಿ ಪೋರ್ಚುಗೀಸ್ ಹಡಗುಗಳು ಬಸ್ರೂರಿಗೆ ಬಂದಾಗ, ಬಸ್ರೂರಿನ ಸೆಟ್ಟಿಗಳು ಅವರಿಗೆ 'ಅಡಚಣೆಯನ್ನು ಸೃಷ್ಟಿಸಿದರು. ಏಕೆಂದರೆ, ಬಸರೂರಿನ ಸೆಟ್ಟಿಗಳು ಪೋರ್ಚುಗೀಸರ ಕಾರಣದಿಂದಾಗಿ ಹೆಚ್ಚಿನ ಸಮುದ್ರ ವ್ಯಾಪಾರವನ್ನು ಕಳೆದುಕೊಂಡರು. ಪೋರ್ಚುಗೀಸರಿಗೆ ಬದಲಾಗಿ ಮಲಬಾರಿ ವ್ಯಾಪಾರಿಗಳಿಗೆ ಅಕ್ಕಿ, ಸರಬರಾಜು ಮಾಡುವುದರಲ್ಲಿ ಸೆಟ್ಟಿಗಳು ಸಂತೋಷವನ್ನು ಪಡೆದರು.[66]

ತುಳುನಾಡಿನಲ್ಲಿ ವ್ಯಾಪಾರಿ ವರ್ಗಗಳ ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳನ್ನು ಇಲ್ಲಿ ಉಲ್ಲೇಖಿಸುವುದು ಅಗತ್ಯ. ಇಲ್ಲಿ ಕೆಲವು 18 ಜಾತಿಗಳನ್ನು ವ್ಯಾಪಾರಿಗಳಾಗಿ ಉಲ್ಲೇಖಿಸುತ್ತದೆ.[67] ಅವರು ಬಾಳಿಗ, ಬಣಜಿಗ, ಬನಿಯಾ, ಬೊರ, ಚೆಟ್ಟಿ, ಗೊಪ್ತಿ, ಗುಜ್ಜರ, ಕಾವಕ್ಕಿ ಕೊಜ, ಕೊಮ್ಟಿ, ಲಾಬ್ಬೈ, ಮಣಿಶಂಕರ, ಮಾಪಿಳ್ಳಾ ಅಥವಾ ಮೊಪ್ಲಾ ಮೆಮನ್ ನವಾಯುತರು, ನಿಮಿಸ್ಕಾರ, ವೈಶ್ಯ ಮತ್ತುವಣಿ, ಮೇಲಿನ ಬಾಳಿಗ ಮತ್ತು ಬಣಜಿಗ ಕರ್ನಾಟಕ ಮೂಲದವರು

ಗೋವಾದಿಂದ ವಲಸೆ ಬಂದ ಕೊಂಕಣಿಗರು ಪಶ್ಚಿಮ ಕರಾವಳಿಯಲ್ಲಿ ತುಳುನಾಡಿನಲ್ಲಿ ವ್ಯಾಪಾರಕ್ಕೆ ಇಳಿದರು. ನಗರ ಕೇಂದ್ರಗಳಲ್ಲಿ ಮಾತ್ರವಲ್ಲದೇ ಗ್ರಾಮೀಣ ಪ್ರದೇಶಗಳಲ್ಲಿ ಕೂಡಾ ಕೊಂಕಣಿಗಳು ತಮ್ಮನ್ನು ವ್ಯಾಪಾರದಲ್ಲಿ ತೊಡಗಿಸಿಕೊಂಡರು. ವ್ಯಾಪಾರಿಗಳ ಸಮುದಾಯವನ್ನು ಫ್ರಾನ್ಸಿಸ್ ಬುಕಾನನ್ ಹೀಗೆ ಬರೆದಿದ್ದಾರೆ. "ಕೊಂಕಣಿಗಳು ಪ್ರವರ್ಧಮಾನಕ್ಕೆ ಬರುತ್ತಿದ್ದಾರೆ ಮತ್ತು ಬುಕಾನನ್ ಕೂಡ ಇವರ ಕೆಲವು ಮದುವೆಯ ಮೆರವಣಿಗೆಗಳನ್ನು ಹಾದುಹೋಗಿದ್ದಾರೆ. ಅದರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಉತ್ತಮ ಉಡುಪುಗಳನ್ನು ಧರಿಸಿರುವ ಜನರು ಮತ್ತು ತುಂಬಾ ಸುಂದರವಾದ ಹುಡುಗಿಯರು ಭಾಗವಹಿಸಿದ್ದರು".[68]

ಕೊಂಕಣಿಗಳು ಮಂಜೇಶ್ವರ, ಕಾಸರಗೋಡು, ಮಂಗಳೂರು, ಬಂಟ್ವಾಳ, ಕಾರ್ಕಳ, ಪುತ್ತೂರು ಮತ್ತು ಪಾಣಿ ಮಂಗಳೂರಿನಲ್ಲಿ ನೆಲೆಸಿದ್ದರು.[69] ಅವರು ಸಂಪೂರ್ಣ ಮಾರಾಟ ವಿತರಕರು ಮತ್ತು ಚಿಲ್ಲರೆ ವ್ಯಾಪಾರದ ಕೀಪರ್‌ಗಳೆರಡರಲ್ಲೂ ವ್ಯಾಪಾರಗಳನ್ನು ನಡೆಸಿದರು. ಎರಡೂ ಸಾಮರ್ಥ್ಯಗಳಲ್ಲಿ ಅವರು ಪ್ರವರ್ಧಮಾನಕ್ಕೆ ಬಂದರು ಮತ್ತು ಅವರ ಆರ್ಥಿಕ ಸ್ಥಿರತೆಯು ಸಮಾಜದಲ್ಲಿ ನಿರ್ದಿಷ್ಟ ಸ್ಥಾನಮಾನವನ್ನು ನೀಡಿತು. ಮಾಪಿಲ್ಲಾಗಳು ಅಥವಾ ಮಾಪ್ಲಾಗಳು ಸಹ ತುಳುನಾಡಿನಲ್ಲಿ ಒಂದು ವ್ಯಾಪಾರಿ ವರ್ಗವಾಗಿದೆ. ಅವರು ಹೆಚ್ಚಾಗಿ ಮಂಗಳೂರು ಮತ್ತು ಕಾಸರಗೋಡು ಪ್ರದೇಶಗಳಲ್ಲಿ ಕೇಂದ್ರೀಕೃತರಾಗಿದ್ದರು. ಇವರು ಗ್ರಾಮೀಣ ಪ್ರದೇಶದ ಉತ್ಪಾದಕರು ಮತ್ತು ನಗರ ಪ್ರದೇಶಗಳಲ್ಲಿನ ಸಗಟು ವ್ಯಾಪಾರಿಗಳ ನಡುವೆ ಸಂಪರ್ಕ ಹೊಂದಿದ್ದರು.[70] 12ನೇ ಶತಮಾನದಿಂದ ದೊಡ್ಡ ಸಂಖ್ಯೆಯ ಮಾಪಿಳ್ಳಾಗಳು ಕೃಷಿ ಚಟುವಟಿಕೆಯಲ್ಲಿ ತೊಡಗಿದರು. ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಪ್ರಮುಖ ಜಮೀನುದಾರರಾಗಿ ಹೊರಹೊಮ್ಮಿದರು.[71] ಇತರೆ ವ್ಯಾಪಾರಿ ವರ್ಗಗಳು ತುಳುನಾಡಿನಲ್ಲಿ ನೆಲೆಗೊಂಡಿದ್ದವು. ಆದಾಗ್ಯೂ ಬನಿಯಾ, ನವಾಯತ್ ಮತ್ತು ಲಾಬೈ ವರ್ಗಗಳಿಗೆ ಸೇರಿದ ಕೆಲವು ವ್ಯಾಪಾರಿಗಳು ತುಳುನಾಡಿನಲ್ಲಿ ಶಾಶ್ವತವಾಗಿ ನೆಲೆಸಿದ್ದರು. ಕೃಷಿಕರಿಗೆ ಹೋಲಿಸಿದರೆ, ವ್ಯಾಪಾರಿಗಳು ಮತ್ತು ಮಧ್ಯವರ್ತಿಗಳು ಉತ್ತಮವಾಗಿದ್ದಾರೆ. ಅವರ ಆರ್ಥಿಕ ಸ್ಥಿತಿ ಅವರಿಗೆ ಉನ್ನತ ಸಾಮಾಜಿಕ ಸ್ಥಾನಮಾನ ನೀಡಿತು. ವ್ಯಾಪಾರಿಗಳಿಗೆ ಮತ್ತು ಮಧ್ಯವರ್ತಿಗಳಿಗೆ ನೀಡಲಾದ ಸಾಮಾಜಿಕ ಆರ್ಥಿಕ ಸ್ಥಿತಿ, ಶೈಕ್ಷಣಿಕ ಸಂಸ್ಥೆಗಳ ಉಸ್ತುವಾರಿ ಆಸ್ಪತ್ರೆಗಳನ್ನು ಒದಗಿಸುವುದು ಮತ್ತು ಗ್ರಾಮೀಣಪ್ರದೇಶಗಳಲ್ಲಿ ಉದ್ಯಮಗಳನ್ನು ಸ್ಥಾಪಿಸುವುದು ಮುಂತಾದ ಹಲವಾರು ಪರೋಪಕಾರಿ ಕೆಲಸಗಳನ್ನು ಕೈಗೊಳ್ಳಲು ಪ್ರೇರೇಪಿಸಿತು.

**ವಿದೇಶೀ ವ್ಯಾಪಾರಿಗಳು:** ಮಂಗಳೂರಿನ ವ್ಯಾಪಾರಿ ಕೇಂದ್ರದಲ್ಲಿ ವ್ಯಾಪಾರ ಮಾಡುವ ವಿದೇಶಿ ವ್ಯಾಪಾರಿಗಳ ಪೈಕಿ ಅರೇಬಿಯನ್ ಪರ್ಷಿಯನ್ ಮತ್ತು ಯೂರೋಪಿಯನ್ ವ್ಯಾಪಾರಿಗಳು,[72] ಪರ್ಷಿಯನ್ ವ್ಯಾಪಾರಿಗಳು, ತುಳುನಾಡಿಗೆ ಅಕ್ಕಿ ವ್ಯಾಪಾರಕ್ಕಾಗಿ ಬಂದರು. ಅರಬ್ ಹಡಗುಗಳು, ಅರೇಬಿಯಾ ಮತ್ತು ಬಂಗಾಳದ ನಡುವಿನ ವ್ಯಾಪಾರಕ್ಕೆಂದು ಮಂಗಳೂರು ತಲುಪಲು ಹಡಗನ್ನು ಬಳಸಿದವು ಮತ್ತು ಬಂಗಾಳದಿಂದ ಖರೀದಿಸಿದ ರೇಷ್ಮೆ ತುಂಡು ಸರಕುಗಳ ಒಂದು ಭಾಗವನ್ನು ವಿಲೇವಾರಿ ಮಾಡಲು ಅವರು ಮಂಗಳೂರು ಬಂದರಿನಲ್ಲಿ ಇಳಿದರು.[73] ಅರಬ್ ವ್ಯಾಪಾರಿಗಳು ಮಂಗಳೂರಿನಲ್ಲಿ ಯೂರೋಪಿಯನ್ ವ್ಯಾಪಾರಿಗಳ ಆಗಮನದವರೆಗೂ ಮುಕ್ತವಾಗಿ ವ್ಯಾಪಾರ ಮಾಡಿದರು. ಪೋರ್ಚುಗೀಸ್ ಮತ್ತು ಫ್ರೆಂಚ್ ವ್ಯಾಪಾರಿಗಳು ಮೈಸೂರು ಆಡಳಿತಗಾರರಿಗೆ ನಿಷ್ಠರಾಗಿ ಉಳಿದಿದ್ದರು.

ಟಿಪ್ಪು ಸುಲ್ತಾನನ ಮರಣಾನಂತರ ಅರಬ್ ವ್ಯಾಪಾರಿಗಳು ತಮ್ಮ ಪ್ರಭಾವವನ್ನು ಕಳೆದುಕೊಂಡರು. ಅರಬ್ಬೀ ವ್ಯಾಪಾರದಿಂದ ಐರೋಪ್ಯ ವ್ಯಾಪಾರಕ್ಕೆ ಸ್ಥಳಾಂತರಗೊಂಡು, ವಸಾಹತುವಿನ ಕಾಲದಲ್ಲಿ ಅರೇಬಿಯನ್ ವ್ಯಾಪಾರಿಗಳ ವ್ಯಾಪಾರಕ್ಕೆ ಹಿನ್ನಡೆಯಾಗಿತ್ತು. ಆದಾಗ್ಯೂ, ಬ್ರಿಟಿಷ್ ಅವಧಿಯಲ್ಲಿ ಸಹ ಸಮುದ್ರ ವ್ಯಾಪಾರದಲ್ಲಿ ಅರೇಬಿಯನ್ನರು ಪ್ರಮುಖ ಪಾತ್ರ ವಹಿಸಿದರು. ಇಂಗ್ಲೀಷ್ ಸಂಸ್ಥೆಗಳು ಮತ್ತು ಕ್ರಿಶ್ಚಿಯನ್ ಸಮುದಾಯದವರು ಈ ಅವಧಿಯಲ್ಲಿ ವಾಣಿಜ್ಯದಲ್ಲಿ ಭಾಗಿಯಾದರು.[74] ಕ್ರೈಸ್ತ ವ್ಯಾಪಾರಿಗಳು ಒಳನಾಡು ಮತ್ತು ಸಾಗರೋತ್ತರ ವ್ಯಾಪಾರದಲ್ಲಿ ಪ್ರಾಬಲ್ಯ ಮುಂದುವರೆಸಿದರು. ಅವರು ವಿದೇಶಿ ವ್ಯಾಪಾರದಲ್ಲಿ ತಮ್ಮ ಪಾಲನ್ನು ಹೆಚ್ಚಿಸುವುದರ ಮುಲಕ ಸ್ಥಳೀಯ ಸಮುದಾಯಗಳಿಗೆ ಮತ್ತು ಅರಬ್ಬರು ಹಾಗೂ ಪರ್ಷಿಯನ್ ವ್ಯಾಪಾರಿಗಳಿಗೆ ಪ್ರಬಲ ವ್ಯಾಪಾರ ಪ್ರತಿಸ್ಪರ್ಧಿಗಳಾಗಿ ಹೊರ ಹೊಮ್ಮುತ್ತಿದ್ದರು. ತುಳುನಾಡಿನ ಸಾಗರ ವ್ಯಾಪಾರದಲ್ಲಿ ಕ್ರೈಸ್ತ ವ್ಯಾಪಾರಿಗಳ ಸ್ಥಿರವಾದ ಪ್ರಾಬಲ್ಯವು ಬೆಳೆಯುತ್ತಿರುವ ಸ್ಪರ್ಧೆ ಮತ್ತು ವ್ಯಾಪಾರದ ಪೈಪೋಟಿಯನ್ನು ಸಮುದಾಯ ದೊಳಗೆ ಮಾತ್ರವಲ್ಲದೇ ಇತರ ಸ್ಥಳೀಯ ವ್ಯಾಪಾರಿ ಗುಂಪುಗಳ ನಡುವೆ ಕ್ರಿಶ್ಚಿಯನ್ ವ್ಯಾಪಾರಿಗಳ ವಿರುದ್ಧ ಅಸೂಯೆ ಸೃಷ್ಟಿಸಿತು.[75] ತುಳುನಾಡಿನ ವಾಣಿಜ್ಯ ಸಮುದಾಯಗಳ ವೈವಿಧ್ಯಮಯ ಪಾತ್ರದ ಉಪಸ್ಥಿತಿಯು, ಎಲ್ಲಾ ವಿಭಾಗಗಳಿಂದ ಜನರನ್ನು ಬಲವಂತಪಡಿಸಿತು. ಮತ್ತು ಸಮಾಜದ ಶ್ರೇಣಿಯನ್ನು ವ್ಯಾಪಾರಕ್ಕೆ ತೆಗೆದುಕೊಳ್ಳಲು ಪ್ರಾರಂಭಿಸಿತು. ಸಾಮಾಜಿಕವಾಗಿ, ವಿಭಿನ್ನ ಜಾತಿಗಳಿಗೆ ಸೇರಿದ ವ್ಯಾಪಾರಿಗಳು ಪರಸ್ಪರ ವಿವಾಹವನ್ನು ನಿಷೇಧಿಸುವ ಮೂಲಕ ತಮ್ಮ ವೈಯಕ್ತಿಕ ಗುರುತನ್ನು ಕಾಪಾಡಿಕೊಂಡಿದ್ದರು. ಆದರೆ ಅವರು

ಆರ್ಥಿಕ ಗುರಿಗಳಿಗೆ ಒಟ್ಟಾಗಿ ಕೆಲಸಮಾಡುವಂತೆ ತೋರುವ ನಿರಾಶ್ರಿತ ಸಮುದಾಯವನ್ನು ರಚಿಸಿದರು. ಇದರಿಂದಾಗಿ ವ್ಯಾಪಾರದ ಸಮುದಾಯವು ಜಾತಿ ಪರಿಕಲ್ಪನೆಯ ಮೇಲೆ ಸಂಪತ್ತಿನ ಆರಾಧನೆಯು ಕತ್ತರಿಸಿತು.[76]

ಸಣ್ಣ ವ್ಯಾಪಾರಿಗಳು ಮತ್ತು ಉತ್ಪಾದಕರು ಮತ್ತು ವಾಣಿಜ್ಯ ವಹಿವಾಟಿನಿಂದ ಅಥವಾ ಸ್ಥಳೀಯ ಮಟ್ಟದಲ್ಲಿ ವಿನಿಮಯ ಮಾಡಿಕೊಳ್ಳುವುದು ಗ್ರಾಮೀಣ ಮತ್ತು ನಗರ ವ್ಯಾಪಾರ ಸಂಬಂಧಗಳ ಒಂದು ಪ್ರಮುಖ ಭಾಗವಾಗಿ ರೂಪುಗೊಂಡಿತು. ಬಹುತೇಕ ಎಲ್ಲಾ ವಿಧಾನಗಳೊಂದಿಗೆ ಸಂಬಂಧ ಹೊಂದಿದ್ದ ವಿಭಿನ್ನ ವ್ಯಾಪಾರ ಸಮುದಾಯಗಳ ಪೈಕಿ ಮತ್ತು ಉತ್ಪಾದನೆ ಹಾಗೂ ವಿತರಣೆಯ ಏಜೆನ್ಸಿಗಳು ಕೆಲವು ರೀತಿಯ ಆರ್ಥಿಕ ಸಂಪರ್ಕ ಮತ್ತು ಸಮೀಕರಣವು ಸ್ವಾಭಾವಿಕವಾಗಿತ್ತು. ವರ್ತಕರು ಸಾಮಾನ್ಯವಾಗಿ ಜಾತಿಗಿಂತ ಹೆಚ್ಚಾಗಿ ತಮ್ಮ ವೃತ್ತಿಗಳು ಅಥವಾ ಪ್ರದೇಶಗಳಿಂದ ಗುರುತಿಸಲ್ಪಡುತ್ತಾರೆ. ಯೂರೋಪಿಯನ್ ದಾಖಲೆಗಳು ಹೇಳುವುದಾದರೆ, ವ್ಯಾಪಾರಿ ಸಮುದಾಯಗಳು ಪರಸ್ಪರರಲ್ಲಿ ಭಿನ್ನವಾಗಿರುತ್ತವೆ. ಒಂದೇ ಪಟ್ಟಣದಲ್ಲಿ ಒಂದೇ ಕಟ್ಟಡದಲ್ಲಿ ಅವರು ಒಟ್ಟಾಗಿ ವಾಸಿಸುತ್ತಾರೆ. ಯೂರೋಪಿಯನ್ನರ ಸಂಬಂಧ ಈ ವರ್ಗಗಳ ನಡುವೆ ಸಾಮಾಜಿಕ ಸಂಪರ್ಕಕ್ಕಿಂತ ಹೆಚ್ಚಾಗಿ ಆರ್ಥಿಕತೆಯದಾಗಿತ್ತು ಎಂಬುದನ್ನು ಗಮನದಲ್ಲಿಟ್ಟುಕೊಂಡಿದ್ದರು. ಮತ್ತು ಅವರ ಹೇಳಿಕೆಗಳು ವ್ಯಾಪಾರ ವರ್ಗಗಳ ಸಾಮಾಜಿಕ ಸ್ಥಾನಮಾನಗಳನ್ನು ಪ್ರತಿಬಿಂಬಿಸುವಂತಿಲ್ಲ ಎಂದು ತೋರುತ್ತದೆ. ಆದಾಗ್ಯೂ ತುಳುನಾಡಿನ ವ್ಯಾಪಾರವು ಯಾವುದೇ ನಿರ್ದಿಷ್ಟ ಜಾತಿಯ ಸಂರಕ್ಷಣೆಯಾಗಿರಲಿಲ್ಲ. ಮತ್ತು ಇಚ್ಛೆಯನ್ನು ಹೊಂದಿದ ಯಾರನ್ನಾದರೂ ಕೌಶಲ್ಯ ಮತ್ತು ಉದ್ಯಮವನ್ನು ಅನುಸರಿಸ ಬಹುದೆಂಬುದು ಸ್ಪಷ್ಟವಾಯಿತು. ಆದರೂ ನಿಧಾನವಾಗಿ ಮತ್ತು ಕ್ರಮೇಣವಾಗಿ ತೊಡಗಿ ಕೊಂಡವರು ಜಾತಿಯೊಂದಿಗೆ ಗುರುತಿಸಲ್ಪಟ್ಟರು. ಮುಸ್ಲಿಮರು, ಕೊಂಕಣಿಗಳು ಮತ್ತು ಗುಜರಾತಿಗಳೊಂದಿಗೆ ಬಂಟ್ಸ್ ಸಹ ವಸಾಹತು ಆಡಳಿತದ ಆರಂಭಿಕ ಅವಧಿಗಳಲ್ಲಿ ವಾಣಿಜ್ಯವನ್ನು ಪ್ರಾರಂಭಿಸಿದರು.[77]

ಇತರ ಸಮುದಾಯಗಳು ಕೂಡಾ ಅವರ ವೃತ್ತಿಯಾಗಿ ವ್ಯಾಪಾರ ಮಾಡಲು ಅಸಂಬದ್ಧವೆಂದು ತೋರಿಸಿದರು. ಕೇವಲ ಭೂಮಿ ಹಾಗೇ ತನ್ನ ಜಾತಿ ಅಥವಾ ವರ್ಗವಲ್ಲದ ವ್ಯಕ್ತಿಯ ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುವಲ್ಲಿ ವ್ಯಾಪಾರವು ಪ್ರಮುಖ ಪಾತ್ರ ವಹಿಸಿದೆ. ಇದು ವ್ಯಾಪಾರಿ ಬಂಡವಾಳದ ಉಗಮದ ಅವಧಿಯಾಗಿತ್ತು. ಇದು

ಊಳಿಗಮಾನದಿಂದ ಬಂಡವಾಳಶಾಹಿ ಉತ್ಪಾದನಾ ವಿಧಾನಕ್ಕೆ ಪರಿವರ್ತನೆಯ ಹಂತವಾಗಿ ಕಾರ್ಯನಿರ್ವಹಿಸಿತು. ತುಳುನಾಡಿನಲ್ಲಿನ ವಾಣಿಜ್ಯ ಚಟುವಟಿಕೆಗಳು ಶ್ರೀಮಂತ ಮತ್ತು ಪ್ರಭಾವಶಾಲಿ ವರ್ತಕರು ಮತ್ತು ವ್ಯಾಪಾರಿ ಸಂಘಗಳ ಹುಟ್ಟಿಗೆ ಕಾರಣವಾದವು. ಇದು ಪ್ರದೇಶದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಪ್ರಾಬಲ್ಯ ಸಾಧಿಸಿತು. ವಿಜಯನಗರದ ಅವಧಿಯಲ್ಲಿ ಅಭಿವೃದ್ಧಿ ಹೊಂದಿದ ಸಂಘಗಳು ಮತ್ತು ಸಂಘಟನೆಯೊಂದಿಗೆ ಮಂಗಳೂರು ಮಹೋನ್ನತ ವ್ಯಾಪಾರ ಕೇಂದ್ರವಾಗಿ ಬೆಳೆಯಿತು. ವ್ಯಾಪಾರದ ಸಂಘಗಳ ಮೂಲಕ ವ್ಯಾಪಾರ ಚಟುವಟಿಕೆಗಳ ಸಾಂಸ್ಥಿಕ ನಿಬಂಧನೆಗಳು ಈ ಅವಧಿಯಲ್ಲಿನ ವ್ಯಾಪಾರದ ಕಾರ್ಯವಿಧಾನದ ಒಂದು ಪ್ರಮುಖ ಲಕ್ಷಣವಾಗಿದೆ. ಹಂಜುಮಾನ, ಸೆಟ್ಟಿಕಾರ, ನಖರ ಅಥವಾ ನಗರ, ಬಲಂಜುಗಳು ಅಥವಾ ಬಣಜಿಗರು ನಾನಾದೇಸಿ, ಮತ್ತು ಗವರೆಗಳು ವ್ಯಾಪಾರಿ ಚಟುವಟಿಕೆಗಳನ್ನು ನಿಯಂತ್ರಿಸುತ್ತಿದ್ದ ವ್ಯಾಪಾರ ಸಂಘಗಳು.[78] ಈ ಗುಂಪುಗಳು ಸ್ಥಳೀಯ ಆಡಳಿತಗಾರರ ಸ್ಥಿತಿಯನ್ನು ಸಹ ಪಡೆದುಕೊಂಡವು. ಹಂಜುಮಾನರು ಅಥವಾ ನಗರ ಹಂಜುಮಾನರು ಅವರು ಪಶ್ಚಿಮ ಕರಾವಳಿಯಲ್ಲಿ ನೆಲೆಸಿರುವ ಪರ್ಷಿಯನ್ ಮುಸ್ಲಿಮರ ವ್ಯಾಪಾರ ಸಂಘವಾಗಿದ್ದು, ಆಡಳಿತಗಾರರಿಂದ ಅವರಿಗೆ ವಿಶೇಷವಾದ ಸೌಲಭ್ಯಗಳನ್ನು ನೀಡಿದರು.[79] ವ್ಯಾಪಾರಿಗಳು ವ್ಯಾಪಾರದಿಂದ ಗಳಿಸಿದ ಹಣವನ್ನು ಸತ್ಕಾರ್ಯ, ಸದ್ಧರ್ಮಗಳಿಗಾಗಿ ವಿನಿಯೋಗಿಸಿದ್ದಾರೆ. ಇವರು ಹಲವಾರು ದೇವಾಲಯಗಳನ್ನು ಕಟ್ಟಿಸಿದ್ದಾರೆ. ಗ್ರಾಮಗಳಲ್ಲಿ ಲೇವಾದೇವಿ ವ್ಯವಹಾರವನ್ನು ಮಾಡುತ್ತಿದ್ದರು. ವೈದಿಕ, ಜೈನ, ಶೈವ ಮತದ ವರ್ತಕರು ಮತ, ವರ್ಗ, ವರ್ಣ, ವಯಸ್ಸುಗಳ ತಾರತಮ್ಯವಿಲ್ಲದೆ ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ದೇವಾಲಯ, ದೀಪಮಾಲೆಕಂಬ, ಮಂಟಪ, ಸುಕನಾಶಿ, ಮಠ, ಅನ್ನಛತ್ರ, ಕೆರೆ ನಿರ್ಮಾಣ, ಜೀರ್ಣೋದ್ಧಾರಗಳನ್ನೂ ಸ್ವಪರ ಶ್ರೇಯೋಭಿವೃದ್ಧಿಗಾಗಿ ವಿಗ್ರಹ, ಲಿಂಗಗಳ ಪ್ರತಿಷ್ಠಾಪನೆಯನ್ನು ದೇವಾಲಯಗಳ ವಿವಿಧ ಕಾರ್ಯಗಳಿಗೆ ನೂರಾರು ಸಂಖ್ಯೆಯ ದಾನಗಳನ್ನೂ ಮಾಡಿರುವುದು ಆದರ್ಶನೀಯ.

ಕ್ರಿ.ಶ. 14ನೆಯ ಶತಮಾನದ ಮಧ್ಯ ಭಾಗದಲ್ಲಿ ತುಳುನಾಡು ಮೊದಲು (ಕ್ರಿ.ಶ. 1333ರಿಂದ 1348ರ ವರೆಗೆ) ಹೊಯ್ಸಳರ ಮತ್ತು ಅನಂತರ (ಕ್ರಿ.ಶ. 1345ರಿಂದ) ವಿಜಯನಗರ ಸಾಮ್ರಾಜ್ಯದವರ ಕೈಸೇರಿತು. ಕ್ರಿ.ಶ. 14–16ನೆಯ ಶತಮಾನಗಳಿಗೆ ಸಂಬಂಧಿಸಿದಂತೆ ತುಳುನಾಡಿನುದ್ದಕ್ಕೂ ನೂರಾರು ಸಂಖ್ಯೆಯಲ್ಲಿ ದೊರೆತಿರುವ ಶಾಸನಗಳಲ್ಲಿ ಸಾಮಾನ್ಯ ಪ್ರಜೆಗಳ, ಒಕ್ಕಲಿಗರ, ವರ್ತಕರ ಮತ್ತು ಯೋಧ ವರ್ಗದವರ ಅನೇಕ ಸಂಘ

ಸಂಸ್ಥೆಗಳ ಬಗೆಗೆ ಉಕ್ತವಾಗಿರುತ್ತದೆ. ಮಧ್ಯಯುಗದಂತೆಯೆ 'ನಾಡು', 'ಊರು', ಗ್ರಾಮ' ಮುಂತಾದ ಸಂಘಗಳೂ 60 ಒಕ್ಕಲು, 70 ಒಕ್ಕಲು, ಜಗತ್ತು, ಜನನಿ ಮುಂತಾದ ವ್ಯವಸಾಯಕಾರರ ಒಕ್ಕೂಟಗಳೂ ಆ ಕಾಲದ ಶಾಸನಗಳಲ್ಲೂ ಉಕ್ತವಾಗಿವೆ. ಅಲ್ಲದೆ ಮೂಡುಬಿದರೆಯ ನಾಲ್ವರು, ಮೂರುಕೇರಿಯ 150, ಹತ್ತು ಕೇರಿಯ 770 ಮತ್ತು ವೇಣೂರಿನ 364 ಮಂದಿ 'ಎಳಮೆಗಳು' ಅಥವಾ ಎಳಮೆಗೊಳಗಾದವರು' ಎಂಬ ಸಂಘದ ಪ್ರಸ್ತಾಪವೂ ಅಂದಿನ ಶಾಸನಗಳಲ್ಲಿ ಕಂಡುಬರುತ್ತದೆ.[80]

ವಿಜಯನಗರ ಕಾಲದಲ್ಲಿ ತುಳುನಾಡಿನ ಸ್ವದೇಶಿ ಮತ್ತು ವಿದೇಶೀ ವ್ಯಾಪಾರವು ಅಭೂತಪೂರ್ವ ಪ್ರಮಾಣದಲ್ಲಿ ಬೆಳೆಯಿತು. ವರ್ತಕರ ಸಂಖ್ಯೆಯಷ್ಟೇ ಅಲ್ಲದೆ ಅವರ ಸಂಪತ್ತೂ ಸಾಮಾಜಿಕ ಸ್ಥಾನಮಾನಗಳೂ ಬಹಳಷ್ಟು ಹೆಚ್ಚಿದವು. ವಿಜಯನಗರ ಕಾಲದಲ್ಲಿ ಹುಟ್ಟಿದ ಶಾಸನಗಳಲ್ಲಿ ಹೆಚ್ಚಿನವಲ್ಲಿ ನಖರ, ಸೆಟ್ಟಿಕಾರ ಸಂಘಗಳು ಅಸ್ಥಿತ್ವದಲ್ಲಿದ್ದವು. ಮೂಡುಬಿದರೆ ಮತ್ತು ವೇಣೂರಿನ ಸೆಟ್ಟಿಕಾರ ಸಂಘಗಳಲ್ಲಿ ಅನುಕ್ರಮವಾಗಿ ಎಂಟು ಮತ್ತು ಹದಿನಾರು ಸದಸ್ಯರುಗಳಿದ್ದರು.

ತುಳುನಾಡಿನಲ್ಲಿ ವಾಣಿಜ್ಯ ಚಟುವಟಿಕೆಗಳು ಮಧ್ಯಕಾಲೀನ ಅವಧಿಯಲ್ಲಿ ಸೆಟ್ಟಿಕಾರರು, ಬಣಜಿಗ ಅಥವಾ ಬಲಂಜುಗಳು, ನಾನಾದೇಸಿ ಗವರೆಗಳು, ನಖರ ಮತ್ತು ಹಂಜುಮಾನ ರಂಥ ಸಮುದಾಯಗಳಿಂದ ನಡೆಸಲಾಯಿತು.[81] ಈ ವ್ಯಾಪಾರಿಗಳು ತಮ್ಮದೇ ಆದ ಸಂಘಗಳನ್ನು ಆಯೋಜಿಸಿದ್ದಾರೆ. ಮತ್ತು ಆಂತರಿಕ ಮತ್ತು ಬಾಹ್ಯ ವ್ಯಾಪಾರ ಎರಡೂ ತಮ್ಮ ನಿಯಂತ್ರಣದಲ್ಲಿದೆ. ಈ ಸೆಟ್ಟಿಕಾರರು ಮಂಗಳೂರು ಮತ್ತು ಮಲಬಾರ್‌ನಲ್ಲಿ ಅತ್ಯಮೂಲ್ಯವಾದ ಕಲ್ಲು, ಮುತ್ತುಗಳು, ಹವಳಗಳು, ಚಿನ್ನ ಮತ್ತು ಬೆಳ್ಳಿಯೊಂದಿಗೆ ವ್ಯವಹರಿಸಿದ್ದಾರೆ.[82] ಸೆಟ್ಟಿಗಳು ಬೆಲೆಗಳ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಿದ್ದರು ಮತ್ತು ಅವರು ಯಾವುದೇ ವಸ್ತುಗಳಲ್ಲಿ ಅವುಗಳ ಬೆಲೆಯನ್ನು ಹೆಚ್ಚಿಸಬಹುದು ಅಥವಾ ಕಡಿಮೆ ಮಾಡಬಹುದು. ಅವರು ಶ್ರೀಮಂತರು ಮತ್ತು ಗೌರವಾನ್ವಿತರಾಗಿದ್ದರು ಮತ್ತು ಅವರು ಆರಾಮದಾಯಕ ಜೀವನವನ್ನು ನಡೆಸಿದರು. ಸೆಟ್ಟಿಗಳ ವರ್ತನೆಯನ್ನು ವೀಕ್ಷಿಸಿದ ಬಾರ್ಬೋಸಾ, ಕೆಲವು ಸರಕುಗಳ ಸಂಚಾರ ದಟ್ಟಣೆಯಲ್ಲೂ ಬಹಳ ಕುತಂತ್ರದ್ದಾಗಿದೆ.[83] ವೃತ್ತಿಪರ ವ್ಯಾಪಾರ ಸಮುದಾಯಗಳಿಂದ ಹೊರತುಪಡಿಸಿ, ಬ್ರಾಹ್ಮಣ ಸಹ ವ್ಯಾಪಾರ ಮತ್ತು ವಾಣಿಜ್ಯವನ್ನು ತೆಗೆದುಕೊಳ್ಳುತ್ತಿದ್ದಾರೆ ಎಂದು ತಿಳಿಯಬಹುದು. ಬ್ರಾಹ್ಮಣ ವ್ಯಾಪಾರಿಗಳ ಬಗ್ಗೆ ಬರೆಯುತ್ತಾ ನ್ಯೂನಿಜ್ "ಅವರು

ಪ್ರಾಮಾಣಿಕ ಪುರುಷರು, ತೀರ ತೀಕ್ಷ್ಣ ಮತ್ತು ಹೆಚ್ಚು ಪ್ರತಿಭೆಯುಳ್ಳವರು, ಒಳ್ಳೆಯ ಲೆಕ್ಕಿಗರು ಆದರೆ ಕಷ್ಟದ ಕೆಲಸದಿಂದ ಸ್ವಲ್ಪ ದೂರವಿರುತ್ತಿದ್ದರೆಂದು ಎಂದು ಹೇಳಿದ್ದಾರೆ".[84] ಈ ಅವಧಿಯಲ್ಲಿ ಅನೇಕ ಗುಜರಾತಿ ಬನಿಯಾಗಳು ತುಳುನಾಡಿನ ವ್ಯಾಪಾರಿ ಕೇಂದ್ರಗಳಲ್ಲಿ ಅಲ್ಲದೆ ನೆರೆಯ ಕೊಚ್ಚಿನ್, ಕಣ್ಣನೂರು ಹಾಗೂ ಕ್ಯಾಲಿಕಟ್‌ಗಳಲ್ಲಿ ಕೂಡ ಬಂದು ನೆಲೆಸಿದರು. "ಅವರು ಅನೇಕ ದೇಶಗಳಿಂದ ಪ್ರತಿಯೊಂದು ರೀತಿಯ ಸರಕುಗಳನ್ನು" ವ್ಯಾಪಾರ ಮಾಡಿದರು.[85]

ಅರಬ್ಬರು, ಪರ್ಷಿಯನ್ನರು ಮತ್ತು ಡೆಖನ್ನಿಗಳು ಮುಂತಾದ ವಿದೇಶೀ ವ್ಯಾಪಾರಿಗಳು ತಮ್ಮ ಕುಟುಂಬಗಳೊಂದಿಗೆ ಕರಾವಳಿ ಪ್ರದೇಶದಲ್ಲಿ ನೆಲೆಸಿದರು.[86] ಅವರು ವಿವಿಧ ಸರಕುಗಳನ್ನು ವ್ಯಾಪಾರ ಮಾಡಿ ಬೇರೆಬೇರೆ ದೇಶಗಳಿಗೆ ಸಾಗಿಸಿದರು. ಈ ವಿದೇಶಿ ವ್ಯಾಪಾರಿ ಗಳನ್ನು ಪರದೇಶಿಯರು (ವಿದೇಶಿಯರು) ಎಂದು ಕರೆಯಲಾಗುತ್ತಿತ್ತು. ತುಳುನಾಡಿನಲ್ಲಿ ನಡೆಯುತ್ತಿರುವ ವಾಣಿಜ್ಯ ಚಟುವಟಿಕೆಗಳಲ್ಲಿ ತೊಡಗಿರುವ ಪೋರ್ಚುಗೀಸರು, ಡಚ್ಚರು ಮತ್ತು ಇಂಗ್ಲಿಷರು ಈ ಪರದೇಶಿಗಳ ಜೊತೆಗೆ ಇದ್ದರು. ಹೀಗೆ ಈ ವಿವಿಧ ವ್ಯಾಪಾರಿ ಸಮುದಾಯಗಳು ತುಳುನಾಡಿನಲ್ಲಿ ವ್ಯಾಪಾರ ಮತ್ತು ವಾಣಿಜ್ಯಕ್ಕಾಗಿ ಬಲವಾದ ನೆಲೆಯನ್ನು ನಿರ್ಮಿಸಿದರು. ಈ ಪ್ರದೇಶದ ಪ್ರವರ್ಧಮಾನದ ವ್ಯಾಪಾರ ಮತ್ತು ವಾಣಿಜ್ಯವು ಅನೇಕ ವಿದೇಶೀ ಶಕ್ತಿಗಳ ಗಮನವನ್ನು ಸೆಳೆಯಿತು. ಮತ್ತು ತುಳುನಾಡಿನಲ್ಲಿ ಪೋರ್ಚುಗೀಸರು ಮತ್ತು ಬ್ರಿಟಿಷರ ನಡುವಿನ ವ್ಯಾಪಾರದ ಉಳಿವಿನ ಪ್ರಾಬಲ್ಯಕ್ಕಾಗಿ ಸ್ಪರ್ಧೆ ನಡೆಸಿತ್ತು. 11ನೇ ಶತಮಾನದ ನಂತರ ಹಂಜಮಾನ ಎಂದು ಕರೆಯಲ್ಪಡುವ ಮುಸ್ಲಿಂ ವ್ಯಾಪಾರಿಗಳ ಸಂಘವು ಕೆಳಗಿಳಿಯಿತು. ಅವರು ಮುಖ್ಯವಾಗಿ ಅರೇಬಿಯಾ, ಮಸ್ಕತ್, ಆಫ್ರಿಕಾ, ಮತ್ತು ಮಲಬಾರಿ ನೊಂದಿಗೆ ಆಂತರಿಕ ಮತ್ತು ಬಾಹ್ಯ ವ್ಯಾಪಾರ ವಹಿವಾಟುಗಳಲ್ಲಿ ತೊಡಗಿಸಿಕೊಂಡರು.[87]

10ನೇ ಶತಮಾನದವರೆಗೆ ವರ್ತಕ ಸಂಘಗಳು, ಆಡಳಿತ ವರ್ಗದವರು ದೇವಾಲಯ ಗಳಿಗೆ ಮತ್ತು ಬ್ರಾಹ್ಮಣರಿಗೆ ದಾನ ಮಾಡುವ ಸಂದರ್ಭದಲ್ಲಿ ಸಾಕ್ಷಿಗಳಾಗಿ ಹಾಗೂ ಆ ವಸ್ತುಗಳನ್ನು ಕಾಪಾಡುವ ಜವಾಬ್ದಾರಿಯನ್ನು ಹೊಂದಿದ್ದವು. ಆದರೆ ವರ್ತಕ ಸಂಘಗಳು ಈ ಸಮಯದಲ್ಲಿ ಎಲ್ಲಿಯೂ ದೇವಸ್ಥಾನಗಳಿಗೆ ದಾನ ಮಾಡಿದ ಉಲ್ಲೇಖ ಕಂಡುಬರುವುದಿಲ್ಲ. ಆದರೆ ನಂತರದ ಕಾಲದಲ್ಲಿ ವರ್ತಕ ಸಂಘಗಳು ಬೇರೆಯವರು ನೀಡಿದ ದಾನದ ರಕ್ಷಣೆಯ ಜೊತೆಗೆ ತಮ್ಮ ವ್ಯಾಪಾರದಿಂದ ಬಂದಂತಹ ಲಾಭದ ಒಂದು ಭಾಗವನ್ನು ದೇವಸ್ಥಾನಗಳಿಗೆ

ದಾನ ಮಾಡುವುದರ ಜೊತೆಗೆ ಅವುಗಳ ಸಂರಕ್ಷಣೆಯ ಜವಾಬ್ದಾರಿಯನ್ನು ತೆಗೆದು ಕೊಳ್ಳುತ್ತಾರೆ. ಕ್ರಿ.ಶ. 12ನೇ ಶತಮಾನದ ನಂತರ ದೇವಾಲಯಗಳ ನಿರ್ಮಾಣ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಒಂದು ರೀತಿ ಬ್ಯಾಂಕುಗಳ ಹಾಗೆ ಕಾರ್ಯ ನಿರ್ವಹಿಸುತ್ತಾರೆ. ಕೆರೆಗಳನ್ನು ನಿರ್ಮಾಣ ಹಲವಾರು ಸಾಮಾಜಿಕ ಕಾರ್ಯಗಳನ್ನು ನಿರ್ವಹಿಸಿ ಸಮಾಜದಲ್ಲಿ ಒಂದು ಪ್ರಭಾವೀ ಸಮಾಜಿಕ ವರ್ಗವಾಗಿ ಹೊರಹೊಮ್ಮಿದರು.

**4.3. ತುಳುನಾಡಿನ ವ್ಯಾಪಾರ ಕೇಂದ್ರಗಳು**

ಪಶ್ಚಿಮ ಕರಾವಳಿ ಹಲವಾರು ನೈಸರ್ಗಿಕ ಬಂದರುಗಳನ್ನು ಹೊಂದಿದ್ದು ಅವುಗಳಲ್ಲಿ ಭಟ್ಕಳ ಅಂತಾರಾಷ್ಟ್ರೀಯ ವಾಣಿಜ್ಯ ಕೇಂದ್ರವಾಗಿತ್ತು. ಹಾಗೆಯೇ ಹೊನ್ನಾವರ, ಮಿರ್ಜಾನ್, ಬಸರೂರು, ಮಂಗಳೂರು, ಕಾಸರಗೋಡು ಮತ್ತು ಕಾರವಾರ ಮೂಲಕ ವಿದೇಶೀ ವ್ಯಾಪಾರ ವಹಿವಾಟುಗಳು ನಡೆಯುತ್ತಿದ್ದವು. ಈ ಬಂದರುಗಳ ಮುಖಾಂತರ ಪಶ್ಚಿಮ ಕರಾವಳಿ ಪ್ರವೇಶಿಸುವ ವಿದೇಶೀಯರು ಕರಾವಳಿ ಮತ್ತು ಒಳನಾಡಿನ ಪ್ರಮುಖ ಪಟ್ಟಣಗಳಾದ ಭಟ್ಕಳ, ಮಂಗಳೂರು, ಹೊನ್ನಾವರ, ಬೈಂದೂರು, ಬಾರಕೂರು, ಬಸರೂರು, ಕುಂಬಳೆ, ಮಿರ್ಜಾನ್, ಮಂಜೇಶ್ವರ, ಕಾಸರಗೋಡು, ಕಾರ್ಕಳ, ಮೂಡುಬಿದಿರೆ, ಕಳಸ, ಸಾಗರ, ಚಂದಾವರ, ಬನವಾಸಿ, ಇತ್ಯಾದಿ ಪಟ್ಟಣಗಳೊಂದಿಗೆ ವ್ಯಾಪಾರ ಸಂಪರ್ಕ ಹೊಂದಿದ್ದರು. ತುಳುನಾಡಿನ ವ್ಯಾಪಾರ ಕೇಂದ್ರಗಳ ಬಗ್ಗೆ ತಿಳಿಯಬೇಕೆಂದರೆ, ಇಲ್ಲಿನ ಬಂದರು ನಗರಗಳನ್ನು ಅಧ್ಯಯನ ನಡೆಸಬೇಕಾಗಿದೆ. ಏಕೆಂದರೆ, ಪ್ರಮುಖ ವ್ಯಾಪಾರಿ ಕೇಂದ್ರಗಳಾಗಿ ಬಂದರುಗಳು ಕೂಡಾ ಕಂಡುಬರುತ್ತವೆ. ಇದು ಹಾರ್ಬರ್ ಆಗಿಯೂ ಕೆಲಸ ಮಾಡುತ್ತಿದ್ದವು. ವ್ಯಾಪಾರ ಕೇಂದ್ರಗಳಾಗಿ ಉಪ್ಪಿನಂಗಡಿ, ಬೆಳ್ತಂಗಡಿ, ಪಾಣೆಮಂಗಳೂರು, ಕದ್ರಿ, ಸುಬ್ರಮಣ್ಯ, ಕೊಲ್ಲೂರು, ಕಾರಿಂಜ, ಸಂಸೆ, ಶಂಕರನಾರಾಯಣ, ಹಾಲಾಡಿ, ಗೇರುಸೊಪ್ಪೆ, ಬೈಂದೂರು, ಭಟ್ಕಳ, ಹೊನ್ನಾವರ, ಕಾರ್ಕಳ, ಮೂಡುಬಿದ್ರೆ, ವೇಣೂರು, ಪುತ್ತೂರು, ಸುಳ್ಯ, ಕೋಟೇಶ್ವರಗಳು ಪ್ರಾಚೀನ ಕಾಲದಲ್ಲಿ ಪ್ರಮುಖವಾಗಿದ್ದವು. ಜೊತೆಗೆ ವಿಟ್ಲ ಕೂಡಾ ಪ್ರಮುಖವಾಗಿತ್ತು. ಇದೊಂದು ಜೈನಕೇಂದ್ರವಾಗಿದ್ದಿತ್ತು. ಯಾವುದೆಲ್ಲಾ ಜೈನಕೇಂದ್ರಗಳಾಗಿದ್ದವೋ (ಧಾರ್ಮಿಕ ಕೇಂದ್ರಗಳು) ಅವುಗಳೆಲ್ಲವೂ ವ್ಯಾಪಾರ ಕೇಂದ್ರಗಳಾಗಿದ್ದವು.

ತುಳುನಾಡಿನ ವ್ಯಾಪಾರ ಕೇಂದ್ರಗಳನ್ನು ಎರಡು ರೀತಿಯಲ್ಲಿ ನೋಡಬಹುದು. ಒಳನಾಡಿನ ಮತ್ತು ವಿದೇಶಿಯ ವ್ಯಾಪಾರ ಕೇಂದ್ರಗಳು. ಇಲ್ಲಿ ಬಂದರುಗಳ ಪಾತ್ರ

ಬಹುಮುಖ್ಯವಾಗಿತ್ತು. ಕೇವಲ ಇಲ್ಲಿ ಹಡಗುಗಳು ಬಂದು ನಿಲ್ಲುವುದಕ್ಕೆ ಅಷ್ಟೇ ಸೀಮಿತವಾಗಿತ್ತೇ ಇಲ್ಲ. ಏಕೆಂದರೆ ಮಂಗಳೂರು, ಉಡುಪಿ, ಬಾರಕೂರು, ಬಸ್ರೂರು, ಮಲ್ಪೆ, ಕುಂದಾಪುರ ಆಗಿರಬಹುದು. ಇವುಗಳೆಲ್ಲಾ ದೊಡ್ಡ ಮಾರುಕಟ್ಟೆಯನ್ನು ತಮ್ಮದಾಗಿಸಿ ಕೊಂಡಿದ್ದವು. ಅಲ್ಲಿ ಚಿಲ್ಲರೆ (ಸಣ್ಣಮಟ್ಟದ) ವ್ಯಾಪಾರ ಮತ್ತು ದೊಡ್ಡ ಮಟ್ಟದ (ಸಗಟು) ವ್ಯಾಪಾರ ನಡೆಯುತ್ತಿತ್ತು. ದೊಡ್ಡಮಟ್ಟದ ವ್ಯಾಪಾರ ಎಂದರೆ, ವಿದೇಶಕ್ಕೆ ಹೋಗುವ ವಸ್ತುಗಳನ್ನು ಕಲೆಹಾಕಿ ಅದನ್ನು ವಿದೇಶಿಯ ವ್ಯಾಪಾರದಿಂದ ದೂರುವಂತಹ ಸಗಟು ವ್ಯಾಪಾರ ನಡೆಯುತ್ತಿತ್ತು. ಮತ್ತು ಜೊತೆಗೆ ಉಪಯೋಗಕ್ಕೆ ಆವಶ್ಯಕವಾದ ಮತ್ತು ಸ್ಥಳೀಯರು ಕೊಂಡುಕೊಳ್ಳುವಂತಹ ಸರಕುಗಳನ್ನು ಮಾರಾಟ ಮಾಡುವಂತಹ ಕೇಂದ್ರಗಳು ನಡೆಯುತ್ತಿತ್ತು. ಅದೇ ರೀತಿ ಒಳನಾಡಿನಲ್ಲೂ ವ್ಯಾಪಾರಕೇಂದ್ರಗಳಿದ್ದವು. ಇವುಗಳು ವಿದೇಶಿಯರಿಗೆ ಬೇಕಾಗುವ ವ್ಯಾಪಾರ ಕೇಂದ್ರ ಸರಕುಗಳನ್ನು ಒದಗಿಸುತ್ತಿದ್ದವು. ಪ್ರಮುಖ ನಗರ ಪಟ್ಟಣಗಳು ನದಿ ದಂಡೆಯ ಮೇಲೆ ಸ್ಥಾಪಿತವಾಗಿದ್ದವು. ಇವೆಲ್ಲವೂ ವ್ಯಾಪಾರ ವಹಿವಾಟಿಗೆ ಅನುಕೂಲ ವಾಗಿತ್ತು. ಮಂಗಳೂರಿನಿಂದ ಉದ್ಯಾವರದ ವರೆಗೂ ನದಿಮೂಲಕ ಸರಕು ಸಾಗಾಣಿಕೆ ಯಾಗುತ್ತಿತ್ತು. ತುಳುನಾಡು ಮತ್ತು ಘಟ್ಟ ಪ್ರದೇಶಗಳಿಗೆ ಸಂಪರ್ಕ ಸೇತುವೆಯಾಗಿದ್ದವು. ಜೈನ ವ್ಯಾಪಾರಿ ಕೇಂದ್ರಗಳು, ಶಾಸನಗಳಲ್ಲಿ ಬಸದಿಕೇಂದ್ರಗಳು ಭಟ್ಕಳ ಇದೆಲ್ಲಾ ವ್ಯಾಪಾರ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ತುಂಬಾ ಸಂಕೀರ್ಣವಾದ ರಸ್ತೆ ಮಾರ್ಗಗಳನ್ನು ಹೊಂದಿತ್ತು. ಒಳನಾಡಿನ ವ್ಯಾಪಾರದಲ್ಲಿ (ಚಿಲ್ಲರೆ ವ್ಯಾಪಾರ, ಊರುಗಳಲ್ಲಿ ಅಂಗಡಿಗಳಲ್ಲಿ, ವ್ಯಾಪಾರ ಮಾಡುವವರು ತೊಡಗಿದರು. ಮಾಪ್ಲಾ, ನವಾಯತ, ವೈಶ್ಯ, ಜೈನ, ಸೆಟ್ಟರು) ಸೀಮಿತರಾಗಿದ್ದರು. ವೃತ್ತಿಪರ ವ್ಯಾಪಾರರು ಆಂತರಿಕ ವ್ಯಾಪಾರದಲ್ಲಿ ಜನರಿಂದ ಸರಕುಗಳನ್ನು ತೆಗೆದುಕೊಂಡು ಅವರಿಗೆ ಅವಶ್ಯಕವಾಗಿರುವ ಸರಕುಗಳನ್ನು ಒದಗಿಸಿಕೊಡುವುದು. ವಿವಿಧ ವ್ಯಾಪಾರಿ ಸಂಘಗಳು ವಿದೇಶಿ ವ್ಯಾಪಾರದಲ್ಲಿ ತೊಡಗಿ ಆನೆ, ಕುದುರೆ, ಔಷಧಿ ವಿವಿಧ ಸಾಮಗ್ರಿಗಳನ್ನು ತರಿಸಿಕೊಂಡು ವ್ಯಾಪಾರ ನಡೆಸುತ್ತಿದ್ದರು.

ಸುಮಾರು 14 ಮತ್ತು 15ನೆಯ ಶತಮಾನದ ಕಾಲಘಟ್ಟದಲ್ಲಿ ಪ್ರಮುಖ ನಗರಗಳಾಗಿ, ವ್ಯಾಪಾರ ಕೇಂದ್ರಗಳಾಗಿ ಕೆಲವು ಪ್ರದೇಶಗಳು ಹೊರಹೊಮ್ಮಿವೆ. ಅವುಗಳೆಂದರೆ, ಪಕಮೂರಿಯ (ಫಾಕನೂರು– ಬಾರಹಕನ್ಯಾಪುರ) ಎಂದು ವೆನೀಸ್ ಪ್ರವಾಸಿ ನಿಕೊಲೊ–ದೆ–ಕೊಂತಿ ತಿಳಿಸಿದ್ದಾರೆ. ಇಲ್ಲಿ ಬೆಳದಿ, ಗೆಬೆಲಿ, ನೀಲಿ ಮತ್ತು ಶುಂಠಿಯನ್ನು ಈ ಪ್ರದೇಶದಲ್ಲಿ ಬೆಳೆಯುತ್ತಿದ್ದರೆಂದು ತಿಳಿಸಿದ್ದಾರೆ. ಮಂಗಳೂರು ಕೂಡ ಪ್ರಮುಖ ಬಂದರು ಹಾಗೂ

ನಗರವಾಗಿತ್ತು ಎಂದು ಪರ್ಷಿಯಾದ ಪ್ರವಾಸಿ ಅಬ್ದುಲ್ ರಜಾಕ್ ತಿಳಿಸಿದ್ದಾರೆ. ಹಾಗೆಯೇ ಮನೊರ್ (ಹೊನ್ನಾವರ) ಬಂದರಿನ ಬಗ್ಗೆನೂ ತಿಳಿಸಿದ್ದಾರೆ.[88] ಕೆಳದಿ ನಾಯಕರ ಆಳ್ವಿಕೆ ಕಾಲದಲ್ಲಿ ತುಳುನಾಡಿನಲ್ಲಿ ವಾಣಿಜ್ಯ ಮತ್ತು ವ್ಯಾಪಾರ ವಿಸ್ತಾರವಾಯಿತು. ಹೊನ್ನಾವರ, ಭಟ್ಕಳ, ಗಂಗೊಳ್ಳಿ, ಬಸರೂರು, ಬಾರಕೂರು (ಹಂಗಾರಕಟ್ಟೆ), ಚೊಕ್ಕಪಟ್ಟಣ, ಪಡುಬಿದ್ರೆ, ಮೂಲ್ಕಿ, ಮಂಗಳೂರು, ಮಂಜೇಶ್ವರ, ಕುಂಬಳ ಮತ್ತು ಕಾಸರಗೋಡು ಇವು ಪ್ರಮುಖ ರೇವು ಪಟ್ಟಣಗಳಾಗಿದ್ದವು. ಮೊದಲು ತುಳುನಾಡಿನ ವ್ಯಾಪಾರವನ್ನು ಮಾಪಿಳ್ಳೆಗಳು, ಬ್ಯಾರಿ, ನವಾಯಿತ, ಜೈನಸೆಟ್ಟಿಗಳು ನಡೆಸುತ್ತಿದ್ದರು. ನಂತರ 16ನೇ ಶತಮಾನದಲ್ಲಿ ಪೋರ್ಚುಗೀಸರು ಮುಸ್ಲಿಂ ವ್ಯಾಪಾರವನ್ನು ಕಸಿದುಕೊಂಡರು. ಆದರೆ ನಂತರದ ವರ್ಷದಲ್ಲಿ ಗೋವೆಯಿಂದ ಬಂದಂತಹ ಗೌಡಸಾರಸ್ವತರು ತುಳುನಾಡಿನ ವ್ಯಾಪಾರದಲ್ಲಿ ಪ್ರಬಲರಾದರು ಎಂದು ವಿದೇಶಿ ದಾಖಲೆಗಳು ಮತ್ತು ಗೋವಾದಲ್ಲಿರುವ ಕನ್ನಡ ಪತ್ರಗಳಿಂದ ತಿಳಿದುಬರುತ್ತದೆ. ಸಾರಸ್ವತರು ಕೃಷಿಯಲ್ಲಿಯೂ ಆಸಕ್ತಿ ಹೊಂದಿದ್ದರು.[89]

ದು ಆರ್ತೆ ಬಾರ್ಬೋಸಾ ಲಿಸ್ಬನ್ನಿನ ಪ್ರವಾಸಿ ತಿಳಿಸುವಂತೆ, ಮಿರ್ಜಾನ್ ತುಳುನಾಡಿನ ಪ್ರಮುಖ ಬಂದರಾಗಿತ್ತು. ಇಲ್ಲಿ ದೊಡ್ಡನದಿ ಇದೆ. ಈ ನದಿಯ ನೀರನ್ನು ಬಳಸಿ ದಪ್ಪ ಅಕ್ಕಿಯನ್ನು ಹೇರಳವಾಗಿ ಬೆಳೆಯುತ್ತಾರೆ. ಮಲಬಾರಿಗಳು ಈ ಅಕ್ಕಿಯನ್ನು ಕೊಂಡುಕೊಂಡು ಹೋಗಲು ಸಂಬುಕ್ ಎಂಬ ದೋಣಿಯ ಮುಖಾಂತರ ಇಲ್ಲಿಗೆ ಬರುತ್ತಾರೆ. ಬರುವಾಗ ಇಲ್ಲಿಗೆ ತೆಂಗಿನಕಾಯಿ, ಕೊಬ್ಬರಿಎಣ್ಣೆ, ಜಾಗರಾಗಳನ್ನು ತರುತ್ತಾರೆ ಎಂದಿದ್ದಾನೆ.[90] ಹೊನ್ನಾವರ ಕೂಡ ಪ್ರಮುಖವಾದ ಪಟ್ಟಣವಾಗಿತ್ತು. ಇದು ನದಿ ಮೇಲಿದೆ. ಅಲ್ಲದೇ ಮಲಬಾರಿಗಳು ಹೊನೋರನ್ನು 'ಪೊವರನ್' ಎಂದು ಕರೆಯುತ್ತಾರೆ. ಇಲ್ಲಿ ವ್ಯಾಪಾರ ನಡೆಯುತ್ತದೆ. ಮಲಬಾರಿಗಳು ಇಲ್ಲಿಗೆ ಅಕ್ಕಿ ಕೊಳ್ಳಲು ಬರುತ್ತಾರೆ. ಬರುವಾಗ ತೆಂಗಿನಕಾಯಿ, ಜಾಗ್ರಾ, ಮತ್ತು ತಾಳೆಮರದ ಹೆಂಡವನ್ನು ತರುತ್ತಾರೆ. ಭಟಕಲಾ (ಭಟ್‌ಕಲ್) ಇದು ದೊಡ್ಡ ಪಟ್ಟಣವಾಗಿತ್ತು. ಇಲ್ಲಿ ಬಾರೀ ಪ್ರಮಾಣದ ವ್ಯಾಪಾರ ನಡೆಯುತ್ತದೆ. ಇಲ್ಲಿ ಪ್ರಮುಖವಾಗಿ ಮೂರರೂ ಜೆಂಟೈಲರೂ ನೆಲೆಸಿದ್ದಾರೆ. ಓರ್ಮಸಿನಿಂದ ಭಟಕಲ್‌ಗೆ ಹಡಗುಗಳು ಬರುತ್ತಿದ್ದವು. ಇಲ್ಲಿ ಬೆಳೆಯುವ ಬಿಳಿ ಅಕ್ಕಿ, ಬೂರಾ ಸಕ್ಕರೆ, ಹಾಗೂ ಕಬ್ಬಿಣವನ್ನು ಹೇರಿಕೊಂಡು ಹೋಗುತ್ತಿದ್ದವು. ಸಕ್ಕರೆಯನ್ನು ಅಚ್ಚುಮಾಡಲು ಇವರಿಗೆ ಬರುವುದಿಲ್ಲ. ಬೂರಾ ಸಕ್ಕರೆ ಒಂದು ಅರ್ರೋಬಕ್ಕೆ (ಒಂದು ಹಂಡ್ರೆಡ್‌ವೇಟಿನ ಕಾಲುಭಾಗ) ಇನ್ನೂರ ನಲವತ್ತು ಮರವೆಡಿಗಳು, ಹಡಗುಗಳು

ಇಲ್ಲಿಗೆ ಬರುವಾಗ ಕುದುರೆಗಳನ್ನು ಮತ್ತು ಮುತ್ತುಗಳನ್ನು ತರುತ್ತಿದ್ದವು. ಇವುಗಳನ್ನೆಲ್ಲಾ ನರಸಿಂಗ ರಾಜ್ಯಕ್ಕೆ (ವಿಜಯನಗರ) ಮಾರುತ್ತಾರೆ. ಸಣ್ಣ ಮುತ್ತುಗಳೆಂದರೆ, ನರಸಿಂಗ ರಾಜ್ಯದ ಮೂರರಿಗೆ ಬಹು ಆನಂದ. ಅಲ್ಲದೆ ಇಲ್ಲಿಗೆ ಹೆಚ್ಚಾಗಿ ತಾಮ್ರವೂ ಬರುತ್ತದೆ. ಇದನ್ನು ನಾಣ್ಯಕ್ಕೂ, ಹಾಗೂ ಪಾತ್ರೆಗಳನ್ನು ಮಾಡುವುದಕ್ಕೂ ಒಳನಾಡಿಗೆ ಸಾಗಿಸುತ್ತಾರೆ.[91]

ಪೋರ್ಚುಗೀಸ್ ಪ್ರವಾಸಿ ಡೊಮಿಂಗೊ ಪ್ಯಾಸ ಕೂಡ ತುಳುನಾಡಿನ ಪ್ರಮುಖ ವ್ಯಾಪಾರಿ ಕೇಂದ್ರಗಳು ಅಥವಾ ರೇವುಗಳ ಬಗ್ಗೆ ತಿಳಿಸಿದ್ದಾರೆ. ಇಲ್ಲೆಲ್ಲಾ ಪೋರ್ಚುಗೀಸರ ಕಾರ್ಖಾನೆಗಳಿದ್ದವು, ಎಂದರೆ, ಅಂಕೋಲಾ, ಮಿರ್ಗೆಜ, ಹೊನರ್, ಬಟೆಕಲ್, ಮಂಗಳೋರ, ಬ್ರಾಕಲೋರ್ ಮತ್ತು ಬಕನೋರ, ಬಟೆಕಳ್, ಬೃಹತ್ ಪಟ್ಟಣವಾಗಿತ್ತು. ಝುಂಬೂರ್ ಪಟ್ಟಣದಿಂದ ಬಟ್ಕಳಕ್ಕೆ ಸರಕುಗಳು ಪ್ರತಿವರ್ಷ ಐದಾರು ಸಾವಿರ ಹೇರು ಮತ್ತು ಎತ್ತುಗಳ ಮೂಲಕ ಬರುತ್ತಿದ್ದವು.[92] ಕ್ರಿ.,ಶ. 16ನೇ ಶತಮಾನದ ವೇಳೆಗೆ ಪೋರ್ಚುಗೀಸರು ವ್ಯಾಪಾರ ವಹಿವಾಟುಗಳಿಗಾಗಿ ಕರಾವಳಿ ತೀರದ ಬಂದರುಗಳಲ್ಲಿ ಮಳಿಗೆಗಳನ್ನು ತೆರೆದು ಅವುಗಳ ಸುತ್ತ ಕೋಟೆ ಕಟ್ಟಿ, ಬಂದೂಕುಧಾರಿ ಸೈನಿಕರು ಅದನ್ನು ರಕ್ಷಿಸುತ್ತಿದ್ದರು. ಆ ಪ್ರದೇಶಗಳೆಲ್ಲವೂ ಸ್ಥಳೀಯ ಅರಸರ ಆಡಳಿತಕ್ಕೊಳಪಟ್ಟಿದ್ದರೂ ಈಗಾಗಲೇ ಅಲ್ಲಿ ವ್ಯಾಪಾರ ನಡೆಸುತ್ತಿದ್ದ ಹಂಜುಮಾನರು, ಕೊಂಕಣಿಗರು ಮತ್ತು ಜೈನ ಸೆಟ್ಟಿಕಾರರಿಂದ ಪೋರ್ಚುಗೀಸರು ಬಲವಂತವಾಗಿ ಸುಂಕ ವಸೂಲಿ ಮಾಡುತ್ತಿದ್ದರು. ಸ್ಥಳೀಯರಿಂದ ತಾವು ಖರೀದಿಸುವ ವಸ್ತುಗಳಿಗೆ ತಮಗಿಷ್ಟ ಬಂದ ರೀತಿಯಲ್ಲಿ ಕಡಿಮೆ ಬೆಲೆ ಪಾವತಿಸುತ್ತಿದ್ದರು. ಈ ಕಾಲದಲ್ಲಿ (ಕ್ರಿ.ಶ. 16ನೇ ಶತಮಾನ) ಬಸರೂರು, ಹಂಗಾರಕಟ್ಟೆ (ಬಾರಕೂರು) ಮುಲ್ಕಿ, ಮಂಗಳೂರು, ಮಂಜೇಶ್ವರ, ತುಳುನಾಡಿನ ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ವಿಜಯನಗರದ ಅರಸರು ಮತ್ತು ಬಿಜಾಪುರದ ಸುಲ್ತಾನರು ಪೋರ್ಚುಗೀಸರಿಂದ ಕುದುರೆ ಮತ್ತು ತುಪಾಕಿಗಳನ್ನು ಖರೀದಿಸುತ್ತಿದ್ದರು. ಬಸರೂರಿನಲ್ಲಿ ವಿಜಯನಗರದ ರಾಜ್ಯಪಾಲರ ಅಧಿಕಾರ ನಡೆಸುತ್ತಿದ್ದರೂ ಪೋರ್ಚುಗೀಸರ ಗೂಂಡಾಗಿರಿಯನ್ನು ಹತೋಟಿಯಲ್ಲಿಡಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ಇದರಿಂದಾಗಿ ಹಂಜುಮಾನರು, ಮತ್ತು ಸ್ಥಳೀಯ ಗೌಡಸಾರಸ್ವತ ಹಾಗೂ ಜೈನ ನಾಡವ ವ್ಯಾಪಾರಸ್ಥರು ಹೆಚ್ಚಿನ ಮಟ್ಟದ ಕಷ್ಟನಷ್ಟಗಳಿಗೆ ಗುರಿಯಾಗ ಬೇಕಾಯಿತು. ಈ ಕಾಲದಲ್ಲಿ ಮಂಗಳೂರು ಒಂದು ಪ್ರಮುಖ ವ್ಯಾಪಾರಿ ಕೇಂದ್ರವಾಗಿ ಬೆಳೆಯತೊಡಗಿದ್ದು, ಅಲ್ಲಿನ ಬಂದರು ಪ್ರದೇಶ ಉಳ್ಳಾಲದ ರಾಣಿ ಅಬ್ಬಕ್ಕನ ವಶದಲ್ಲಿತ್ತು. ವ್ಯಾಪಾರದ ಮೇಲಿನ ಸುಂಕವೇ ಸ್ಥಳೀಯ ಅರಸರ ಮುಖ್ಯ ಆದಾಯವಾಗಿದ್ದರಿಂದ ಮತ್ತು

ಸ್ಥಳೀಯ ಅರಸರು ಸ್ವತಃ ವ್ಯಾಪಾರದಲ್ಲಿ ತೊಡಗಿದ್ದರಿಂದ, ಮೂಡಬಿದರೆಯ ಚೌಟರಸಿ ಮೂಡಬಿದರೆ ಆಡಳಿತವನ್ನು ತನ್ನ ಗಂಡ ಲಕ್ಷ್ಮಪ್ಪ ಬಂಗರಸನಿಗೆ ಒಪ್ಪಿಸಿ ತಾನು ಉಳ್ಳಾಲದಲ್ಲಿ ನೆಲೆಸಿದ್ದಳು.[93] ಬಾರಕೂರು, ಬಸರೂರು, ಮೂಡಬಿದರೆಗಳಂತಹ ಬಿರುಸಿನ ವಾಣಿಜ್ಯ ಚಟುವಟಿಕೆಗಳ ಕೇಂದ್ರಗಳು ಕೇರಿಗಳಾಗಿ ವಿಭಾಗ ಹೊಂದಿದವು. ಬಾರಕೂರು ಪಟ್ಟಣವು ಹತ್ತು ಕೇರಿಗಳಾಗಿಯೂ, ಬಸರೂರು, ಏಳುಕೇರಿಗಳಾಗಿಯೂ, ಮೂಡಬಿದರೆಯು 2 ಕೇರಿಗಳಾಗಿಯೂ ವಿಭಾಗವಾಗಿದ್ದವು. ಅವುಗಳನ್ನು ಅಧಿಕಾರಿ, ರಾಜ್ಯಪಾಲರುಗಳು, ಸ್ಥಳೀಯ ತುಂಡರಸರು ಮತ್ತು ವ್ಯಾಪಾರಿ ಸಮುದಾಯ ನೋಡಿಕೊಳ್ಳುತ್ತಿದ್ದರು.

ವಿಜಯನಗರ ಕಾಲದಲ್ಲಿ ಮಂಗಳೂರು ಬಂದರು ಒಂದು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಇದರ ಜೊತೆಗೆ ಬಾರಕೂರು, ಬಸ್ರೂರು ಬಂದರು ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ಇವು ವಿದೇಶಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದವು. 1390ರ ಕುಂಚ ಮಠದ ಶಾಸನ, ಮಲಯ, ಕಾಂಬೋಜ, ಸಿಂಹಳ ದೇಶಗಳೊಂದಿಗೆ ಬಾರಕೂರು ಸಂಪರ್ಕ ಹೊಂದಿದ್ದನ್ನು ಉಲ್ಲೇಖಿಸುತ್ತದೆ. 15ನೇ ಶತಮಾನದಲ್ಲಿ ಬೈಂದೂರು, ಬಸ್ರೂರು, ಬಾರಕೂರು, ಮಂಗಳೂರು ತುಳುನಾಡಿನ ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ಇವು ಶುಂಠಿ, ತೆಂಗಿನಕಾಯಿ, ಕರಿಮೆಣಸು, ಅಕ್ಕಿ ಮುಂತಾದವುಗಳು ಈ ರೇವುಗಳು ಹಲವಾರು ದೇಶಗಳಿಗೆ ರಫ್ತುಮಾಡುತ್ತಿದ್ದವು. ತುಳುನಾಡಿನ ಪ್ರಮುಖ ಬಂದರು ಪ್ರದೇಶಗಳೆ ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು ಅವುಗಳೆಂದರೆ, ಹೊನ್ನಾವರ, ಭಟ್ಕಳ, ಬಸ್ರೂರು, ಬಾರಕೂರು, ಮಲ್ಪೆ, ಮಂಗಳೂರು. ನಂತರ ತುಳುನಾಡಿನ ವ್ಯಾಪಾರ ಕೇಂದ್ರಗಳಾಗಿ, ಮೂಡಬಿದಿರೆ ನಗರ, ಕಾರ್ಕಳ ನಗರ, ಕಾಪು ನಗರ, ಭಟ್ಕಳ ನಗರ, ಬಾರಹಕನ್ಯಾಪುರ, ಮಂಗಳಪುರ, ಬಸುರೆಪಟ್ಟಣ ಮುಂತಾದ ಸ್ಥಳಗಳು ತುಳುನಾಡಿನಲ್ಲಿ ಮುಖ್ಯ ಕೇಂದ್ರಗಳಾಗಿದ್ದವು. ಅಲ್ಲದೇ ಈ ನಗರಗಳಲ್ಲಿ ವಿವಿಧ ರೀತಿಯ ಜೈನ ವರ್ತಕ ಸಂಘದವರಿದ್ದರು. ಅವರುಗಳೆಂದರೆ ಸೆಟ್ಟಿಕಾರರು, ನಖರ, ಎಳಮೆ, ಸಾಲಿಕೆ ಬಲ್ಲಾಳರು ಎಂದು ಗುರ್ತಿಸಬಹುದು. ಅಲ್ಲದೇ ವಿಜಯನಗರ ಕಾಲದಲ್ಲಿ, ಮಂಗಳೂರು, ಭಟ್ಕಳ, ಹೊನ್ನಾವರ ಬಂದರುಗಳಿಂದ ಅರಬ್ಬೀ, ಪರ್ಷಿಯಾ ಮೊದಲಾದ ದೂರದ ದೇಶಗಳಿಂದ ಕುದುರೆಗಳನ್ನು ಆಮದುಮಾಡಿಕೊಳ್ಳುತ್ತಿದ್ದರು. ಇವುಗಳು ಪ್ರಮುಖ ವ್ಯಾಪಾರ ಕೇಂದ್ರಗಳಾಗಿ ಈ ಬಂದರುಗಳು ಮುಖ್ಯ ಪಾತ್ರವಹಿಸುತ್ತವೆ. ಮೂಡಬಿದರೆ, ಬಾರಕೂರು, ವೇಣೂರು,

ಕೋಟಿಕೇರಿ, ಚೌಳಿಕೇರಿ, ನಾರಾವಿ, ಬೆಳ್ತಂಗಡಿ, ಕಾರ್ಕಳ, ಪಡುಬಿದರೆ, ಗೇರುಸೊಪ್ಪೆ. ಹಲರು ಕಟ್ಟಿಸಿದ ಬಸದಿಯೊಂದು ಕಾರ್ಕಳದಲ್ಲಿದೆ[94].

ವಿಜಯನಗರ ಕಾಲದಲ್ಲಿ ಹೊನ್ನಾವರ, ಭಟ್ಕಳ, ಗಂಗೊಳ್ಳಿ, ಕುಂದಾಪುರ, ಮಲ್ಪೆ, ಮಂಗಳೂರುಗಳಲ್ಲಿ ವಿದೇಶಿಯರು ವಸಾಹತುಗಳನ್ನು ಸ್ಥಾಪಿಸಿಕೊಂಡು ದೊಡ್ಡಪ್ರಮಾಣದಲ್ಲಿ ಇಲ್ಲಿ ವ್ಯಾಪಾರ ನಡೆಸುತ್ತಿದ್ದರು. ಕುಂದಾಪುರದ ಬಳಿ ಇರುವ ಹಟ್ಟಿಯಂಗಡಿ ಜೈನರ ಕೇಂದ್ರವಾಗಿತ್ತು. ಜೊತೆಗೆ ದೊಡ್ಡ ವ್ಯಾಪಾರಕೇಂದ್ರವಾಗಿತ್ತೆಂದು ಕ್ರಿ.ಶ. 8ನೇ ಶತಮಾನದ ಶಾಸನದಲ್ಲಿ ತಿಳಿಸಲಾಗಿದೆ.[95] ಹಾಗೆಯೇ ಪ್ರಮುಖ ಜೈನ ಬಸದಿ ಕೇಂದ್ರಗಳು ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು, ಉದಾಹರಣೆಗೆ ಗೆರುಸೊಪ್ಪೆ, ಹೊನ್ನಾವರ, ಭಟ್ಕಳ, ಹಾಡುವಳ್ಳಿ, ಬೈಂದೂರು, ವೇಣೂರು ಮತ್ತು ಮೂಡುಬಿದರೆ.

15ನೇ ಶತಮಾನಕ್ಕೂ ಮುಂಚೆ ಅಕ್ಕಿ, ಕಬ್ಬು, ಬೆಂಗಾಲ್ ಗ್ರಾಮ್, ಮಸಾಲೆಗಳು, ತೆಂಗಿನಕಾಯಿಗಳನ್ನು ಸಹ್ಯಾದ್ರಿ ಮೇಲೆ ಮತ್ತು ಕೆಳಗೆ ವಿನಿಮಯ ಮಾಡಿಕೊಳ್ಳಲಾಯಿತು[96]. ಪ್ರಮುಖ ಸಮುದ್ರ ವ್ಯಾಪಾರ ಕೇಂದ್ರಗಳು ಮಿರ್ಜಾನ್, ಹೊನ್ನಾವರ, ಭಟ್ಕಳ, ಬಸ್ರೂರು, ಬಾರಕೂರು, ಮಂಗಳೂರು, ಮಂಜೇಶ್ವರ, ಕುಂಬಳ, ಮತ್ತು ಕಾಸರಗೊಡು, ಕಾರ್ಕಳ, ಮೂಡಬಿದರೆ, ಕಳಸ, ಸಾಗರ, ಚಂದಾವರ ಮತ್ತು ಬನವಾಸಿ ಇವುಗಳು ಆಂತರೀಕ ವ್ಯಾಪಾರ ಕೇಂದ್ರಗಳೂ ಆಗಿದ್ದವು. ಸಾಮಾನ್ಯವಾಗಿ, ಕೃಷಿ ಉತ್ಪನ್ನಗಳ ವ್ಯಾಪಾರ ಮುಖ್ಯವಾಗಿ ಆಂತರೀಕವಾಗಿದೆ ಮತ್ತು ದೊಡ್ಡದಾದ ಪ್ರದೇಶವನ್ನು ವಿಸ್ತರಿಸಲಾಗುತ್ತದೆ. ಸಮುದ್ರ ವ್ಯಾಪಾರವು ಕೆಲವು ಪ್ರದೇಶಗಳಿಗೆ ಮಾತ್ರ ಸೀಮಿತವಾಗಿತ್ತು ಮತ್ತು ಕಡಿಮೆ ಜಾತಿ ಹಿಂದೂಗಳ ಸಕ್ರಿಯ ಸಹಕಾರದಿಂದ ವಿದೇಶಿ ಮೂಲಗಳ ರೂಪದಲ್ಲಿ ಇದನ್ನು ಮುಸ್ಲಿಂರು ಮಾಡಿದರು.[97] ಪೋರ್ಚುಗೀಸ್ ವ್ಯಾಪಾರಿಗಳಿಂದ ಸಕ್ಕರೆ ಮತ್ತು ಮೆಣಸು ಮಹತ್ತರವಾದ ಬೇಡಿಕೆ ಇತ್ತು ಮತ್ತು ಕ್ರಿ.ಶ. 1512ರಲ್ಲಿ ಈ ಉತ್ಪನ್ನಗಳು ಭಟ್ಕಳ ಮತ್ತು ಹೊನ್ನಾವರ ಬಂದರುಗಳಿಂದ ಗೋವಾಕ್ಕೆ ರಫ್ತಾಗಿದ್ದವು. ತೆಂಗಿನಕಾಯಿ, ಮೆಣಸು, ಮಸಾಲೆಗಳು ಮತ್ತು ಕಬ್ಬಿಗೆ ಒರ್ಮಜ್, ಪರ್ಷಿಯ ಮತ್ತು ಯೆಮನ್ ವ್ಯಾಪಾರಿಗಳಿಂದ ಹೆಚ್ಚಿನ ಬೇಡಿಕೆಯಿತ್ತು. ಈ ಕೃಷಿ ಉತ್ಪನ್ನಗಳನ್ನು ಹೊನ್ನಾವರ ಮತ್ತು ಮಂಗಳೂರಿನಿಂದ ಮುಸ್ಲಿಂರು ಹೊಂದಿದ ಹಡಗು ಗಳಲ್ಲಿ ರಫ್ತಾಗುತ್ತಿದ್ದವು. ಇದನ್ನು ಸ್ಥಳೀಯ ಹಿಂದೂಗಳಾದ ಮಕ್ಕಾರಿಗಳು ಮತ್ತು ಕಾರ್ವಿಗಳು ನೋಡಿಕೊಳ್ಳುತ್ತಿದ್ದರು.[98] ಭಟ್ಕಳ ಮತ್ತು ಹೊನ್ನಾವರ ಪ್ರದೇಶಗಳಿಂದ ಪೋರ್ಚುಗೀಸರು

ಮೆಣಸನ್ನು ಗುತ್ತಿಗೆ ನೀಡಿದರು ಮತ್ತು 6 ತಿಂಗಳ ಮುಂಚಿತವಾಗಿಯೇ ಸ್ಥಳೀಯ ವ್ಯಾಪಾರಿಗಳಿಗೆ ಹಣವನ್ನು ಪಾವತಿಸುತ್ತಿದ್ದರು. 1594ರ ಮತ್ತೊಂದು ಪೋರ್ಚುಗೀಸ್ ದಾಖಲೆಯ ಪ್ರಕಾರ, ಹೊನ್ನಾವರ, ಭಟ್ಕಳ, ಬಸ್ರೂರು ಮತ್ತು ಮಂಗಳೂರಿನ ಬಂದರುಗಳಲ್ಲಿ ಮೆಣಸು, ಕಬ್ಬು ಮತ್ತು ತೆಂಗಿನಕಾಯಿಗೆ ಬಾರೀ ಬೇಡಿಕೆಯಿತ್ತು[99]. ವಾಣಿಜ್ಯೋದ್ಯಮ ಉತ್ಪನ್ನಗಳಾದ ಕಬ್ಬು ಮತ್ತು ತೆಂಗಿನಕಾಯಿಗಳಿಗೆ ಮಾಲ್ಡಿವಾ, ಐಲ್ಯಾಂಡ್ ಮತ್ತು ಅರೇಬಿಯಾದ ವ್ಯಾಪಾರಿಗಳಿಂದ ಬೇಡಿಕೆಯಿದೆ ಎಂದು ಗಮನಿಸುವುದು ಆಸಕ್ತಿದಾಯಕ ವಾಗಿದೆ. ಇದರ ಪರಿಣಾಮವಾಗಿ ಕರಾವಳಿ ಪ್ರದೇಶದ ವ್ಯಾಪಾರ ಚಟುವಟಿಕೆಗಳು ಅರೇಬಿಯಾ, ಓರ್ಮುಜ್, ಪೂರ್ವಆಫ್ರಿಕಾ, ಮಾಲ್ಡಿವಾ ದ್ವೀಪಗಳು ಮತ್ತು ಯೂರೋಪ್ ಪ್ರದೇಶಗಳಿಗೆ ವಿಸ್ತಾರಗೊಂಡಿತು.

ಇನ್ನೂ 17ನೇ ಶತಮಾನದ ನಂತರ ಕುಂಬಳ, ಕಾರ್ನಾಡು (ಮುಲ್ಕಿ ಹತ್ತಿರ) ಗಂಗೊಳ್ಳಿ, ತದ್ರಿ ಮತ್ತು ಕಾರವಾರ ಮುಂತಾದ ಹೊಸ ಬಂದರುಗಳಾದವು. ಈ ಬಂದರುಗಳ ಹೊರಹೊಮ್ಮುವಿಕೆಯು ಅಕ್ಕಿ, ಮೆಣಸು, ದೊಡ್ಡಪ್ರಮಾಣದಲ್ಲಿ ತೆಂಗಿನಕಾಯಿ ಮೊದಲಾದ ಕೆಲವು ಕೃಷಿ ಉತ್ಪನ್ನಗಳ ಲಭ್ಯತೆಯಿಂದಾಗಿತ್ತು. ಮಂಜೇಶ್ವರ ಮತ್ತು ಕುಂಬಳಗಳು ಅಕ್ಕಿ, ತೆಂಗಿನಕಾಯಿ, ಕಬ್ಬು ಮತ್ತು ಅಡಿಕೆಯ ಲಭ್ಯತೆಯ ಕಾರಣದಿಂದಾಗಿ ಸಮುದ್ರ ವ್ಯಾಪಾರ ಕೇಂದ್ರಗಳಾಗಿ ಹೊರಹೊಮ್ಮಿತು. ಇವುಗಳನ್ನು ದೊಡ್ಡ ಹಡಗುಗಳಲ್ಲಿ ಬಾಂಬೆ, ಗೋವಾ, ಕಲ್ಲಿಕೋಟೆ ಮತ್ತು ಅರೇಬಿಯಾಕ್ಕೆ ರಫ್ತು ಮಾಡಲಾಗುತ್ತಿತ್ತು. ಅಂತೆಯೇ ಕಾರಾವಾರ, ಮಿರ್ಜಾನ್‌ಗಳು ಸಮುದ್ರ ವ್ಯಾಪಾರ ಕೇಂದ್ರಗಳಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಏಕೆಂದರೆ, ಒಳನಾಡುಗಳಿಂದ ಉತ್ಪಾದನೆಯಾಗುತ್ತಿದ್ದ ಉತ್ತಮ ಮೆಣಸು, ಗೇರುಬೀಜ, ಏಲಕ್ಕಿ ಮತ್ತು ಅರಣ್ಯ ಉತ್ಪನ್ನಗಳು ಇತ್ಯಾದಿ.[100] ಕಾರವಾರವು ಯುರೋಪಿಯನ್ ದೇಶಗಳೊಂದಿಗೆ ನೇರವಾಗಿ ಮೆಣಸು ವ್ಯಾಪಾರ ಸಂಪರ್ಕವನ್ನು ಹೊಂದಿತ್ತು. ಕಿ.ಶ. 1682ರ ಇಂಗ್ಲೀಷ್ ದಾಖಲೆಗಳಲ್ಲಿ ಒಂದಾದ ಕಾರವಾರವು 200 ಟನ್‌ಗಳಷ್ಟು ಮೆಣಸನ್ನು, 50 ಬೇಲ್ಸ್ ಏಲಕ್ಕಿಯನ್ನು ಇಂಗ್ಲೆಂಡಿಗೆ ಪೂರೈಸಬೇಕಾಗಿತ್ತು ಹಾಗೂ 500 ಟನ್‌ಗಳಷ್ಟು ಮೆಣಸನ್ನು ಖರೀದಿಸಬೇಕಾಯಿತು. ಕಾರ್ನಾಡು ಇನ್ನೊಂದು ಕಡಲ ವ್ಯಾಪಾರ ಕೇಂದ್ರವಾಗಿದ್ದು, ಅಲ್ಲಿ ಪೋರ್ಚುಗೀಸರು ಅಕ್ಕಿ, ಕಬ್ಬು, ತೆಂಗಿನನಾರು ಮತ್ತು ತೆಂಗಿನಕಾಯಿಗಳನ್ನು ಖರೀದಿಸು ತ್ತಿದ್ದರು. ಕ್ರಿ.ಶ. 1656 ರಲ್ಲಿ ಈ ಬಂದರನ್ನು ಭೇಟಿಮಾಡಿದ ಸೈಂಟ್ ಕ್ಯಾಥೆರಿನ್ (ಬರವಣಿಗೆ) ಗ್ರಂಥದಿಂದ ತಿಳಿದುಬಂದಿದೆ.

ಶತಮಾನದ ಅಂತ್ಯದ ವೇಳೆಗೆ ನದಿಯ ಹರಿವಿನ ದಿಕ್ಕಿನಲ್ಲಿ ಮುಲ್ಕಿ ಎಂದು ಕರೆಯಲ್ಪಡುವ ಕಾರ್ನಾಡು ಬಳಿ ಒಂದು ಬಂದರು ಆಗಲು ಅವಕಾಶ ಮಾಡಿಕೊಟ್ಟಿತು. ಮತ್ತು ಇದು ಕಾರ್ನಾಡು ಬಂದರಿನ ವಿನಾಶಕ್ಕೆ ಕಾರಣವಾಯಿತು. ಹ್ಯಾಮಿಲ್ಟನ್ ಪ್ರಕಾರ, ಶಾಂಭವಿ ನದಿಯ ಹರಿವಿನ ದಿಕ್ಕಿನಲ್ಲಿ ಓರ್ಮಜ್ ಮತ್ತು ಏಡೆನ್‌ಗಳಿಗೆ ದೊಡ್ಡ ಪ್ರಮಾಣದಲ್ಲಿ ಅಕ್ಕಿ ರಫ್ತುಮಾಡಲು ಅ ಪಟ್ಟಣವು ನೆರವಾಯಿತು.[101] 17ನೇ ಶತಮಾನದ ಮದ್ಯದಲ್ಲಿ ಕುಂದಾಪುರದ ಬಳಿ ಇರುವ ಗಂಗೊಳ್ಳಿಯು ಅಕ್ಕಿ, ಮೆಣಸು, ಕಬ್ಬು, ತಂಬಾಕು ಮತ್ತು ತೆಂಗಿನಕಾಯಿಗಳ ಕೃಷಿ ಕೇಂದ್ರವಾಗಿ ಹೊರಹೊಮ್ಮಿತು. ತಮ್ಮ ವ್ಯಾಪಾರವನ್ನು ರಕ್ಷಿಸಲು ಮತ್ತು ಸಾಕಷ್ಟು ಪ್ರಮಾಣದ ಅಕ್ಕಿ ಮತ್ತು ಮೆಣಸು ಪಡೆಯಲು, ಪೋರ್ಚುಗೀಸರು ಕೋಟೆಯನ್ನು ನಿರ್ಮಿಸಿದರು. ಅಕ್ಕಿ ವ್ಯಾಪಾರವು ಬಂದರಿನಲ್ಲಿ ಬಹಳ ಚುರುಕಾಗಿ ನಡೆಯುತ್ತಿತ್ತು. ಕ್ರಿ.ಶ. 1653ರಲ್ಲಿ ಪೋರ್ಚುಗೀಸರಿಂದ ಕೆಳದಿ ಶಿವಪ್ಪ ನಾಯಕನು ಬಂದರುಗಳ ಮೇಲೆ ವಾಪಾರದ ನಿಯಂತ್ರಣವನ್ನು ಪಡೆದುಕೊಂಡ ನಂತರ, ಗೌಡಸಾರಸ್ವತ ವರ್ತಕರ ಮೇಲೆ ಬಂದರುಗಳ ವ್ಯಾಪಾರವು ಅಂಗೀಕರಿಸಿತು.[102] ಕುಂಬಳ, ಮಂಗಳೂರು, ಮುಲ್ಕಿ, ಬಸರೂರು, ಗಂಗೊಳ್ಳಿ, ಭಟ್ಕಳ, ಹೊನ್ನಾವರ ಮತ್ತು ಕಾರವಾರ ಪ್ರಮುಖ ವ್ಯಾಪಾರ ಕೇಂದ್ರಗಳು. ಅಕ್ಕಿ, ಮೆಣಸು, ತೆಂಗಿನಕಾಯಿ ಪ್ರಮುಖ ಕೃಷಿಉತ್ಪನ್ನಗಳಾಗಿವೆ.[103] ಜೊತೆಗೆ 17ನೇ ಶತಮಾನದಿಂದ, ಆಂತರೀಕ ವ್ಯಾಪಾರಿ ಕೇಂದ್ರಗಳಾಗಿ, ಬಂಟವಾಳ, ಬೆಳ್ತಂಗಡಿ, ಬಂಗಡಿ ಮತ್ತು ಪಾಣೆ–ಮಂಗಳೂರು ಕಂಡುಬಂದವು. ಇದು ಕ್ರಿ.ಶ. 1642ರ ದಾಖಲೆಗಳಿಂದ ತಿಳಿದುಬಂದವು.[104] ಕೃಷಿ ಉತ್ಪನ್ನಗಳ ವ್ಯಾಪಾರಿ ಕೇಂದ್ರಗಳಾಗಿ, ಕೊಕ್ಕರ್ಣೆ, ಕಾರ್ಕಳ, ಸೊಮೇಶ್ವರ, ಗೇರುಸೊಪ್ಪೆ, ಚಂದಾವರ,[105] ಹಾಗೂ ಮಿರ್ಜಾನ್, ಚಂದಾವರ, ಗೇರುಸೊಪ್ಪ, ಹೊನ್ನಾವರ, ಹಾಡುವಳ್ಳಿ, ಕೊಲ್ಲೂರು, ಭಟ್ಕಳ, ಬೈಂದೂರು, ಗಂಗೊಳ್ಳಿ, ಹೊಸಂಗಡಿ, ಬಸರೂರು, ಕುಂದಾಪುರ, ಬಾರಕೂರು, ಕೊಕ್ಕರ್ಣೆ, ಉಡುಪಿ, ಕಾಪು, ಕಾರ್ಕಳ, ಮುಲ್ಕಿ, ಸೋಮೇಶ್ವರ, ಮೂಡುಬಿದರೆ, ಮಂಗಳೂರು, ವೇಣೂರು, ಉಲ್ಲಾಳ, ವಿಟ್ಠಲ, ಕುಂಬಳ, ಮಂಜೆಶ್ವರ, ಕಾಸರಗೋಡುಕಂಡುಬಂದವು.

### 4.4. ವ್ಯಾಪಾರದ ಸರಕುಗಳು

ಪ್ರಾರಂಭದ ದಶಕದಲ್ಲಿ ರೋಮನ್ ಸಾಮ್ರಾಜ್ಯವು ಭಾರತದ ಕರ್ನಾಟಕದ ಪಶ್ಚಿಮ ಕರಾವಳಿಯ ವರೆಗೂ ವ್ಯಾಪಾರವನ್ನು ಆರಂಭಿಸಿದ್ದರು. ರೋಮನ್ನರು ಆಮದು ಮತ್ತು ರಫ್ತು

ವ್ಯಾಪಾರವನ್ನು ಇಲ್ಲಿನ ವ್ಯಾಪಾರಸ್ಥರೊಂದಿಗೆ ಮುಂದುವರೆಸಿಕೊಂಡು ಹೋಗುತ್ತಿದ್ದರು. ತದನಂತರ ಅವರ ರಫ್ತಿಗಿಂತ ಆಮದು ಸರಕುಗಳೇ ಹೆಚ್ಚಾದವು. ಏಕೆಂದರೆ ವರ್ತಕರು, ಅಧಿಕಾರಿಗಳು, ಭೂಮಾಲೀಕರು ಶ್ರೀಮಂತರಾದರು ರಾಜಮನೆತನದವರಲ್ಲಿ ಭೋಗ ವಸ್ತುಗಳ ಆಸಕ್ತಿ ಹೆಚ್ಚಿದಂತೆ ಸರಕುಗಳ ಬೇಡಿಕೆ ಹೆಚ್ಚಾಯಿತು. ಸರ್ಕಾರವು ಇದನ್ನು ನಿಯಂತ್ರಿಸಲು ಸಾಧ್ಯವಾಗಲಿಲ್ಲ ಅಲ್ಲದೇ ರೋಮನ್ನರು ಹೊರದೇಶಗಳ ಸರಕುಗಳಿಗೆ/ವಸ್ತುಗಳಿಗೆ ಪ್ರತಿಯಾಗಿ ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳನ್ನು ಕೊಡುತ್ತಿದ್ದರು. ಭಾರತದಿಂದ ರಫಾಗುತ್ತಿದ್ದ ಸರಕು ಗಳನ್ನು ಇಲ್ಲಿನ ವ್ಯಾಪಾರಸ್ಥರು ಒಂದಕ್ಕೆ ನೂರರಷ್ಟು ಹೆಚ್ಚಿನ ಬೆಲೆಗೆ ಮಾರುತ್ತಿದ್ದರೆಂದು ಇವನು ತಿಳಿಸಿದ್ದಾನೆ.[106] ಇದರಿಂದ ನಮಗೆ ತಿಳಿಯುವುದೇನೆಂದರೆ ವರ್ತಕರು, ಮಧ್ಯವರ್ತಿ ಗಳು, ಎಷ್ಟೊಂದು ಲಾಭ ಪಡೆಯುತ್ತಿದ್ದರೆಂದು ತಿಳಿಯಬಹುದು. ಇಷ್ಟೊಂದು ಪ್ರಮಾಣದಲ್ಲಿ ವ್ಯಾಪಾರವಾಗುತ್ತಿದ್ದ ವಾಣಿಜ್ಯ ವಸ್ತುಗಳ ಬಗ್ಗೆ ರೋಮನ್ 'ಡೆಜೆಸ್ಟ್ ಲಿಸ್ಟ್'ನ ದಾಖಲೆಗಳನ್ನು ಇಟ್ಟುಕೊಂಡು ವಾರ್ಮಿಂಗ್‌ಟನ್‌ರವರು ವಿವರವಾಗಿ ನಿರೂಪಿಸಿದ್ದಾರೆ.[107] ಅವು ಸಸ್ಯೋತ್ಪನ್ನ ಗಳಲ್ಲಿ ಮೆಣಸು, ಏಲಕ್ಕಿ, ಶುಂಠಿ, ದಾಲ್ಚಿನ್ನಿ, ಅಡಿಕೆ, ತೆಂಗು, ಧನಿಯ, ಈರುಳ್ಳಿ, ಸೌತೆಕಾಯಿ, ದತ್ತೂರಿ, ಅಕ್ಕಿ, ಗಿಡಮೂಲಿಕೆಗಳು, ಗುಗ್ಗುಳ ಸುಗಂಧ ತೈಲದ ಗಿಡಗಳು, ಸಕ್ಕರೆ ಇತ್ಯಾದಿ. ಇದರ ಜೊತೆಗೆ ಶ್ರೀಗಂಧ, ತೇಗ, ಕರಿಮರ ಸೀಗೆಕಾಯಿ ಮೊದಲಾದ ಅರಣ್ಯೋತ್ಪನ್ನಗಳು ಸೇರುತ್ತಿದ್ದವು.

ಈ ಪಟ್ಟಿಯನ್ನು ಗಮನಿಸಿದರೆ ಕರ್ನಾಟಕದಲ್ಲಿ ದೊರೆಯದಿದ್ದ ಒಂದು ವಸ್ತುವೂ ಕಂಡು ಬರುವುದಿಲ್ಲ. ಆದರೆ ಕರ್ನಾಟಕದಿಂದ ರೋಮ್‌ಗೆ ಹೋಗುತ್ತಿದ್ದ ವಸ್ತುಗಳ ಬಗ್ಗೆ ದಾಖಲೆಗಳನ್ನು ಪರಿಶೀಲಿಸಿದರೆ ಅದರಿಂದ ನಮಗೆ ಸ್ವಲ್ಪ ಮಟ್ಟಿನ ನಿರಾಸೆಯಾಗುತ್ತದೆ. ಅದಕ್ಕೆ ಕಾರಣ ಪ್ರವಾಸಿಗರು ಸಾಮಾನ್ಯವಾಗಿ ಹೆಚ್ಚಿನ ಉತ್ಪನ್ನಗಳೆಲ್ಲವನ್ನು ಮಲಬಾರ್ ತೀರ ಮತ್ತು ತಮಿಳುನಾಡಿನ ತೀರದಲ್ಲಿ ಸಿಗುತ್ತಿತೆಂದು ಉಲ್ಲೇಖಿಸಿರುವುದು. ಇದು ಅವರು ಉದ್ದೇಶ ಪೂರ್ವಕವಾಗಿ ಮಾಡಿದ ದೋಷವಾಗಿರದೇ ಅದಕ್ಕೆ ಆಗಿನ ಪರಿಸ್ಥಿತಿಯೇ ಕಾರಣವಾಗಿದೆ.[108] ರೋಮನ್ ಗ್ರೀಕ್ ವರ್ತಕರು ಹಾಗೂ ಇತರ ಸಾಹಸಿಗರು ಭಾರತದ ತೀರದವರೆಗೂ ಬರುತ್ತಿದ್ದರೂ ಕೂಡಾ ಒಳನಾಡಿನಲ್ಲಿ ಬರುತ್ತಿರಲಿಲ್ಲ. ಇವರ ಮುಖ್ಯ ಉದ್ದೇಶ ವ್ಯಾಪಾರ ವಾಗಿತ್ತು. ಒಳನಾಡಿಗೆ ಪ್ರವೇಶಿಸುವುದು ದುರ್ಗಮವಾಗಿದ್ದಿತು. ಜೊತೆಗೆ ದೇಶಿಯ ಮತ್ತು ಅರಬ್ ವರ್ತಕರ ವ್ಯಾಪಾರದ ತಂತ್ರವು ಒಂದು ಕಾರಣವಾಗಿತ್ತು. ಇವರು ವ್ಯಾಪಾರದ

ರಹಸ್ಯವನ್ನು ಕಾಯ್ದುಕೊಂಡು ಬಂದಿದ್ದರು. ಏಕೆಂದರೆ ದಾಲ್ಚಿನ್ನಿಯನ್ನು ಅರಬ್‌ವರ್ತಕರು ಭಾರತದ ಪಶ್ಚಿಮ ತೀರದಿಂದ ಕೊಂಡು ರೋಮನ್ನರಿಗೆ ಅದನ್ನು ಸೋಮಾಲಿಯಾದಿಂದ ತಂದುದಾಗಿ ಹೇಳುತ್ತಿದ್ದರು.[109] ಅಲ್ಲದೆ ಎಳ್ಳು, ಎಳ್ಳೆಣ್ಣೆ, ಅಕ್ಕಿ, ತುಪ್ಪ, ಸಕ್ಕರೆ, ಈ ಸರಕುಗಳು ಪೆರಿಪ್ಲಸ್‌ನ ಕರ್ತೃವಿಗೆ ಆಫ್ರಿಕಾದ ಪೂರ್ವ ತೀರದ ಬಂದರುಗಳಿದ್ದುದು ಕಂಡುಬರುತ್ತದೆ. ಹಾಗೂ ಇವುಗಳು ಭಾರತದಿಂದ ಬರುತ್ತವೆಂದು ತಿಳಿಸುತ್ತಾನೆ.[110] ಈ ರೀತಿಯ ರಹಸ್ಯವನ್ನು ಮಾಡಲು ಕಾರಣ ಈ ಸರಕುಗಳನ್ನು ರೋಮನ್ನರಿಂದ ಹೆಚ್ಚಿನ ಬೆಲೆಯನ್ನು ಪಡೆಯುತ್ತಿದ್ದರು. ಭಾರತ ಪ್ರಾಚೀನ ಕಾಲದಲ್ಲಿ ಅತೀ ಹೆಚ್ಚು ಆಮದು ಮಾಡಿಕೊಳ್ಳುತಿದ್ದ ವಸ್ತು, ಕುದುರೆಗಳು ಮತ್ತು ಕೆಲವು ಐಷಾರಾಮಿ ವಸ್ತುಗಳು, ಔಷದಗಳು, ತಾಮ್ರ, ಸೀಸ, ಇತ್ಯಾದಿ.

ತುಳುನಾಡಿನಲ್ಲಿ ವ್ಯಾಪಾರ ಮತ್ತು ವಾಣಿಜ್ಯದ ಒಟ್ಟಾರೆ ವಿನ್ಯಾಸದ ಬದಲಾಗುತ್ತಿರುವ ಪ್ರವೃತ್ತಿಗಳು, ಅದರ ಸರಕು ಸಂಯೋಜನೆಯಲ್ಲಿ ಸ್ವಲ್ಪ ಮಟ್ಟಿಗೆ ಈ ಅವಧಿಯಲ್ಲಿ ಪ್ರದೇಶದ ವಹಿವಾಟಿನಲ್ಲಿ ಪರಿಮಾಣಾತ್ಮಕ ಹೆಚ್ಚಳ ವಿಶಾಲ ಸರಕು ಬೇಸ್‌ಗೆ ಹೊಂದಿಕೆಯಾಯಿತು. ಇದು ವಾಸ್ತವವಾಗಿ ವಿತರಣೆಯ ಪ್ರದೇಶದ ಪಾತ್ರವನ್ನು ಸೂಚಿಸುತ್ತದೆ. ತುಳುನಾಡಿನಲ್ಲಿ ರಫ್ತು ಸರಕುಗಳೆಂದರೆ, ಅಕ್ಕಿ, ಅಡಿಕೆ, ಕಾಳುಮೆಣಸು[111] ತುಳುನಾಡಿನ ವ್ಯಾಪಾರದಲ್ಲಿ ಕಾಣಿಸಿ ಕೊಂಡಿರುವ ಸರಕುಗಳು ಹೀಗಿವೆ; ಎಮ್ಮೆ, ಜಾನುವಾರಗಳು, ಕ್ಯಾಂಬಲ್ಸ್, ಹತ್ತಿದಾರ, ಕಬ್ಬಿಣ, ಬೆಲ್ಲ, ಕಬ್ಬು, ಮಮತಿಗಳು, ಭತ್ತ, ಸೌದೆ (ಉರುವಲು), ಅಕ್ಕಿ, ಗಂಧದ ಎಣ್ಣೆ, ಮತ್ತು ಮೈಸೂರಿನಿಂದ ತಂಬಾಕು, ಮೆಣಸಿನಕಾಯಿಗಳು, ಹತ್ತಿ, ಗೋದಿ, ಶಾಲುಗಳು. ಮರಾಠ ಸಂಸ್ಥಾನದ ಬಟ್ಟೆಗಳು, ತೆಂಗಿನಕಾಯಿ ಮತ್ತು ಗೋವಾದಿಂದ ಉಪ್ಪು, ಮತ್ತು ಅಕ್ಕಿ, ಮತ್ತು ಕೊಡಗಿನಿಂದ ಏಲಕ್ಕಿ. ಇವು ಮುಖ್ಯವಾದ ಆಮದು ಸರಕುಗಳಾಗಿದ್ದವು. ಇಲ್ಲಿಂದ ರಫ್ತು ಮಾಡುವ ಪ್ರಮುಖ ಸರಕುಗಳೆಂದರೆ, ಅಡಿಕೆ, ಏಲಕ್ಕಿ, ತೆಂಗಿನಕಾಯಿ, ಕಾಳುಮೆಣಸು, ಅಕ್ಕಿ ಮತ್ತು ಉಪ್ಪು ಮರಾಠ ರಾಜ್ಯಕ್ಕೆ. ಮೈಸೂರಿಗೆ, ಕುದುರೆ ಮತ್ತು ಉಪ್ಪನ್ನು, ಭತ್ತ, ಅಕ್ಕಿ, ಮತ್ತು ಗೋಧಿಯನ್ನು ಗೋವಾಕ್ಕೆ ಮತ್ತು ಉಪ್ಪನ್ನು ಕೊಡಗಿಗೆ ಸಾಗಿಸಲಾಗುತ್ತಿತ್ತು.

ಪ್ಲಿನಿ, ಟಾಲೆಮಿ ತಿಳಿಸುವಂತೆ ರೋಮ್‌ಗೆ ಅನೇಕ ಖನಿಜ ಸಂಪತ್ತು ರಫ್ತಾಗುತ್ತಿತ್ತು. ವಜ್ರ, ಪಚ್ಚೆ ಗೋಮೇದಿಕ, ಮಲಬಾರ್ ತೀರದಿಂದ ಪಾರದರ್ಶಕ ಶಿಲೆಗಳು, ಇಂದ್ರ ನೀಲಗಳು ರಫ್ತಾಗುತ್ತಿತ್ತು.[112] ಕಬ್ಬಿಣ, ಚಿನ್ನ, ಈ ಎಲ್ಲಾ ಸಂಪತ್ತು ತಿಂಡಿಸ್ ಮುಜಿರಿಸ್, ನೌರಾ ಕಾವೇರಿಪಟ್ಟಣಮ್ ಮೊದಲಾದ ಬಂದರುಗಳ ಮೂಲಕ ರಫ್ತಾಗುತ್ತಿದ್ದವು. ಭಾರತವು

ಹೊರಗಿನಿಂದ ತರಿಸಿಕೊಳ್ಳುತ್ತದೆ. ವಸ್ತುಗಳ ಪ್ರಮಾಣ ಬಹಳ ಕಡಿಮೆ. ಅವುಗಳಲ್ಲಿ ಬೆಳ್ಳಿಯ ಪಾತ್ರೆಗಳು, ನವುರಾದ ಬಟ್ಟೆಗಳು, ಹವಳ, ತಾಮ್ರ ತವರ, ಸೀಸ ಗಾಜು, ಆಂಟಿಮನಿ, ಉತ್ಕೃಷ್ಟ ಮಧ್ಯ ಮತ್ತು ಮುಲಾಮುಗಳು, ಒಣದ್ರಾಕ್ಷಿ, ಕೆನ್ನೀಲಿ ಖರ್ಜೂರ, ಸಿಹಿ ಲವಂಗ ಮೊದಲಾದವು ಸೇರಿದ್ದವು. ಜೊತೆಗೆ ಗುಲಾಮರನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು.[113] ಅಂತರ್ ಪ್ರಾದೇಶಿಕ ವಾಣಿಜ್ಯದ ಮುಖ್ಯ ಸರಕುಗಳೆಂದರೆ, ಕಾಳುಮೆಣಸು, ಅಡಿಕೆ ಮತ್ತು ಉಪ್ಪು. ಉತ್ತರ ಕನ್ನಡದೊಂದಿಗೆ ಮೇಲೆ ತಿಳಿಸಲಾದ ನೆರೆಹೊರೆಯ ರಾಜ್ಯದೊಂದಿಗೆ ಪ್ರಮುಖವಾದ ವ್ಯಾಪಾರದ ವಸ್ತುಗಳನ್ನು ಆಮದು ಮತ್ತು ರಫ್ತು ಮಾಡಲಾಗುತ್ತಿತ್ತು. ತುಳುನಾಡಿನಲ್ಲಿ ಸಮುದ್ರದ ಮೂಲಕ ಆಮದು ಮತ್ತು ರಫ್ತು ವ್ಯಾಪಾರದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸರಕುಗಳು ಕಾಣಿಸಿಕೊಂಡಿವೆ. ಅವುಗಳೆಂದರೆ, ಕಬ್ಬು, ತೆಂಗಿನಕಾಯಿ, ಹತ್ತಿದಾರ, ಅಕ್ಕಿ, ಒಣಮೀನು, ಬಾದಾಮಿ, ಒಣಖರ್ಜೂರ, ಕಿಸ್ಮಿಸ್, ಇಂಗು, ಕರ್ಪೂರ, ಬೆಂಜೈನ್, ಕಬ್ಬಿಣ, ತಾಮ್ರ, ಸತು, ಕುದುರೆ, ಆನೆಗಳು, ಮ್ಯಾಟ್ಸ್, ಎಣ್ಣೆ, ಶಾವಿಗೆ, ರೇಷ್ಮೆ, ಉಪ್ಪಿನಕಾಯಿ, ಒಣಶುಂಠಿ, ಸಕ್ಕರೆಪುಡಿ (ಸಾಫ್ಟ್ ಶುಗರ್), ಚಹಾ, ಲವಂಗ, ಜಾಯಿಕಾಯಿ, ಜಾಯಿಪತ್ರೆ, ಈರುಳ್ಳಿ, ವಿದೇಶಿ ಕಾಗದ, ಪೋರ್ಚುಗೀಸ್ ಕಾಗದ, ಚೀನ ಕಾಗದ, ಶುಗರ್ ಕ್ಯಾಂಡಿ, ನಯವಾದ ಉಣ್ಣೆಯ ಬಟ್ಟೆ, ಡಬ್ಬಿಗಳು, ಶಾಲು, ರೇಷ್ಮೆ ಸರಕುಗಳು, ಹತ್ತಿಸರಕುಗಳು, ಚೀನಾ ಸಾಮಾನುಗಳು, ಗಾಜಿನ ಸಾಮಾನುಗಳು, ಬಿಯರ್, ವೈನ್, ಸ್ಪಿರಿಟ್ಸ್, ಡ್ರಗ್ಸ್, ಹತ್ತಿ, ಮೆಣಸು, ತವರ, ಏಲಕ್ಕಿ, ತುಪ್ಪ, ಒಣಗಿದ ಧಾನ್ಯಗಳು, ಕುದುರೆಗಳು, ಅಮೂಲ್ಯವಾದ ಕಲ್ಲುಗಳು, ಜೀರಿಗೆ, ಗಂಧಕ, ಸೀಸ, ಅರಿಶಿನ, ಕೊತ್ತಂಬರಿ ಬೀಜಗಳು, ಹವಳ, ಕಾಡಿನಮರ ತೇಗ, ಮತ್ತು ಮೀನಿನ ಎಣ್ಣೆ.[114] ಸಮುದ್ರದ ಮೂಲಕ ರಫ್ತು ಸರಕುಗಳು, ಅಕ್ಕಿ, ಅಡಿಕೆ, ತೆಂಗಿನಕಾಯಿ, ಏಲಕ್ಕಿ, ಮೆಣಸಿನಕಾಯಿ, ಶ್ರೀಗಂಧದ ಮರ, ಹತ್ತಿ, ಹತ್ತಿ ತುಂಡುಗಳು, ಅರಿಶಿಣ, ಮೇಣದ ಬತ್ತಿಗಳು, ತೆಂಗಿನನಾರು, ಹುಣಿಸೆಹಣ್ಣು, ತುಪ್ಪ, ಬೆಲ್ಲ, ಕಬ್ಬಿಣ, ಗಂಧಧ ಎಣ್ಣೆ, ಆಮೆ ಚಿಪ್ಪುಗಳು, ಗೇರುಬೀಜ, ಕಾಡುಮರಗಳು, ಶಾರ್ಕ್‌ರೆಕ್ಕೆಗಳು, ಜೇನುತುಪ್ಪ, ಸ್ಪಿರಿಟ್, ತೆಂಗಿನ ಎಣ್ಣೆ, ಮಣಿಗಳು, ಕಾಫಿ, ತೇಗದಮರ, ಹತ್ತಿದಾರ, ಒಣಮೀನು, ರೇಷ್ಮೆ ತುಂಡುಗಳು, ಇತ್ಯಾದಿ.

ಪ್ಲಿನಿ ಮೆಣಸನ್ನು ಕುರಿತು ಹೀಗೆ ಹೇಳಿದ್ದಾನೆ. "ಇಂಡಿಯಾ ದೇಶದಲ್ಲೆಲ್ಲ ಮೆಣಸು ಬೆಳೆಯುತ್ತದೆ. ಆದರೆ ಕೆಲವರು ಇದು ಕಾಕಸಸ್ ಪರ್ವತದ ಇಳಿಜಾರಿನಲ್ಲಿ ಮಾತ್ರ

ಬೆಳೆಯುತ್ತದೆಂದು ಹೇಳುತ್ತಾರೆ. ಈ ಮೆಣಸು ಶುಂಠಿಯೂ ಕಾಡುಗಳಲ್ಲಿ ಬೆಳೆಯುತ್ತದೆ. ಆದರೆ ಇವುಗಳನ್ನು ಚಿನ್ನ ಬೆಳ್ಳಿಯಂತೆ ತೂಕ ಮಾಡಿಕೊಂಡು ಕೊಂಡುಕೊಳ್ಳುತ್ತೇವೆ".[115] ಮಲಬಾರಿಗಳು ಮಂಗಳೂರು, ಹೊನ್ನಾವರ ಮತ್ತು ಭಟ್ಕಳಗಳಿಂದ ಅಕ್ಕಿ, ಅಡಿಕೆ ಮತ್ತು ಮೆಣಸನ್ನು ಇಲ್ಲಿಂದ ಕೊಂಡೊಯ್ಯುತ್ತಿದ್ದರು. ಇವೆಲ್ಲಾ ಸೂಕ್ಷ್ಮವಾಗಿ ಕೊಡುಕೊಳ್ಳುವಿಕೆಯು ನಡೆಯುತ್ತಿತ್ತು. ಸ್ವಲ್ಪ ಪ್ರಮಾಣದಲ್ಲಿ ತೆಂಗಿನಕಾಯಿ, ತೆಂಗಿನಎಣ್ಣೆಯನ್ನು ಮಲಬಾರಿನಿಂದ ತುಳುನಾಡಿಗೆ ತರಿಸಿಕೊಳ್ಳುತ್ತಿದ್ದರು.ಅಬ್ರಾಹಾಂ ಬೆನ್ ಈಜೂ ಯಹೂದ್ಯಿ ವ್ಯಾಪಾರಿ ಟ್ಯುನಿಸಿಯಾದವನು. ಈ ವ್ಯಾಪಾರಿಯು ಈಜಿಪ್ತ್, ಏಡೆನ್ ಮತ್ತು ಭಾರತದಲ್ಲಿ ವ್ಯಾಪಾರ ಮಾಡಿದವನು. ಕ್ರಿ.ಶ. 1132ರಲ್ಲಿ ಭಾರತದಲ್ಲಿ ತುಳುನಾಡಿನ ಮಂಜರೂರು(ಮಂಗಳೂರು)ಗೆ ಹಡಗಿನಲ್ಲಿ ಬಂದಿದ್ದನು. ಹಾಗೆಯೇ ಇಲ್ಲಿ ಮಾರಾಟಕ್ಕೆ ತಂದಿದ್ದ ಗುಲಾಮಳಾದ "ಆಶು" ಎಂಬಾಕೆಯನ್ನು ಹಣಕೊಟ್ಟು ಮಾರಾಟದ ಜಾಲದಿಂದ ಬಿಡಿಸಿ ಅವಳನ್ನು ವಿವಾಹವಾದನು ಎಂದು ಅಮಿತಾವ್ ಘೋಷ್ ತಿಳಿಸಿದ್ದಾನೆ.[116] ಬೆನ್ ಈಜೂ ಮಂಗಳೂರಿನಲ್ಲಿದ್ದಾಗ ಯೆಮೆನ್, ಈಜಿಪ್ತ್ ಮತ್ತು ಉತ್ತರ ಆಫ್ರಿಕಾಗಳ ಜೊತೆಗೆ ಹಡಗುಗಳ ಮೂಲಕ ಆಮದು ರಫ್ತು ವ್ಯಾಪಾರ ನಡೆಸುತ್ತಿದ್ದ. ಆಡೆನ್‌ನ ವಾಪಾರಿಗಳ ಜೊತೆಗೆ ಆತನ ವ್ಯಾಪಾರ ಸಂಬಂಧಿ ಪತ್ರಗಳು ಆಗಿನ ಕಾಲದ ತುಳುನಾಡಿನ ಬಂದರಿನ ಮೂಲಕ ನಡೆಯುತ್ತಿದ್ದ ವಾಣಿಜ್ಯ ವ್ಯವಹಾರಗಳ ಚಿತ್ರಣವನ್ನು ಕೊಡುತ್ತವೆ. ಬೆನ್ ಈಜೂ ಮಂಗಳೂರಿನಿಂದ ಹೆಚ್ಚು ರಫ್ತು ಮಾಡುತ್ತಿದ್ದ ಸಾಮಾಗ್ರಿಗಳು ಕಾಳುಮೆಣಸು, ಅಡಕೆ, ಸಂಬರ, ಜಿನಸುಗಳು, ಸುಗಂಧ ದ್ರವ್ಯಗಳು, ಕಬ್ಬಿಣದ ಸಾಮಗ್ರಿಗಳು, ಆಡೆನ್ ಮತ್ತು ಈಜಿಪ್ಟ್‌ನಿಂದ ಮಂಗಳೂರಿಗೆ ಆಮದು ಮಾಡುತ್ತಿದ್ದ ಸಾಮಗ್ರಿಗಳು ಚಿನ್ನ, ಬೆಳ್ಳಿ, ಸಿಲ್ಕ್, ಗಾಜು, ಸಾಮಾನು, ಕಾಗದ, ಪುಸ್ತಕಗಳು, ಹಾಸುಗಂಬಳಿ, ಮೇಜು, ಬಾಣಲೆಯಂತಹ ಗೃಹೋಪಯೋಗಿ ವಸ್ತುಗಳು, ಹವಳ, ಸಕ್ಕರೆ, ಒಣದ್ರಾಕ್ಷಿ, ಚೀಸ್, ಆಲಿವ್ ಎಣ್ಣೆಯಂತಹ ಆಹಾರಪದಾರ್ಥಗಳು ಮಸ್ಲಿನ್ ಬಟ್ಟೆ, ಹತ್ತಿ ಬಟ್ಟೆ, ಪಿಂಗಾಣಿ ವಸ್ತುಗಳು, ಜೊತೆಗೆ ಬೆನ್ ಈಜೂ ತುಳುನಾಡಿನಲ್ಲಿದ್ದಾಗ ವ್ಯಾಪಾರದ ಜೊತೆಗೆ ಹಿತ್ತಾಳೆ ಮತ್ತು ಕಂಚಿನ ಪಾತ್ರೆ ಪರಡಿ ತಯಾರಿಸುವ ಒಂದು ಕಾರ್ಖಾನೆ ಅಥವಾ ಕರ್ಮಸಾಲೆ ಕುಲುಮೆಯನ್ನು ಹೊಂದಿದ್ದ ಎನ್ನುವ ಮಾಹಿತಿ ದೊರೆಯುತ್ತದೆ. ಆಡೆನ್‌ನಿಂದ ಕಚ್ಚಾ ಕಬ್ಬಿಣ, ತಾಮ್ರ, ತವರಗಳನ್ನು ತರಿಸಿಕೊಂಡು ತನ್ನ ಕಾರ್ಖಾನೆಯಲ್ಲಿ ಅವನ್ನು ಕರಗಿಸಿ ಬಗೆ ಬಗೆಯ ಪಾತ್ರೆಗಳನ್ನು ವಸ್ತುಗಳನ್ನು ತಯಾರಿಸಿ ಹೊರದೇಶಗಳಿಗೆ ರಫ್ತು ಮಾಡುತ್ತಿದ್ದ. ಆಡೆನ್‌ನಿಂದ ನಿರಂತರವಾಗಿ ತಯಾರಿಸುತ್ತಿದ್ದ ಒಂದು ಸಾಮಗ್ರಿ ಎಂದರೆ ಕಾಗದ.

ಮಂಗಳೂರಿನಲ್ಲಿ ಆಗ ಕಾಗದ ಸಿಗುತ್ತಿರಲಿಲ್ಲ. ಉಲ್ಲೇಖಗಳು ಅವನ ಪತ್ರಗಳಿಂದ ದೊರೆಯುತ್ತವೆ. ಬೆನ್ ಈಜೂ ತುಳುನಾಡಿನ ಬೇರೆ ಬೇರೆ ಬಂದರು ಪ್ರದೇಶಗಳಲ್ಲೂ ವ್ಯಾಪಾರ ನಡೆಸುತ್ತಿದ್ದ. ಆತನಿಗೆ 'ಫಾತ್‌ನೂರ್'(ಬಾರ್ಕೂರು)ನಲ್ಲಿ ವ್ಯಾಪಾರ ಇತ್ತು.

ತುಳುನಾಡು ಆಗ್ನೇಯ ಏಷಿಯಾ ರಾಷ್ಟ್ರಗಳೊಂದಿಗೆ ಸಂಬಂಧವನ್ನು ಕೂಡ ಹೊಂದಿತ್ತು. ಆಗ್ನೇಯ ಏಷಿಯಾ ರಾಷ್ಟ್ರಗಳಿಂದ ಶ್ರೀಲಂಕಾಗಳಿಂದ ವ್ಯಾಪಾರಿಗಳು ಸಾಂಬಾರು ಪದಾರ್ಥಗಳನ್ನು ಮತ್ತು ಔಷಧಿಗಳನ್ನು ತರುತ್ತಿದ್ದರು. ಕಚ್ಚಾಸರಕುಗಳನ್ನು ತರಿಸಿಕೊಳ್ಳುತ್ತಿದ್ದರು. ಉದಾ: ಕರ್ಪೂರ, ಪಚ್ಚೆಕರ್ಪೂರ, ಸಂಬಾರ ಇವೆಲ್ಲಾ ಆಗ್ನೇಯಾ ಏಷ್ಯಾ ರಾಷ್ಟ್ರಗಳಿಂದ ಬರುತ್ತಿತ್ತು. ವಿಶೇಷವಾಗಿ ಲವಂಗ ಶ್ರೀಲಂಕಾದಿಂದ ಬರುತ್ತಿತ್ತು. ಮತ್ತು ಚಂದನದ ಮರ ಬರುತ್ತಿತ್ತು. ಮಲೆನಾಡುಗಳಿಂದ ಶ್ರೀಗಂಧವು ತುಳುನಾಡಿಗೆ ಬಂದು ಇಲ್ಲಿಂದ ರಫ್ತಾಗುತ್ತಿತ್ತು. ಘಟ್ಟದ ಮೇಲಿನಿಂದ ಬಂದಂತಹ ಸರಕುಗಳು ತುಳುನಾಡಿನ ಬಂದರುಗಳಿಂದ ರಫ್ತಾಗುತ್ತಿತ್ತು. ಘಟ್ಟದ ಮೇಲಿನಿಂದ ಉತ್ತಮ ತಳಿಯ ಬಿಳಿ ಅಕ್ಕಿ, ಗಟ್ಟಿಬೆಲ್ಲ ತುಳುನಾಡಿಗೆ ಬರುತ್ತಿತ್ತು. ಜೊತೆಗೆ ಇದು ಏಡನ್‌ವರೆಗೂ ರಫ್ತಾಗುತ್ತಿತ್ತು. ರೇಷ್ಮೆ ವ್ಯಾಪಾರವು ಮುಜರಿಸ್ ಬಂದರಿನ ಮೂಲಕ ಭಾರತೀಯ ವ್ಯಾಪಾರಿಗಳು ಚೀನಾದಿಂದ ತಂದು ರೋಮನ್ನರಿಗೆ ರಫ್ತು ಮಾಡುತ್ತಿದ್ದರು. ನಂತರದಲ್ಲಿ ದಕ್ಷಿಣ ಭಾರತದಲ್ಲೂ ರೇಷ್ಮೆಯನ್ನು ಉತ್ಪಾದಿಸುತ್ತಿದ್ದರು. ಇದನ್ನು ಚೀನಾದಿಂದ ತಂದಿರುವುದಾಗಿ ಭಾರತೀಯ ವರ್ತಕರು ಅಧಿಕ ಬೆಲೆಗೆ ರೋಮನ್ನರಿಗೆ ಮಾರಿರುವ ಸಾಧ್ಯತೆಯೇ ಹೆಚ್ಚಾಗಿದೆ.[117]

ವೃತ್ತಿಪರ ವ್ಯಾಪಾರ ಸಮುದಾಯಗಳಿಂದ ಹೊರತುಪಡಿಸಿ, ಬ್ರಾಹ್ಮಣ ಸಹ ವ್ಯಾಪಾರ ಮತ್ತು ವಾಣಿಜ್ಯವನ್ನು ತೆಗೆದುಕೊಳ್ಳುತ್ತಿದ್ದಾರೆ ಎಂದು ತಿಳಿಯಬಹುದು. ನ್ಯೂನಿಜ್ ಬ್ರಾಹ್ಮಣ ವ್ಯಾಪಾರಿಗಳ ಬಗ್ಗೆ ಬರೆಯುತ್ತಾ "ಅವರು ಪ್ರಾಮಾಣಿಕ ಪುರುಷರು, ತೀರ ತೀಕ್ಷ್ಣ ಮತ್ತು ಹೆಚ್ಚು ಪ್ರತಿಭೆಯುಳ್ಳವರು, ಒಳ್ಳೆಯ ಲೆಕ್ಕಿಗರು ಆದರೆ ಕಷ್ಟದ ಕೆಲಸದಿಂದ ಸ್ವಲ್ಪ ದೂರವಿರುತ್ತಾರೆ ಎಂದು ಹೇಳಿದ್ದಾರೆ".[118] ಇದು ಸೆಟ್ಟಿಕಾರ ಮತ್ತು ಸೆಟ್ಟಿ ಸಹ ಯೋಗ್ಯವಾಗಿದೆ ಎಂದು ಗಮನಿಸುವ ವಿಷಯವಾಗಿದೆ. ಇದು ಶಾಸನಗಳಲ್ಲಿ ಅತಿಥೇಯತೆಯನ್ನು ಉಲ್ಲಂಘಿಸಿದೆ. ಉದಾಹರಣೆಗೆ, ಮೂಡಬಿದರೆ ಶಾಸನ ಒಂದಾಗಿದೆ. 15ನೇ ಶತಮಾನದ ಉತ್ತರಾರ್ಧದಲ್ಲಿ ನಿಯೋಜಿಸಲ್ಪಟ್ಟಿದ್ದು, ಸೆಟ್ಟಿಕಾರರನ್ನು ವಿಜ್ಞಾನಗಳಲ್ಲಿ ಪಾರಂಗತಗೊಳಿಸು

ವುದರ ಜೊತೆಗೆ ಬಸದಿಯ ನವೀಕರಿಸುವವರನ್ನು ಚಿತ್ರಿಸುತ್ತದೆ ಮತ್ತು ಚೈತಲ್ಯ ಅವರು ಉದಾತ್ತ ಗುಣಗಳಿಂದ ರೂಪಿಸಲ್ಪಟ್ಟವರು.[119]

ಭಟ್ಕಳ ಬಹಳ ಶ್ರೀಮಂತ ಊರು, ಇಲ್ಲಿ ವಿವಿಧ ರೀತಿಯ ಅಳಲೆಕಾಯಿ ಮುಂತಾದ ಮೂಲಿಕೆಗಳಿವೆ. ಇವುಗಳಿಂದ ಒಳ್ಳೊಳ್ಳೆಯ ಲೇಹ್ಯ ಮುಂತಾದ ಔಷಧಿಗಳನ್ನು ತಯಾರಿಸು ತ್ತಾರೆ. ಓರಸ್ಮಸ್ಸಿನ ಹಡಗುಗಳು ಅರಬ್ಬರಿಗೂ ಪರ್ಷಿಯನ್ನರಿಗೂ ಈ ಔಷಧಿಗಳನ್ನು ತೆಗೆದು ಕೊಂಡು ಹೋಗುತ್ತವೆ. ಅಲ್ಲದೆ ಈ ಭಟ್ಕಳ ಬಂದರಿಗೆ ನರಸಿಂಗನ ಇಡೀ ರಾಜ್ಯಕ್ಕೆ ಬೇಕಾದ ಅನೇಕ ಕುದುರೆಗಳೂ, ಮುತ್ತುಗಳೂ ಪ್ರತಿ ವರ್ಷ ಬರುತ್ತಿದ್ದವು. ಆದರೆ, ಪೋರ್ಚುಗೀಸರ ಕಾರಣದಿಂದಾಗಿ ಇವೆಲ್ಲಾ ಗೋವಾ ನಗರಕ್ಕೆ ಹೋಗುತ್ತವೆ. ಹಾಗೆಯೇ ಏಡನ್ನಿಗೆ ಇಲ್ಲಿಂದ ಹಡಗುಗಳು ಹೋಗಕೂಡದೆಂದು ಪೋರ್ಚುಗೀಸರು ನಿರ್ಬಂಧಿಸಿದ್ದರು. ಆದರೂ ಸಹ ಕಳ್ಳತನದಿಂದ ಹಡಗುಗಳನ್ನು ತುಂಬಿ ಕಳುಹಿಸುತ್ತಾರೆ. ಜೊತೆಗೆ ಅನೇಕ ಮಲಬಾರಿ ಹಡಗುಗಳು ಮತ್ತು ಸಂಬುಕಗಳು ಇಲ್ಲಿಗೆ ತೆಂಗಿನಕಾಯಿ, ತಾಳೆಬೆಲ್ಲ, ತೆಂಗಿನ ಎಣ್ಣೆ, ತಾಳೆಹೆಂಡ ಇವುಗಳನ್ನು ತಂದು ಇವಕ್ಕೆ ಬದಲಾಗಿ ಅಕ್ಕಿ, ಸಕ್ಕರೆ ಮತ್ತು ಕಬ್ಬಿಣಗಳನ್ನು ತೆಗೆದು ಕೊಂಡು ಹೋಗುತ್ತವೆ. ಪೋರ್ಚುಗೀಸರಿಗೆ ತಿಳಿಯದ ಹಾಗೆ ಸಂಭಾರ ಮತ್ತು ಗಂಧಿಗೆ ವಸ್ತುಗಳನ್ನು ಇಲ್ಲಿ ತರುತ್ತವೆ.

ಭಟ್ಕಳ ಪಟ್ಟಣ ಪೋರ್ಚುಗಲ್ ರಾಜನಿಗೆ ವರ್ಷ ವರ್ಷ ಪೊಗದಿ ಸಲ್ಲಿಸುತ್ತದೆ. ಪ್ರತಿವರ್ಷ ಇಲ್ಲಿ ತಾಮ್ರ ಮಾರಾಟವಾಗುತ್ತದೆ. ತಾಮ್ರವನ್ನು ಹಣ ಮಾಡಲು, ಕಡಾಯಿ, ಮುಂತಾದ ಪಾತ್ರೆಗಳನ್ನು ಮಾಡಲು ಒಳನಾಡಿಗೆ ತೆಗೆದುಕೊಂಡು ಹೋಗುತ್ತಾರೆ. ಅಲ್ಲದೆ ಇಲ್ಲಿ ಪಾದರಸ, ಸಿಂಧೂರ, ಹವಳ, ಸ್ಫಟಿಕ ಮತ್ತು ದಂತ ಇವು ಮಾರಾಟವಾಗುತ್ತವೆ. ಭಟ್ಕಳ ಪಟ್ಟಣ ಮಟ್ಟಸವಾದ ಭೂಮಿಯ ಮೇಲೆ ಕಟ್ಟಲ್ಪಟ್ಟಿದೆ. ಜನಭರಿತವಾದ ಊರುಕೋಟೆ ಇಲ್ಲ. ಊರಿನ ಸುತ್ತ ತೋಟ ತುಡಿಕೆಗಳಿವೆ. ತಿಳಿಯಾದ ನೀರು ಸಮೃದ್ಧಿಯಾಗಿ ಸಿಕ್ಕುತ್ತದೆ. ಇಲ್ಲಿ ಪರ್ದನ್ (ಪರ್ದಾವ್ ಎಂಬ ಪೋರ್ಚುಗೀಸ್ ನಾಣ್ಯ) ಎಂಬ ಚಿನ್ನದ ನಾಣ್ಯ ಚಲಾವಣೆ ಯಲ್ಲಿದೆ. ಇದರ ಬೆಲೆ ಮುನ್ನೂರಿಪ್ಪತ್ತು. ಮರವೆಡಿಗಳು, ದಾಮ ಎಂಬ ಬೆಳ್ಳಿಯ ನಾಣ್ಯವೂ ಇತ್ತು. ಇದರ ಬೆಲೆ ಇಪ್ಪತ್ತು ಮರವೆಡಿಗಳು. ಇಲ್ಲಿ ತೂಕಗಳನ್ನು ಬಾಹರ್ (ಭಾರ) ಎಂದು ಕರೆಯುತ್ತಾರೆ. ಒಂದು ಬಾಹರಿಗೆ ಪೋರ್ಚುಗಲ್ಲಿನ ನಾಲ್ಕು ಕ್ವಿಂಟಾಲ್‌ಗಳು.[120] ಮಯಂದೂರ್ ಪಟ್ಟಣ (ಇದು ಬಹುಶಃ ಈಗಿನ ಬೈಂದೂರು) ಬಿಂದು ಎಂಬ ಋಷಿಯ ಹೆಸರಿನಿಂದ

ಬಿಂದೂರು ಆಗಿ, ಆಮೇಲೆ ಬೈಂದೂರು ಆಗಿದೆಯೆಂದು ಅಭಿಪ್ರಾಯವಿದೆ). ಬೈಂದೂರು ಪ್ರದೇಶವು ಭಟ್ಕಳ ಅಧಿಪತ್ಯಕ್ಕೆ ಸೇರಿದೆ. ಇಲ್ಲಿನ ಬೆಳೆ ಮುಖ್ಯವಾಗಿ ಭತ್ತ. ಬೆಳೆದಂತಹ ಭತ್ತ ಭಟ್ಕಳಕ್ಕೆ ಹೋಗುತ್ತದೆ. ಈ ಭತ್ತವನ್ನು ಮುಖ್ಯವಾಗಿ ನೀರಿರುವ ಕಣಿವೆಗಳಲ್ಲಿ ಬೆಳೆಯುತ್ತಾರೆ. ವರ್ಷಕ್ಕೆ ಎರಡು ಬೆಳೆ ತೆಗೆಯುತ್ತಾರೆ. ಈ ಪ್ರದೇಶದಲ್ಲಿ ಬೆಳೆಯುವ ನಾನಾ ತರಹ ಭತ್ತಗಳು ಈ ರೀತಿ ಇವೆ; ಜೀರಸಾಲೆ, ಗಂಧಸಾಲೆ, ರಾಮಸಾಲೆ, ದಬ್ಬಣಸಾಲೆ, ಮೆಂತೆಸಾಲೆ, ಅಜಪಸಾಲೆ, ಕಲಮೇ, ಅಂಬಟ್ಟೇ, ದೊಡ್ಡರೆ, ಕಿನ್ನಿಬೀಜ, ಕಯಮೇ, ಸಮುಂಗೇ, ಮುಂಡಲೇ, ಬಿಳೀಹಳ್ಳಗ ಮತ್ತು ಕೆಂಪು ಹಳ್ಳಗ, ದಡ್ಡೇ, ಕಾಪಿಕಜೇ, ಕುದ್ರುಬೀಜ, ಸುಂಗಲ್, ಬಂತೆಕರೆ, ಕುಂದೆರಕುಟ್ಟಿ ಮತ್ತು ತೆಕ್ಕಂ ಬೊಲಿಯಾರಿ ಸಾಮಾನ್ಯವಾಗಿ ಈ ಭತ್ತಗಳನ್ನೆಲ್ಲಾ ಕುಸುವಿ ಅಕ್ಕಿ ಮಾಡುತ್ತಾರೆ.[121] ಉತ್ತಮ ತರಹ ಭತ್ತಗಳಿಗೆ 'ಮಸ್ಕತಿ' ಎಂಬ ಸಾಮೂಹಿಕ ಹೆಸರುಂಟು. ಈ ಭತ್ತಗಳಿಂದ ಅಕ್ಕಿ ಮಾಡಿ ಮಸ್ಕತ್ ದೇಶಕ್ಕೆ ಕಳುಹಿಸುತ್ತಿದ್ದುದರಿಂದ ಮಸ್ಕತಿ ಎಂಬ ಹೆಸರು ಬರಲು ಕಾರಣವಾಯಿತು. ಕುಸುವಿ ಅಕ್ಕಿ ಕೇರಳಕ್ಕೆ ಹೋಗುತ್ತಿತ್ತು. ಕುಸುವಿ ಮಾಡದೆ ಇರುವ ಅಕ್ಕಿ ಏಡೆನ್‌ಗೆ ಹೋಗುತ್ತಿತ್ತು. ಈ ಮಸ್ಕತಿ ಅಕ್ಕಿಗೆ ಕಾವಿ ಬಣ್ಣಕಟ್ಟಿ ಇದನ್ನು ಗೋವೆಗೆ ರವಾನಿಸುತ್ತಿದ್ದರೆಂಬ ವಿಚಾರ ಬಸರೂರಿನಲ್ಲಿ ತಿಳಿದುಬಂದಿದೆ.[122] ಅತ್ಯುತ್ತಮವಾದ ಭತ್ತಕ್ಕೆ ಗಿರಜತ್ ಎನ್ನುತ್ತಾರೆ. ಎರಡನೆಯ ದರ್ಜೆಯ ಭತ್ತಕ್ಕೆ ಜಾನಿಬಜಲ್ ಎನ್ನುತ್ತಾರೆ. ಮೂರನೆಯದನ್ನು ಕಮಗರ್ ಎಂತಲೂ, ನಾಲ್ಕನೆಯದನ್ನು ಪಚರಿ ಎಂತಲೂ ಕರೆಯುತ್ತಾರೆ. ಇವುಗಳ ರುಚಿ ಮತ್ತು ಬೆಲೆಯು ಬೇರೆ ಬೇರೆಯಾಗಿರುತ್ತದೆ.[123]

ಎರಡು ಸಣ್ಣ ನದಿಗಳ ಬಳಿ ಬಾರಕನೂರು ಅಥವಾ ಬಾರಕೂರು (ಸೀತಾನದಿಯ ದಂಡೆಯ ಮೇಲೆ) ಮತ್ತು ಬಾಸಲೋರ್ ಅಥವಾ ಬಸರೂರು (ವರಾಹಿ ನದಿಯ ದಂಡೆಯ ಮೇಲೆ) ಎಂಬ ಎರಡು ಪಟ್ಟಣಗಳಿವೆ. ಇವೆರಡೂ ನರಸಿಂಗನ ರಾಜ್ಯಕ್ಕೆ ಸೇರಿದವುಗಳು. ಇಲ್ಲಿ ಒಳ್ಳೆಯ ಭತ್ತವನ್ನು ಹೇರಳವಾಗಿ ಬೆಳೆಯುತ್ತಾರೆ. ಭತ್ತವನ್ನು ಕುಟ್ಟಿ, ಕೇರಿ, ಭತ್ತದ ಹುಲ್ಲಿನಲ್ಲಿ ಫನೆಗಾ ಎಂಬ ಮೂಡೆಕಟ್ಟಿ ಮಲಬಾರಿಗೆ ಕಳುಹಿಸುತ್ತಾರೆ. ಒಂದೊಂದು ಫನೆಗಾ ಬೆಲೆ ಭತ್ತದ ಗುಣಮಟ್ಟದ ಮೇಲೆ ನೂರೈವತ್ತರಿಂದ ಇನ್ನೂರು ಮರವೆಡಿಗಳಾಗುತ್ತದೆ. ಓರ್ಮೋಸ್, ಏಡನ್, ಕಹೇರ್, ಮತ್ತು ಇನ್ನೂ ಅನೇಕ ಸ್ಥಳಗಳಿಂದ, ಕನೋರ (ಕಣ್ಣಾನೂರು) ಕ್ಯಾಲಿಕಟ್ಟಿಗೆ ಸಾಮಾನುಗಳನ್ನು ತೆಗೆದುಕೊಂಡು ಹೋಗಲು ಹಡಗುಗಳು ಇಲ್ಲಿಗೆ ಬರುತ್ತವೆ. ಕನೋರ ಮತ್ತು ಕ್ಯಾಲಿಕಟ್‌ಗಳಿಂದ ಮಲಬಾರಿಗಳು ತಾಮ್ರ, ತೆಂಗಿನಕಾಯಿ, ಜಾಗ್ರಾ, ಕೊಬ್ಬರಿ ಎಣ್ಣೆಗಳನ್ನು ತಂದು ಇಲ್ಲಿಂದ ಅಕ್ಕಿ ತೆಗೆದುಕೊಂಡು ಹೋಗುತ್ತಾರೆ. ಮಲಬಾರಿಗಳಿಗೆ

ಅಕ್ಕಿಯೇ ಸರ್ವಸ್ವವಾಗಿರುತ್ತದೆ. ಏಕೆಂದರೆ ಇಲ್ಲಿಯ ಜನಸಂಖ್ಯೆ ಅಪಾರ. ಅಕ್ಕಿ ಇದ್ದರೆ ಸಾಕು ಅವರು ಜೀವನ ಸಾಗಿಸುವರು.[124]

ನೇತ್ರಾವತಿ ಮತ್ತು ಗುರುಪುರ (ಫಲ್ಗುಣೀ) ನದಿ ದಂಡೆಯ ಮೇಲೆ, ಮಂಗಳೂರು ಪಟ್ಟಣ ಕಾಣಸಿಗುತ್ತದೆ. ಇಲ್ಲಿ ಜಂಟೈಲರೂ, ಮೂರರೂ ಇರುವ ಜನಭರಿತ ಊರು ಇದು ನರಸಿಂಗನ ರಾಜ್ಯಕ್ಕೆ ಸೇರಿದೆ. ಹಡಗುಗಳು ಇಲ್ಲಿಂದ ಇಲ್ಲಿ ಸಿಕ್ಕುವ ಕಂದುಬಣ್ಣದ ಅಕ್ಕಿಯನ್ನು ಮಲಬಾರಿಗೆ ಯಾವಾಗಲೂ ತುಂಬಿಕೊಂಡು ಹೋಗುತ್ತವೆ. ಈ ಅಕ್ಕಿ (ಕುಚ್ಚಲು ಅಕ್ಕಿ) ಬಿಳೀ ಅಕ್ಕಿಗಿಂತ ಹೆಚ್ಚು ಆರೋಗ್ಯಕರ ಮತ್ತು ರುಚಿಕರ. ಮಲಬಾರಿನ ಸಾಮಾನ್ಯರು ಬಳಸುವ ಈ ಅಕ್ಕಿಬಹಳ ಅಗ್ಗವಾಗಿ ಇರುತ್ತದೆ. ಇಲ್ಲಿಂದ ಏಡನ್ನಿಗೆ ಮೂರರ ಹಡಗುಗಳಲ್ಲಿ ಮೆಣಸನ್ನು ರವಾನಿಸುತ್ತಾರೆ. ಇಲ್ಲಿಂದ ಮುಂದೆ ಮೆಣಸು ಬೆಳೆಯುತ್ತದೆ. ಮಲಬಾರಿನಲ್ಲಿ ಅಧಿಕವಾಗಿ ಮೆಣಸನ್ನು ಬೆಳೆಸುತ್ತಾರೆ. ಮಂಗಳೂರಿಗೆ ಹೋಲಿಕೆ ಮಾಡಿದರೆ ನಂತರ ಮುಂದೆ ಕುಂಬಳ ಪಟ್ಟಣವನ್ನು (ಕುನ್ಬಳ) ನೋಡಬಹುದು. ಇಲ್ಲಿಯೂ ಕೂಡಾ ಕರೀ ಅಕ್ಕಿಯನ್ನು ಬೆಳೆಯುತ್ತಾರೆ ಮತ್ತು ಮಾಲ್ಡೀವ್ ದ್ವೀಪಗಳಿಗೆ ಸಾಗಿಸುತ್ತಾರೆ. ಅಲ್ಲಿಂದ ತೆಂಗಿನ ನಾರಿನ ಹಗ್ಗವನ್ನು ಆಮದು ಮಾಡಿಕೊಳ್ಳುತ್ತಾರೆ. ಕುನ್ಬಳವು (ನರಸಿಂಗನ) ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದೆ[125].

ಕಾರ್ಕಳದ ಶಾಸನಗಳಲ್ಲಿ 'ಕಾರಕಳದ ಸಮಸ್ತ ಹಲರ'[126] ಸಮ್ಮತದಿಂದ ಎಂಬ ವೇಣೂರಿನ ಶಾಸನಗಳಲ್ಲಿ ಏನೂರು ಮುನ್ನೂರ ಅರವತ್ತು ಆರು ಮಂದಿ ಯೆಳಮೆ ಗೊಳಗಾದ[127] ಸಮಸ್ತ ಹಲರ ಮತ್ತು ಮುನ್ನೂರ ಅರವತ್ತು ಮಂದಿ ಯಳಮೆಗಳು ಮುಖ್ಯವಾದ ಸಮಸ್ತ ಹಲರ[128] ಪ್ರತ್ಯೇಕ ಉಲ್ಲೇಖಗಳು ದೊರಕಿವೆ. ಬಾರಕೂರಿನ ಬೇರೆ ಬೇರೆ ಕೇರಿಗಳಲ್ಲಿ ಸಮಸ್ತ ಹಲರ ಸಂಖ್ಯೆ ಬೇರೆಬೇರೆಯಾಗಿತ್ತು;[129] ಹಾಗೆಯೇ ಇತರ ಪಂಗಡಗಳಾದ ಬಲ್ಲಾಳುಗಳು, ಕೋಲಬಳಿ, ಜನನಿ, ಜನ್ನಿ ಅಥವಾ ಜಮ್ಮಿ, ಜಗತು ಮಹಾಜಗತ್ತು, ಕಟ್ಟಳೆ ಯವರು, ಮಹಾಜನರು, ಪ್ರಜಾವರ್ಗಗಳು ಕಾರ್ಯ ನಿರ್ವಹಿಸುತ್ತಿದ್ದವು. ವಿದೇಶೀ ಪ್ರವಾಸಿ ಅರಬ್ ಕಥನಕಾರನಾದ ಯಾಕೂತ್ (1179–1229) ಮಂಗಳೂರು (ಮಂಜರೂರು) ಮತ್ತು ಬಾರಕೂರು (ಫಾಕನೂರುಗಳು ಮಲಬಾರಿನ ಮುಖ್ಯ ನಗರಗಳೆಂದೂ ಅಲ್ಲಿಂದ 'ಮೆಣಸನ್ನು ರಫ್ತು ಮಾಡಲಾಗುತ್ತಿತ್ತು ಎಂದು ತಿಳಿಸಿದ್ದಾನೆ. ಡಿಮಿಸ್ಕಿ ಮತ್ತು ಇಬ್ನ್‌ಬತೂತರು 14ನೇ ಶತಮಾನದಿಂದ ಮಂಗಳೂರಿನಿಂದ ಹೇರಳವಾಗಿ ಮೆಣಸನ್ನು ಹೊರಗೆ ಕಳುಹಿಸುತ್ತಿದ್ದರೆಂದು

ಉಲ್ಲೇಖಿಸಿದ್ದಾರೆ[130]. 17ನೇ ಶತಮಾನದ ಪ್ರವಾಸಿಗಳು ಗುರುಸೊಪ್ಪೆ ರಾಣಿಯನ್ನು ಮೆಣಸಿನ ರಾಣಿ ಎಂದು ಕರೆದಿರುವುದನ್ನು ಇಲ್ಲಿ ಸ್ಮರಿಸಬಹುದು. ವಿಜಯನಗರಕ್ಕೆ ಭೇಟಿಕೊಟ್ಟ ಪರ್ಷಿಯಾ ರಾಯಭಾರಿ ಅಬ್ದುಲ್ ರಜಾಕನು ತುಳುನಾಡಿನ ಮಂಗಳೂರು ಬಂದರಿನ ಮೂಲಕ ವಿಜಯನಗರ ತಲುಪಿದನು.

ಕ್ರಿ. ಶ. 14ನೇ ಶತಮಾನದಿಂದ 16ನೇ ಶತಮಾನದವರೆಗೆ ಕರ್ನಾಟಕದ ಪಶ್ಚಿಮ ಕರಾವಳಿಯ ಬಂದರುಗಳ ಮುಖಾಂತರ ವಿದೇಶಗಳಿಗೆ ರಫ್ತು ಆಗುತ್ತಿದ್ದ ಪ್ರಮುಖ ವಸ್ತುಗಳೆಂದರೆ ಸಾಂಬಾರ ವಸ್ತುಗಳು, ಲವಂಗ, ಶುಂಠಿ, ಏಲಕ್ಕಿ, ಅಳಲೆಕಾಯಿ, ಹುಣಸೆಹಣ್ಣು, ಕುಂಕುಮ, ಕೇಸರಿ, ನೀಲಿ, ಗಂಧದ ಮರ, ಮೇಣ, ಅಕ್ಕಿ, ನಾರು ವಜ್ರ, ತೆಂಗು, ಕಬ್ಬು, ಸಕ್ಕರೆ, ಹತ್ತಿಬಟ್ಟೆ, ದೂಪ ಇತ್ಯಾದಿ ವಸ್ತುಗಳು ಹಾಗೂ ಅರಬ್ ದೇಶಗಳಿಂದ ಅರಬ್ ಕುದುರೆಗಳನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಅರೇಬಿಯಾದಿಂದ ಒಂದು ವರ್ಷಕ್ಕೆ ಒಂದರಿಂದ ಎರಡು ಸಾವಿರ ಕುದುರೆಗಳು ಭಾರತಕ್ಕೆ ಬರುತ್ತಿದ್ದವು. ಒಂದೊಂದು ಕುದುರೆಯ ಬೆಲೆ 300ರಿಂದ 400 ಕ್ರುಸೆಡೊ ಆಗಿತ್ತು. ಅರಬ್‌ನಿಂದ ಕರ್ಪೂರ, ಖರ್ಜೂರ, ಒಣದ್ರಾಕ್ಷಿ, ಉಪ್ಪು, ಗಂಧಕ ಮತ್ತು ಒರಟಾದ ಸಣ್ಣ ಮುತ್ತುಗಳು ಮತ್ತು ತಾಮ್ರ ಆಮದು ಮಾಡಿಕೊಳ್ಳ ಲಾಗುತ್ತಿತ್ತು. ತಾಮ್ರವನ್ನು ನಾಣ್ಯಗಳ ಮತ್ತು ಪಾತ್ರೆಗಳ ತಯಾರಿಕೆಯಲ್ಲಿ ಬಳಸಲಾಗುತ್ತಿತ್ತು.[131] ಬಿಳಿ ಅಕ್ಕಿ, ಬೂಸಾ, ಸಕ್ಕರೆ, ಕಬ್ಬಿಣ ಮತ್ತು ಔಷಧಿಗಳು ಒರ್ಮೋಜ್‌ಗೆ ರಫ್ತಾಗುತ್ತಿತ್ತು. ಎಂದು ಬಾರ್ಬೋಸ್ ತಿಳಿಸಿದ್ದಾನೆ. ಹೊನ್ನಾವರದಲ್ಲಿ ತಾಳೆಮರದ ಹೆಂಡ ದೊರೆಯುತ್ತದೆ.[132]

ತುಳುನಾಡಿನಲ್ಲಿ ಕಾಳುಗಳ ಬಳಕೆ ಕಡಿಮೆ. ಬೆಳೆ, ತೊಗರಿಬೇಳೆ, ಕಡ್ಲೆಬೇಳೆ ಇವುಗಳ ಬಳಕೆ ತೀರಾ ಕಡಿಮೆ. ಹಾಗೂ ವಿಶೇಷ ಸಂದರ್ಭಗಳಲ್ಲಿ ಮಾತ್ರ ಬಳಸುತ್ತಾರೆ. ಇವೆಲ್ಲಾ ಕಾಳುಗಳು, ಮೈಸೂರು ಕಡೆಯಿಂದ ಬರುತ್ತಿತ್ತು. ಕಣ್ವಅಕ್ಕಿ, ದಪ್ಪಕ್ಕಿ, ಹಾಗೆಯೇ ಸಣ್ಣಕ್ಕಿ ಅಂದರೆ ಗುಲ್ವಾಡಿ ಅಕ್ಕಿಯನ್ನು ಬೆಳೆಯುತ್ತಿದ್ದರು. ಇದನ್ನು ಶ್ರೀಮಂತರು ಸ್ಥಳೀಯ ತುಂಡರಸರು ಮತ್ತು ದೇವಸ್ಥಾನಗಳಲ್ಲಿ ವಿಶೇಷ ಸಂದರ್ಭಗಳಲ್ಲಿ ಇದನ್ನು ಬಳಸುತ್ತಿದ್ದರು. ಇದನ್ನು ಮಳೆಯ ಆಧಾರದಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ಬೆಳೆಯುತ್ತಿದ್ದರು. ಹಾಗೆಯೇ ಇದನ್ನು ತೀರ ಪ್ರದೇಶದಲ್ಲಿ ಬೆಳೆಸುತ್ತಿದ್ದರು. ತುಳುನಾಡಿನಲ್ಲಿ ತೆಂಗಿನಕಾಯಿ ಬಳಕೆ ಹೆಚ್ಚು. ತರಕಾರಿಗಳಲ್ಲಿ ಬಸಳೆ, ಮಟ್ಟಿಗುಳ್ಳ, ಸೌತೆಕಾಯಿ, ಸುವರ್ಣಗೆಡ್ಡೆ, ಕೆಸವನ್ನು ಹೆಚ್ಚು ಬೆಳೆಸುತ್ತಾರೆ. ಹೀಗೆ ಸಾಮಾಜಿಕ ಹಿನ್ನೆಲೆಯಲ್ಲಿ ಆರ್ಥಿಕ ಪರಂಪರೆಯನ್ನು ರೂಪಿಸಿಕೊಳ್ಳಬಹುದು. ಉದಾಹರಣೆಗೆ (ಆಳದ

ಅಂಗಡಿ, ಹೊಸಂಗಡಿ, ಹಳೆಯಂಗಡಿ,) ಬೆಳ್ತಂಗಡಿ ಬೆಲ್ಲ+ತಂಗಡಿ. ಬೆಲ್ಲವನ್ನು ಅದರಲ್ಲೂ ತುಳುನಾಡಿನ ಜನತೆಗೆ ಗಟ್ಟಿ ಬೆಲ್ಲದ ಉಪಯೋಗ ಹೆಚ್ಚು. ಇದು ಘಟ್ಟದಿಂದ ಹೆಚ್ಚು ಬರುತ್ತಿತ್ತು. ಮೈಸೂರಿನಿಂದ ಗಟ್ಟಿಬೆಲ್ಲ ತಯಾರಾಗಿ ಮಡಿಕೇರಿಗೆ ಬಂದು ಅಲ್ಲಿಂದ ತುಳುನಾಡಿಗೆ ಬರುತ್ತಿತ್ತು. ಸಂಪಾಜೆ, ಶಿರಡಿ, ಚಾರ್ಮಾಡಿ, ಬಿಸ್ಲೆ ಇವರೆಡ ಮಧ್ಯೆ ಬೆಳ್ತಂಗಡಿ, ಗಡೆಕಲ್ಲು, ಸಂಸೆಘಾಟ್ ಬೆಳ್ತಂಗಡಿ ಘಾಟ್‌ನಿಂದ ಸರಕುಗಳು ಎತ್ತುಗಳ ಮೇಲೆ ಬರುತ್ತಿತ್ತು. (ಘಾಟ್ಗಳ ಬಗ್ಗೆ ಹಿಂದಿನ ಅಧ್ಯಾಯನದಲ್ಲಿ ಸಾಕಷ್ಟು ವಿವರಣೆಯನ್ನು ನೀಡಿರುತ್ತೇನೆ) ಉದಾಹರಣೆಗೆ, ಬಿಸ್ಲೆ ಘಾಟಿಯನ್ನು ಇಳಿದರೆ ಸುಬ್ರಮಣ್ಯದಲ್ಲಿ ರಾಸಿನ (ಎತ್ತುಗಳ) ಜಾತ್ರೆ ವಿಶೇಷ. ನದಿ ತೀರದಲ್ಲಿ ಉಪ್ಪಿನಂಗಡಿ, ಮಂಗಳೂರು, ಬೈಂದೂರು ತನಕ ಸರಕು ಸಾಗಾಣಿಕೆಯಾಗುತ್ತಿತ್ತು.[133]

ತುಳುನಾಡಿನ ಸ್ಥಳೀಯ ನೆಲೆಯಲ್ಲಿ ಒಂದು ಮುಖ್ಯ– ಜಾನುವಾರಗಳದ್ದು, ಕೃಷಿಕೇಂದ್ರಿತ ಸಮಾಜದಲ್ಲಿ ಜಾನುವಾರುಗಳು ಪ್ರಮುಖವಾಗಿವೆ. ಆದರೆ ಇಲ್ಲಿನ ಹವಾಗುಣವು ರಾಸುಗಳ ಆರೋಗ್ಯಕ್ಕೆ ಅಥವಾ ಏಳಿಗೆಗೆ ಅನಾನುಕೂಲವಾಗಿದೆ. ದನಕರುಗಳು ಅನಾರೋಗ್ಯದ ಬಗ್ಗೆ ಅಥವಾ ದೈವಗಳ ಮುನಿಸಿನಿಂದ ಜಾನುವಾರುಗಳು ಸಾಯುವುದನ್ನು ಪಾಡ್ದಾನಗಳು ಆಗಾಗ ಉಲ್ಲೇಖಿಸುತ್ತವೆ.[134] ಆದುದರಿಂದ ಇಲ್ಲಿನ ಅವಶ್ಯಕತೆಗಳನ್ನು ಪೂರೈಸಲು ರಾಸುಗಳನ್ನು ಘಟ್ಟದ ಮೇಲಿನ ಪ್ರದೇಶಗಳಿಂದ ಕೊಂಡುಕೊಳ್ಳುವುದು ಸಾಮಾನ್ಯ. ಕುಳ್ಕುಂದದ ವಾರ್ಷಿಕ ಜಾನುವಾರು ಸಂತೆಯ ಬಗ್ಗೆ ತಿಳಿಯಬಹುದು. ಘಟ್ಟದ ಮೇಲಿನ ಜನ ದೈವಗಳು ಬಿಸಲೆ ಘಾಟಿಯ ಮಾರ್ಗವಾಗಿ ತುಳುನಾಡಿಗೆ ಬರುವ ವಿಚಾರವು ಪಂಜುರ್ಲಿ ಪಾಡ್ದನದಲ್ಲಿ ತಿಳಿಸುತ್ತದೆ. ಮೇಲಿಂದ ಬಂದ ಹಂದಿಯೊಂದು ಇಲ್ಲಿ ದೈವವಾದ ಸಂದರ್ಭವನ್ನು ಅದು ತಿಳಿಸುತ್ತದೆ. ದೈವಗಳು ಘಟ್ಟದ ಮೇಲಿಂದ ಘಟ್ಟದ ಮಾರ್ಗವಾಗಿ ತುಳುನಾಡಿಗೆ ಬಂದು ಇಲ್ಲಿ ಸುತ್ತಾಡಿ, ನೆಲೆಸಿ ಆರಾಧನೆಯನ್ನು ಕೈಗೊಳ್ಳುವ ವಿಚಾರ ಜನಪದರ ನಂಬಿಕೆಯ ವಿಚಾರಕ್ಕೆ ಸಂಬಂದಿಸಿದ್ದು ಮಾತ್ರವಲ್ಲ ಜನರ ಸಂಪರ್ಕ ವ್ಯವಹಾರಗಳನ್ನು ತಿಳಿಸುತ್ತದೆ. ಪಶ್ಚಿಮ ಘಟ್ಟಗಳ ದಾರಿ ಹಾಗೂ ಅದರ ಮೂಲಕ ನಡೆಯುತ್ತಿದ್ದ ಜಾನುವಾರುಗಳ ವ್ಯಾಪಾರದ ಚಿತ್ರಣ 'ಕನ್ನಲಾಯೆ ಪಾಡ್ದನ'ದಲ್ಲಿ ಸಾಕಷ್ಟು ವಿವರವಾಗಿ ದೊರಕುತ್ತವೆ. ಇದನ್ನು ಜರ್ಮನಿಯ ಹೈಡ್ರುನ್ ಬ್ರೂಕ್ನರ್ ವಿಸ್ತಾರವಾಗಿ ವಿಶ್ಲೇಷಿಸಿದ್ದಾರೆ.

ಬೊಬ್ಬರ್ಯ ಪಾಡ್ದನವು ಹೇಳುವಂತೆ ಬ್ಯಾರಿಗಳು ಅಥವಾ ಮಾಪಿಳ್ಳಾ ವ್ಯಾಪಾರಿಗಳು ಮೊದಲು ಸಂಚಾರಿ ಜೀವನವನ್ನು ನೆಚ್ಚಿಕೊಂಡು ಬೆಲ್ಲ, ಹುರಿಹಗ್ಗ ಇತ್ಯಾದಿಗಳನ್ನು ಮಾರುತ್ತಿದ್ದರು. ಆ ಮೇಲೆ ಅವರು ಹದಿನಾರು ಬಾಗಿಲುಗಳುಳ್ಳ ಮಳಿಗೆಗಳನ್ನು ಸ್ಥಾಪಿಸಿದರು. ನಂತರ ಇವರು ಗೋಧಿ, ರಾಗಿ, ಎಳ್ಳು, ಸುಣ್ಣ, ಎಣ್ಣೆ, ಎಳನೀರು, ಬೆಲ್ಲ, ಜವುಳಿ, ಅಡಿಕೆ, ವೀಳ್ಯದೆಲೆ, ಕಳ್ಳು, ತಂಬಾಕು ಮೊದಲಾದ ಅನೇಕ ವಸ್ತುಗಳನ್ನು ಮಾರಾಟ ಮಾಡಿದರು. ಆದರೆ ಈ ವ್ಯಾಪಾರದಿಂದ ಅವರಿಗೆ ಯಾವುದೇ ಲಾಭವಾಗಲಿಲ್ಲ. ಜೊತೆಗೆ ಜೀವನದ ನಿರ್ವಹಣೆಯು ಕಷ್ಟವಾಯಿತು. ಇದರಿಂದ ವರ್ತಕರು ಹಡಗಿನ ವ್ಯಾಪಾರ ಮಾಡತೊಡಗುತ್ತಾರೆ. ಪಾಡ್ದನವು ಹೇಳುವಂತೆ ಅವರು "ಊರಿನಲ್ಲಿದ್ದ ಅಕ್ಕಿ ಭತ್ತವನ್ನೆಲ್ಲಾ ಅವರು ಹಡಗಿಗೆ ತುಂಬಿದರು". ಹಾಗೆಯೇ ಕೊಚ್ಚಿಯಲ್ಲಿ ವ್ಯಾಪಾರ ಮಾಡಿದರು. ಇದರಿಂದ ಅಧಿಕ ಲಾಭ ಉಂಟಾಯಿತು. ಬಂಗಾರ, ಮುತ್ತು, ಮಾಣಿಕ್ಯ, ವಜ್ರ ವೈಡೂರ್ಯಗಳು ಅವರ ಕೈ ಸೇರಿದವು[135] ಮತ್ಸ್ಯಗಾರಿಕೆಯು ತುಳುನಾಡಿನಲ್ಲಿ ಒಂದು ಮುಖ್ಯ ಲಾಭದಾಯಕ ವ್ಯಾಪಾರವಾಗಿತ್ತು. ಒಣಮೀನುಗಳಿಗೆ ಬೇಡಿಕೆ ಇದ್ದು, ದೋಣಿಗಳ ಮೂಲಕ ಅದನ್ನು ಸಾಗಿಸುತ್ತಿದ್ದರು. ಬೆಲ್ಲದ ಉದ್ಯಮ ಇತ್ತು. ಓಲೆಬೆಲ್ಲ ವಿಶೇಷವಾಗಿತ್ತು. ತಾಳೆಮರದ ಕಳ್ಳುಗೆ ವಿಶೇಷವಾದ ಮನ್ನಣೆ ಪಡೆದಿತ್ತು. ಹಾಗೂ ಉತ್ತಮವಾದ ಗೃಹೋಪಯೋಗಿ ವ್ಯಾಪಾರ ನಡೆಯುತ್ತಿತ್ತು. ಮಣ್ಣಿನ ಪಾತ್ರೆಗಳ ವ್ಯಾಪಾರವು ನಡೆಯುತ್ತಿತ್ತು. ಕುಂಬಾರರು, ಕುರುಬರು ಇದ್ದರು. ಮಲೆಕುಡಿಯರನ್ನು ಕಾಣಬಹುದು. ಒಳ್ಳೆಯ ಜೇನುಕೃಷಿಯನ್ನು ನೋಡಬಹುದು. ಕಾಡಿನಿಂದ ತಂದು ಮದ್ಯವರ್ತಿಗಳಾಗಿ ಮಾರಾಟ ಮಾಡುತ್ತಿದ್ದರು. ಅರಳೆ, ಅಂಟುವಾಳ, ಕರಂಡಕಾಯಿ, ಗೇರುಬೀಜಹೀಗೆ ಕಾಡುತ್ಪತ್ತಿಗಳು ಪ್ರಮುಖವಾದ ಸರಕುಗಳಾಗಿದ್ದವು.[136]ಕಾಡುತ್ಪತ್ತಿ ತುಳುನಾಡಿನಲ್ಲಿ ಜೊತೆಗೆ ಘಟ್ಟದ ಪ್ರದೇಶಗಳ ಮುಖ್ಯ ವ್ಯಾಪಾರ ವಸ್ತುವಾಗಿತ್ತು.ಕರಿಮೆಣಸು,ಕಾಸರಕನ ಬೀಜ, ಸೀಗೆ, ಅರಸಿನ, ಮೆಣಸು, ರಾಮಪತ್ರೆ, ಅಂಟುವಾಳದ ಕಾಯಿ, ನೆರಳೆ ಕಾಯಿ, ಗೇರುಬೀಜ, ದಾಲ್ಚಿನ್ನಿ ಎಲೆ, ಇತ್ಯಾದಿ ಇಲ್ಲಿಂದ ಸಾಗಣೆಯಾಗುವ ಮುಖ್ಯ ವಸ್ತುಗಳು. ಸರಕುಗಳು ಬಜೆ ಹಾಗೂ ಹಂಗಾರಕಟ್ಟೆ ಬಂದರುಗಳ ಮೂಲಕ ಮಂಗಳೂರು ಮತ್ತು ಇತರ ಕಡೆಗಳಿಗೆ ತಲುಪುತ್ತಿತ್ತು. ಕಾಡುತ್ಪತ್ತಿ ವ್ಯಾಪಾರ ತುಂಬ ಲಾಭದಾಯಕವಾಗಿತ್ತು. ಬಜೆ ಬಂದರಿನಿಂದ ದೋಣಿ ಮೂಲಕ ಅಕ್ಕಿ ಭತ್ತವನ್ನು ಒಳನಾಡಿಗೆ ಸಾಗಿಸಿ ವ್ಯಾಪಾರ ನಡೆಸುತ್ತಿದ್ದರು. ವಿದೇಶಿಯರು ಒಣಮೀನನ್ನು ಕೊಳ್ಳುತ್ತಿದ್ದರು. ಚಿನ್ನ ಮತ್ತು ಆಭರಣಗಳು, ದಂತ ಮತ್ತು ಶ್ರೀಗಂಧದ ವಸ್ತುಗಳು, ಕೆಲವು ಮರದ ಸಲಕರಣೆಗಳು, ಗೃಹ ಕೈಗಾರಿಕಾ

ಉತ್ಪನ್ನಗಳಾಗಿದ್ದವು. ಅರಣ್ಯದಿಂದ ಮರ ಮತ್ತು ನಾಟಾಗಳಿಗೂ ಬೆಳ್ಳಿಯ ಬೇಡಿಕೆಯಿತ್ತು. ಸೊಪ್ಪು ಸಹ ವ್ಯಾಪಾರದ ವಸ್ತುವಾಗಿತ್ತು.[137] ಹಳ್ಳಿಗಳಲ್ಲಿ ಕ್ರೈಸ್ತ ಹೆಂಗಸರು ಹೂ ತರಕಾರಿಗಳನ್ನು ಬೆಳೆದು ವ್ಯಾಪಾರ ಮಾಡುತ್ತಿದ್ದರು.[138] ಉದಾಹರಣೆಗೆ ಶಂಕರಾಪುರದಲ್ಲಿ ಮಂಗಳೂರು ಮಲ್ಲಿಗೆಯನ್ನು ಹೆಚ್ಚು ಬೆಳೆಸುತ್ತಿದ್ದರು.

ಈ ಮೇಲಿನ ಅಧ್ಯಯನವನ್ನು ಗಮನಿಸಿದಾಗ ಇದರಲ್ಲಿ ಕರ್ನಾಟಕದ ಕರಾವಳಿ ಸೀಮೆಯಲ್ಲಿ ಅತಿ ಪ್ರಾಚೀನಕಾಲದಿಂದ ಆಧುನಿಕ ಕಾಲಘಟ್ಟದ ಪ್ರಾರಂಭದವರೆಗೆ ಕಂಡು ಬಂದ ವ್ಯಾಪಾರಿ ಸಮುದಾಯ ಮತ್ತು ವ್ಯಾಪಾರ ಕೇಂದ್ರಗಳು ಹಾಗು ವಿದೇಶೀಯ ಮತ್ತು ದೇಶೀಯ ವ್ಯಾಪಾರದಲ್ಲಿ ಬಳಕೆಯಾದ ಸರಕುಗಳನ್ನು ವಿಶ್ಲೇಷಿಸಲಾಗಿದೆ. ಈ ವಿಶ್ಲೇಷಣೆಯ ಆಧಾರದ ಮೇಲೆ ಹೇಳುವುದಾದರೆ ಕರ್ನಾಟಕದ ಅತ್ಯಂತ ಪ್ರಾಚೀನ ವ್ಯಾಪಾರ ಸಂಘಗಳಾದ, ಅಯ್ಯಾವೊಳೆ ಅಯ್ಯುನೂರ್ವರು, ಸೆಟ್ಟಿಕಾರರು, ನಖರು, ನಾನಾದೇಶಿಗಳು, ಹಲರು, ಮಲಯಾಳಿ ವಡ್ಡವ್ಯವಹಾರಿಗಳು ಇತ್ಯಾದಿ ಅನೇಕ ವ್ಯಾಪಾರಿ ಸಂಘಗಳು ಕರ್ನಾಟಕದ ಕರಾವಳಿ ಸೀಮೆಯಲ್ಲಿ ವ್ಯಾಪಾರದಲ್ಲಿ ತೊಡಗಿಕೊಂಡಿದುದು ಶಾಸನಾಧಾರಗಳಿಂದ ಹೆಚ್ಚು ಖಚಿತವಾಗುತ್ತದೆ. ಇವುಗಳ ಪೂರ್ಣವಿವರಣೆಯನ್ನು ನಾವು ಈಗಾಗಲೆ ಈ ಅಧ್ಯಾಯದ ಮೊದಲನೆಯ ಭಾಗದಲ್ಲಿ ನೀಡಲಾಗಿದೆ. ಅದೇ ರೀತಿ ವ್ಯಾಪಾರ ಕೇಂದ್ರಗಳಾಗಿ ಕರಾವಳಿ ಕರ್ನಾಟಕದಲ್ಲಿ ಕಂಡುಬಂದ ಅಂದರೆ ಚಂದ್ರಗಿರಿಯಿಂದ ಮಿರ್ಜಾನ್ ವರೆಗೆ ತುಳುನಾಡಿನ ಎಲ್ಲೆಯಾದಂತಹ ಕಾರವಾರ, ಹೊನ್ನಾವರ, ಭಟ್ಕಳ, ಬೈಂದೂರುನಿಂದ ಪ್ರಾರಂಭಮಾಡಿ, ದಕ್ಷಿಣದಲ್ಲಿ ಕಾಸರಗೋಡು, ಮಂಜೇಶ್ವರ, ಕುಂಬಳ, ಮಂಗಳೂರಿನ ಎಲ್ಲಾ ಬಂದರುಗಳು ಹಾಗೂ ಪಟ್ಟಣಗಳು ಪ್ರಮುಖ ವ್ಯಾಪಾರಿ ಕೇಂದ್ರಗಳಾಗಿದ್ದವು. ಈ ಬಂದರುಗಳನ್ನು ಸಂದಿಸುವ ವ್ಯಾಪಾರಿ ಮಾರ್ಗದಲ್ಲಿದ್ದ ಕಾರ್ಕಳ, ಬೈಂದೂರು, ಬಸರೂರು, ಬೆಳ್ತಂಗಡಿ, ಅಳದಂಗಡಿ, ಜೈನರ ಇತರ ತುಂಡರಸರುಗಳ ರಾಜಧಾನಿಗಳು ವೇಣೂರು, ಮೂಡುಬಿದರೆ, ಇತ್ಯಾದಿ ಸ್ಥಳಗಳಲ್ಲದೆ ಉತ್ತರಕರ್ನಾಟಕ ಪ್ರದೇಶವನ್ನು ಸಂಪರ್ಕಿಸುತ್ತಿದ್ದಂತಹ ಇತರ ಪಟ್ಟಣಗಳು ಕೂಡಾ ವ್ಯಾಪಾರಿ ಕೇಂದ್ರಗಳಾಗಿ ಬಳಕೆಯಾಗುತ್ತಿದ್ದದು ನಮಗೆ ಕಂಡುಬರುತ್ತದೆ. ಈ ವ್ಯಾಪಾರ ಕೇಂದ್ರಗಳಲ್ಲಿ ಕೇವಲ ದೇಶಿಯ ವ್ಯಾಪಾರಸ್ಥರುಗಳಲ್ಲದೆ ಮತ್ತು ದೇಶಿಯ ವ್ಯಾಪಾರಿ ಶ್ರೇಣಿಗಳಲ್ಲದೆ ವಿದೇಶಿಯ ವ್ಯಾಪಾರಿ ಶ್ರೇಣಿಗಳಾದಂತಹ ಹಂಜಮಾನ, ಅರಬ್ಬರು, ತುರುಕರು ಇತರ ವ್ಯಾಪಾರಿ ಶ್ರೇಣಿಗಳು ಇದ್ದ ಬಗ್ಗೆ ನಮಗೆ ಅಲ್ಲಲ್ಲಿ ಉಲ್ಲೇಖಗಳು ಸಿಗುತ್ತವೆ.

ದೇಶದ ವ್ಯಾಪಾರ ವ್ಯವಸ್ಥೆಯನ್ನು ಗಮನಿಸಿದಾಗ ಎರಡು ರೀತಿಯ ವ್ಯಾಪಾರ ವ್ಯವಸ್ಥೆಯನ್ನು ಗಮನಿಸಲು ಸಾಧ್ಯ. ಒಂದು ದೇಶೀಯವಾಗಿ ದೊರೆಯುವ ಹೆಚ್ಚಿನ ಉತ್ಪಾದನೆಯಾದಂತಹ ವ್ಯವಸಾಯೋತ್ಪನ್ನಗಳು ಮತ್ತು ದೇಶದಲ್ಲಿ ಉತ್ಪಾದನೆಯಾದಂತಹ ಉತ್ಪಾದಕ ಸಾಮಗ್ರಿಗಳು. ವ್ಯವಸಾಯೋತ್ಪನ್ನಗಳಲ್ಲಿ ಅತ್ಯಂತ ಹೆಚ್ಚಿನ ಗಮನ ಸೆಳೆಯುವ ಅಂಶಗಳೆಂದರೆ ಸಂಭಾರ ಪದಾರ್ಥಗಳಾದಂತಹ ದಾಲ್ಚಿನ್ನಿ, ಏಲಕ್ಕಿ, ಕರಿಮೆಣಸು, ಶುಂಠಿ ಇತರೆ ಔಷಧೀಯ ಸಸ್ಯಗಳು ಮತ್ತು ಅಕ್ಕಿ ವಿಶೇಷವಾಗಿ ನಮ್ಮ ಗಮನ ಸೆಳೆಯುತ್ತವೆ. ಅತ್ಯಂತ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ಅಕ್ಕಿ ಈ ತೀರದಿಂದ ಏಡೆನ್ ಮತ್ತು ಇತರ ಬಂದರುಗಳಿಗೆ ರಫ್ತಾಗುತ್ತಿದ್ದದ್ದನ್ನು ಕಂಡುಕೊಳ್ಳಬಹುದು. ಅಲ್ಲದೇ ವಿದೇಶಿಯ ವ್ಯಾಪಾರಿಗಳಲ್ಲಿ ನಮಗೆ ಅತ್ಯಂತವಾಗಿ ಹೆಚ್ಚಾಗಿ ಆಮದು ಮಾಡಿಕೊಳ್ಳುತ್ತಿದ್ದ ವಸ್ತುಗಳೆಂದರೆ, ಕುದುರೆಗಳು ಅವುಗಳ ಜೊತೆಗೆ ತಾಮ್ರ, ಬೆಳ್ಳಿ, ಪಾದರಸ ಇತ್ಯಾದಿ ವಸ್ತುಗಳನ್ನು ನಾವು ಆಮದು ಮಾಡಿ ಕೊಳ್ಳುತ್ತಿದ್ದೆವು. ಭಾರತೀಯ ವ್ಯಾಪಾರಿಗಳಲ್ಲಿನ ಪ್ರಮಾಣವನ್ನು ಗಮನಿಸಿದಾಗ ಕುದುರೆ ಯೊಂದನ್ನು ಹೊರತುಪಡಿಸಿದರೆ ಬಹುತೇಕವಾಗಿ ಕಾಡಿನ ವಸ್ತುಗಳಾದಂತಹ ಶ್ರೀಗಂಧ, ಮರದ ದಿಮ್ಮಿಗಳು ಇತ್ಯಾದಿಗಳು ಕೂಡಾ ರಫ್ತಾಗುತ್ತಿದ್ದವು. ಒಟ್ಟಾರೆ ಆಮದು ಮತ್ತು ರಫ್ತನ್ನು ಗಮನದಲ್ಲಿರಿಸಿಕೊಂಡಾಗ ಭಾರತದಿಂದ ರಫ್ತಾಗುತ್ತಿದ್ದ ಸರಕುಗಳ ಸಂಖ್ಯೆ ಮತ್ತು ಅವುಗಳ ಆರ್ಥಿಕ ಮಟ್ಟ ಅಧಿಕವಾಗಿದ್ದು, ಆಮದುಮಾಡಿಕೊಳ್ಳುತ್ತಿದ್ದ ವಸ್ತುಗಳ ಸಂಖ್ಯೆ ಕಡಿಮೆ ಇದ್ದರೂ ಕುದುರೆಗಳಿಗೆ ಅತಿಯಾದ ಬೆಲೆಯನ್ನು ಕೊಡುತ್ತಿದ್ದುದ್ದರಿಂದ ನಮ್ಮ ಆರ್ಥಿಕ ವ್ಯವಹಾರ ಅಥವಾ ಭಾರತೀಯ ಸಂಪತ್ತು ಮಧ್ಯಕಾಲೀನ ಯುಗದ ನಂತರ ವಿದೇಶಗಳಿಗೆ ಹರಿದು ಹೋಗಲು ಅನುಕೂಲವಾಯಿತ್ತೆಂಬ ವಿಚಾರಗಳನ್ನು ಇಲ್ಲಿ ಗಮನಿಸಬಹುದಾಗಿದೆ.

**4.5. ಅಕ್ಕಿ ವ್ಯಾಪಾರ:**

ಭತ್ತದ (ಅಕ್ಕಿ) ಉತ್ಪಾದನೆ ಪ್ರಾಚೀನ ಕಾಲದಿಂದಲೂ ಆಗುತ್ತಾಬಂದಿದೆ. ಇದು ಇಲ್ಲಿನ ಜನರ ಸಂಸ್ಕೃತಿಯಾಗಿದೆ. ಕರಾವಳಿಯಿಂದ ಘಟ್ಟದ ಅಂಚಿನವರೆಗೆ ವ್ಯವಸಾಯಕ್ಕೆ ಯೋಗ್ಯವಾದ ಸಾಕಷ್ಟು ಫಲವತ್ತಾದ ಭೂಮಿ ಲಭ್ಯವಿದೆ. ಕೃಷಿ ಸಂಪತ್ತಿನ ದೃಷ್ಟಿಯಲ್ಲಿ ನೋಡುವುದಾದರೆ ಭತ್ತದ ಬೆಳೆಯೇ ಆರ್ಥಿಕತೆಯ ಆಧಾರ. ಭತ್ತ ಈ ಪ್ರದೇಶದ ಮುಖ್ಯ ಬೆಳೆಯಾಗಿದೆ. ಎಲ್ಲೆಲ್ಲಿ ಭತ್ತ ಬೆಳೆಯಲು ಅನುಕೂಲವಿದೆಯೋ ಅಂತಹ ಕಡೆಗಳಲ್ಲಿ ನಟ್ಟಿಯನ್ನು ಮಾಡುತ್ತಿದ್ದರು. ಇದು ಇಲ್ಲಿನ ರೈತರು ಬೆಳೆಸಿಕೊಂಡು ಬಂದ ಒಂದು ಪರಿಪಾಟ (culture). ತದನಂತರ ಅಕ್ಕಿಗೆ ಬೇರೆಬೇರೆ ರಾಷ್ಟ್ರ, ರಾಜ್ಯಗಳಲ್ಲಿ ಬೇಡಿಕೆಯನ್ನು ಕಾಣುತ್ತೇವೆ.

ಮುಂದೆ ಇದು ವ್ಯಾಪಾರದಲ್ಲಿ ಒಂದು ಪ್ರಮುಖವಾದ ರಫ್ತು ಬೆಳೆಯಾಗಿದೆ. ತುಳುನಾಡಿನ ವ್ಯಾಪಾರಿಗಳೊಡನೆ ಪೋರ್ಚುಗೀಸರು ನಿಕಟ ವ್ಯಾಪಾರ ಸಂಪರ್ಕವನ್ನು ಹೊಂದಿದ್ದರು. ಇಲ್ಲಿ ಬೆಳೆಯುವ ಅಕ್ಕಿಗೆ ಗೋವಾದಲ್ಲಿ ಬಾರಿ ಬೇಡಿಕೆ ಇದ್ದಿದ್ದರಿಂದ ಅಲ್ಲಿಗೆ ಕಳುಹಿಸಿಕೊಡುತ್ತಿದ್ದರು. ಇದನ್ನು ಮಸ್ಕತ್, ಬಾಂಬೆ, ಗೋವಾ ಮತ್ತು ಮಲಬಾರ್‌ಗೆ ಕಳುಹಿಸಲಾಗುತ್ತದೆ. ಅದರ ರಫ್ತಿನ ಮೇಲಿನ ಕರ್ತವ್ಯಗಳನ್ನು ಮೇಜರ್ ಮನ್ರೋ ಕಡಿಮೆಗೊಳಿಸಿದ್ದರೂ ಬೆಲೆಯಲ್ಲಿ ಯಾವುದೇ ವ್ಯತ್ಯಾಸವನ್ನು ಮಾಡಲಿಲ್ಲ ಮತ್ತು ಈ ಅಳತೆಯಿಂದ ರೈತರು ಯಾವುದೇ ಪ್ರಯೋಜನವನ್ನು ಹೊಂದಿರುವುದಿಲ್ಲ.[139]

ಕ್ರಿ.ಶ. 12ನೇ ಶತಮಾನದಿಂದ ಬಸ್ರೂರಿನಿಂದ ವಿದೇಶೀ ಸಾಗರೋತ್ತರ ಸಂಪರ್ಕವಿತ್ತು. ಇಲ್ಲಿ ಬೆಳೆದ ಅಕ್ಕಿಯನ್ನು ರಫ್ತು ಮಾಡಲಾಗುತ್ತಿತ್ತು. ಅರಬ್ಬರು ಈ ಪ್ರದೇಶದಿಂದ ರಫ್ತಾಗುತ್ತಿದ್ದ ಅಕ್ಕಿ ಪಡೆಯಲು ಆಸಕ್ತಿ ಹೊಂದಿದ್ದರು.[140] 16ನೇ ಶತಮಾನದ ಮೊದಲ ದಶಕದಲ್ಲಿ ಬಸ್ರೂರಿನಿಂದ ಹಲವಾರು ರೀತಿಯ ಅಕ್ಕಿಯನ್ನು ರಫ್ತು ಮಾಡುವ ಪ್ರಮುಖ ರೇವು ಆಗಿತ್ತು. ಭತ್ತವನ್ನು ಕುಟ್ಟಿ, ಕೇರಿ ಭತ್ತದ ಹುಲ್ಲಿನಲ್ಲಿ 'ಫನೆಗಾ' ಎಂಬ ಮೂಡೆಕಟ್ಟಿ ಮಲಬಾರಿಗೆ ಕಳುಹಿಸುತ್ತಿದ್ದರು. ಹಾಗೆಯೇ ವಿವಿಧ ಸ್ಥಳಗಳಿಗೆ ಅಕ್ಕಿ ರಫ್ತಾಗುತ್ತಿತ್ತು. ಕಣ್ಣನೂರು, ಕಲ್ಲಿಕೋಟೆ, ಒರ್ಮಜ್ ಮತ್ತು ಏಡನ್‌ಗಳಿಗೆ ಈ ರೇವಿನಿಂದ ಅಕ್ಕಿಯನ್ನು ತೆಗೆದುಕೊಂಡು ಹೋಗುತ್ತಿದ್ದರು. ಒರ್ಮಜ್ ಮತ್ತು ಏಡನ್‌ಗಳಿಂದ ವ್ಯಾಪಾರಸ್ಥರು ಅಕ್ಕಿ ವ್ಯಾಪಾರಕ್ಕೆ ಇಲ್ಲಿ ತಮ್ಮ ಮಚುವೆಗಳಲ್ಲಿ ಬರುತ್ತಿದ್ದರು.[141]

16ನೇ ಶತಮಾನದಲ್ಲಿ ಬಂದ ವಿದೇಶಿ ಪ್ರವಾಸಿಗರು ತೋಂಪಿರೇಸ್ ಮತ್ತು ಸೀಜರ್ ಫೆಡ್ರಿಕ್ ಮತ್ತು ಲಿನ್‌ಕೊಸ್ಟಲ್‌ರವರು ಕನ್ನಡ ಕರಾವಳಿಯ ವ್ಯಾಪಾರ ಮತ್ತು ಪೋರ್ಚುಗೀಸರ ವರ್ಚಸ್ಸು ಕುರಿತಾಗಿ ತಿಳಿಸಿದ್ದಾರೆ. ತುಳುನಾಡಿನಲ್ಲಿ ನಡೆಯುವ ಅಕ್ಕಿ ವ್ಯಾಪಾರದ ಮೇಲೆ ಪೋರ್ಚುಗೀಸರ ಪ್ರಭಾವವನ್ನು ತಿಳಿಸುತ್ತಾನೆ. ದೊಂ ದು ಆರ್ತೆದೆ ಮೆನೇಜಸ್‌ನ ವರದಿಯಲ್ಲಿ ಗೋವಾಕ್ಕೆ ಮಂಗಳೂರಿನಿಂದ ಅಕ್ಕಿ ಬರುತ್ತಿತ್ತು. ಹಾಗೆಯೇ ಮಂಗಳೂರಿನಿಂದ ಬಂಗರಾಜನು ಅಕ್ಕಿಯನ್ನು ಸಲ್ಲಿಸುತ್ತಿದ್ದೆನೆಂದು ತಿಳಿಸಿದೆ. ತುಳುನಾಡಿನಲ್ಲಿ ದಪ್ಪಕ್ಕಿಯನ್ನು ಬೆಳೆಯುತ್ತಿದ್ದರು (ಮಿರ್ಜಾನ್‌ನ ಮೇರ್ಜಿಯೋ ದೊಡ್ಡ ನದಿಯ ನೀರನ್ನು ಬಳಸಿ) ಇದಕ್ಕೆ ಬಾರೀ ಬೇಡಿಕೆ ಇದ್ದುದ್ದರಿಂದ ಮಲಬಾರಿಗಳು ಸಂಬಕ್ ಎಂಬ ಹೆಸರಿನ ಸಣ್ಣದೋಣಿಯನ್ನು ಬಳಸಿ ಅಕ್ಕಿಯನ್ನು ತೆಗೆದುಕೊಂಡು ಹೋಗುತ್ತಿದ್ದರು. ಹೂನೂರನ್ನು (ಹೊನ್ನಾವರ) ಮಲಬಾರಿಗಳು

ಪೊವರನ್ ಎಂದು ಕರೆಯುತ್ತಾರೆ. ಇವರ ಮುಖ್ಯ ಆಹಾರ ಅಕ್ಕಿ ಆಗಿದೆ. ಇದನ್ನು ಕೊಂಡೊಯ್ಯಲು ಇಲ್ಲಿಗೆ ಬರುತ್ತಿದ್ದರು. ಭಟ್ಕಳದಲ್ಲಿ ನೆಲೆಸಿದ ಮೂರರು, ಜೆಂಟೈಲರು ಎಂಬ ವ್ಯಾಪಾರಿಗಳು ಅಕ್ಕಿ ವ್ಯಾಪಾರ ಮಾಡುತ್ತಿದ್ದರು. ಇದನ್ನು ಜರ್ಮನಿಯಿಂದ ಬಂದ ಹಡಗುಗಳಲ್ಲಿ ಕಳುಹಿಸುತ್ತಿದ್ದರು. ತುಳುನಾಡಿನಲ್ಲಿ ಬೆಳೆಯುತ್ತಿದ್ದ ಅಕ್ಕಿಯನ್ನು ಪೋರ್ಚುಗೀಸರು ಗೋವಾಕ್ಕೆ ಕಳುಹಿಸುತ್ತಿದ್ದರು.[142]

ಭಟ್ಕಳ ಮತ್ತು ಬಸ್ರೂರಿನಲ್ಲಿ ಪೋರ್ಚುಗೀಸರ ಅಕ್ಕಿ ವ್ಯಾಪಾರವನ್ನು ಸಾಕಷ್ಟು ನೋಡುತ್ತೇವೆ. ಮಸ್ಕತ್, ಜೆಡ್ಡಾ ಒರ್ಮರ್ಝ್ ಮುಂತಾದ ಕೊಲ್ಲಿ ಪ್ರದೇಶಗಳಿಗೆ ಇಲ್ಲಿಂದಲೇ ಅಕ್ಕಿ ರಫ್ತಾಗುತ್ತಿತ್ತು. ಪೋರ್ಚುಗೀಸರ ವ್ಯಾಪಾರದ ಇನ್ನೊಂದು ಮುಖವೆಂದರೆ ಕಾಣಿಕೆಯ ವಸೂಲಾತಿ. ಅಕ್ಕಿಯ ನೇರ ಖರೀದಿಯಲ್ಲದೇ, ಪೋರ್ಚುಗೀಸರು ವಾರ್ಷಿಕವಾಗಿ ಸ್ಥಳೀಯ ಅರಸರಿಂದ ಬಲವಂತವಾಗಿ ಕಾಣಿಕೆ ಪಡೆಯುತ್ತಿದ್ದರು. ಭಟ್ಕಳ, ಗೇರುಸೊಪ್ಪೆ, ಹೊನ್ನಾವರ, ಬಸ್ರೂರು ಮತ್ತು ಉಳ್ಳಾಲಗಳ ಸ್ಥಳೀಯ ನಾಯಕರು ಮತ್ತು ಕೆಲವೊಮ್ಮೆ ವ್ಯಾಪಾರಿಗಳ ಜೊತೆಗೂ ಒಪ್ಪಂದ ಮಾಡಿಕೊಂಡು ವಾರ್ಷಿಕ ಅಕ್ಕಿ ಪೂರೈಕೆಯನ್ನು ನಿಗದಿಪಡಿಸುತ್ತಿದ್ದರು. ಉದಾಹರಣೆಗೆ, ಭಟ್ಕಳದಿಂದ ವಾರ್ಷಿಕ 1500 ಚೀಲದಷ್ಟು ಅಕ್ಕಿಯನ್ನು ನೀಡುವಂತೆ 1502ರಲ್ಲಿ ಷರತ್ತು ಹೇರಿದ್ದ ಪೋರ್ಚುಗೀಸರು 1509ರಲ್ಲಿ ಅದಲ್ಲಿ 2000 ಚೀಲಕ್ಕೇರಿಸಿದರು. ಹಾಗೆಯೇ ಬಸ್ರೂರಿನಿಂದಲೂ ವಾರ್ಷಿಕ 500 ಚೀಲಗಳಷ್ಟು ಅಕ್ಕಿ ಕಾಣಿಕೆಯನ್ನು ವಸೂಲು ಮಾಡಲು ಯತ್ನಿಸಿದರು.

16ನೇ ಶತಮಾನದ ಮಧ್ಯಭಾಗದಲ್ಲೂ ಎಸ್ತಾಡೊ ಡ ಇಂಡಿಯಾವು ನಿಯಮಿತವಾಗಿ ಅಕ್ಕಿಯ ರೂಪದಲ್ಲಿ ಕರಾವಳಿಯ ಹೊನ್ನಾವರ, ಭಟ್ಕಳ, ಬಸ್ರೂರಿನಿಂದ ಕಾಣಿಕೆಯನ್ನು ವಸೂಲು ಮಾಡುತ್ತಿತ್ತು. 16ನೇ ಶತಮಾನದ ಮಧ್ಯಭಾಗದಿಂದಲೇ ಬಸ್ರೂರು ಗೋವಾಕ್ಕೆ ಅಕ್ಕಿಯನ್ನು ಪೂರೈಸುವ ಜೀವ–ಜಾಲವಾಯಿತು. ಹಾಗೆಯೇ ಬೈಂದೂರು, ಬಾರ್ಕೂರು ಮತ್ತು ಮಂಗಳೂರಿನಿಂದಲೂ ಅಕ್ಕಿಯನ್ನು ಹೇರಿದ್ದ ಸಾಲುಸಾಲು ನೌಕೆಗಳು (150ರಷ್ಟು) ಗೋವಾದ ರಕ್ಷಣಾನೌಕೆಗಳ ಜತೆಗೆ, ಗೋವಾಕ್ಕೆ ಸಾಗುತ್ತಿದ್ದವು. ಬಸ್ರೂರು ಮುಖ್ಯವಾಗಿ ಅಕ್ಕಿ ಬಂದರೆಂದು ಗುರುತಿಸಲ್ಪಟ್ಟಿದೆ. ಭಟ್ಕಳ, ಬಸ್ರೂರು, ಬಾರ್ಕೂರುಗಳಿಂದ ಉತ್ತಮ ದರ್ಜೆಯ ಬಿಳಿ ಅಕ್ಕಿಯನ್ನು ರಫ್ತು ಮಾಡಲಾಗುತ್ತಿತ್ತು. ದಕ್ಷಿಣ ಬಂದರುಗಳಿಂದ ಮುಖ್ಯವಾಗಿ ಮಂಗಳೂರು ಮತ್ತು ಕುಂಬಳೆಗಳಿಂದ, ದಪ್ಪ, ಕೆಂಪು, ಕಪ್ಪು ಮತ್ತು ಒರಟಾದ ತುಂಡು ಅಥವಾ ಕಡಿ

ಅಕ್ಕಿಯನ್ನು ರಫ್ತು ಮಾಡಲಾಗುತ್ತಿತ್ತು. ಇಲ್ಲಿಂದ ದಕ್ಷಿಣದ ಮಲಬಾರಿಗೂ, ಉತ್ತರದ ಕೊಂಕಣ, ಪರ್ಶಿಯನ್, ಕೊಲ್ಲಿ ಮತ್ತು ಕೆಂಪು ಸಮುದ್ರದ ಬಂದರುಗಳಿಗೆ ಅಕ್ಕಿ ರಫ್ತಾಗುತ್ತಿತ್ತು.[143]

ಭಟ್ಕಳ ಬಂದರು ಪರ್ಶಿಯಾ ಗಲ್ಫ್ ಮತ್ತು ಕೆಂಪು ಸಮುದ್ರದ ನಡುವೆ ವ್ಯಾಪಾರ ಸಂಪರ್ಕ ಹೊಂದಿತ್ತು. ಜಿರಿಗೈ ಎಂದು ಕರೆಯಲ್ಪಡುವ ಬಿಳಿ ಅಕ್ಕಿ ರಫ್ತಾಗುತ್ತಿತ್ತು. ಹಾಗೆಯೇ ಬಸ್ರೂರು ಪ್ರದೇಶದಲ್ಲಿ ಹೇರಳವಾಗಿ ಭತ್ತವನ್ನು ಬೆಳೆಯುತ್ತಿದ್ದರು ಮತ್ತು ನೇರವಾಗಿ ಸಾಗರೋತ್ತರ ವಿದೇಶಗಳಿಗೆ ರಫ್ತು ಮಾಡಲಾಗುತಿತ್ತು. ಕ್ರಿ.ಶ. 16ನೇ ಶತಮಾನದ ಅಂತ್ಯ ಹಾಗೂ 17ನೇ ಶತಮಾನದ ಆದಿಭಾಗದ ವೇಳೆಗೆ ಬಸ್ರೂರು, ಭಟ್ಕಳ ಬಂದರಿಗೆ ಸಮಾನ ವಾಗಿ ಅಭಿವೃದ್ಧಿ ಹೊಂದಿತ್ತು. 1570ರ ದಶಕದಿಂದ ಬಸ್ರೂರು ಬಂದರಿನಲ್ಲಿ 35 ಮಂದಿ ಪೋರ್ಚುಗೀಸ್ ವರ್ತಕರು ವ್ಯಾಪಾರ–ವಹಿವಾಟಿನಲ್ಲಿ ತೊಡಗಿಸಿಕೊಂಡಿದ್ದರು. ಭತ್ತವನ್ನು ರಫ್ತುಮಾಡುವ ಪೂರ್ವ ಬಂದರಾಗಿ ಬಸ್ರೂರು ಬೆಳೆಯತೊಡಗಿತು. ಇದೇ ಸಮಯದಲ್ಲಿ ಭತ್ತ ಸಾಗಣೆ ವ್ಯಾಪಾರದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಪೋರ್ಚುಗೀಸರು ಒಂದು ಸಣ್ಣ ವ್ಯಾಪಾರಿ ಕೋಟೆಯನ್ನು ನಿರ್ಮಿಸಿಕೊಂಡಿದ್ದರು. ಈ ಮೊದಲು ಭತ್ತದ ವ್ಯಾಪಾರ ವಹಿವಾಟಿನಲ್ಲಿ ಸಾರಸ್ವತರು ಪ್ರಾಬಲ್ಯ ಗಳಿಸಿದ್ದರು. ಮೂಲತಃ ಇವರು ಬಸ್ರೂರಿನವರೇ ಆಗಿದ್ದರು. ಸಮೀಪದ ಕುಂದಾಪುರವನ್ನು ಭತ್ತದ ಸಗಟು ಕೇಂದ್ರವನ್ನಾಗಿ ನಿರ್ಮಿಸಿ, ಒಳನಾಡಿನ ವಿವಿಧ ಭಾಗಗಳಿಂದ ರೈತರು, ವರ್ತಕರು ಭತ್ತವನ್ನು ತಂದು ಈ ಕೇಂದ್ರದಲ್ಲಿ ಶೇಖರಿಸುತ್ತಿದ್ದರು. ಈ ಕ್ರಯ–ವಿಕ್ರಯ ಚಟುವಟಿಕೆಯಲ್ಲಿ ಸಾರಸ್ವತ ವರ್ತಕರು ಮುಂಚೂಣಿ ಯಲ್ಲಿದ್ದರು. ಇವರು ಸಮೀಪದ ಬಸ್ರೂರು ಬಂದರಿಗೆ ತಂದು ಮಸ್ಕತ್, ಕೆಂಪು ಸಮುದ್ರ ಮತ್ತು ಪರ್ಶಿಯಾ ಹಾಗೂ ಕೊಲ್ಲಿ ರಾಷ್ಟ್ರಗಳಿಗೆ ರಫ್ತು ಮಾಡುತ್ತಿದ್ದರು. 1570 ಮತ್ತು 80ರ ದಶಕದಲ್ಲಿ ಸಾರಸ್ವತ ಸಗಟು ವ್ಯಾಪಾರಿಗಳು ಪೋರ್ಚುಗೀಸರೊಂದಿಗೆ ತೀವ್ರ ಪೈಪೋಟಿಗೆ ಒಳಗಾಗಬೇಕಾಯಿತು. ಹಾಗೆಯೇ ಪೋರ್ಚುಗೀಸರು ಬಸ್ರೂರಿನಲ್ಲಿ ಪ್ರಾರಂಭಿಸಿದ್ದ ಸುಂಕ ಠಾಣವನ್ನು ಮುಚ್ಚಬೇಕಾಯಿತು. ಪೋರ್ಚುಗೀಸರು ಈ ಭತ್ತದ ವ್ಯಾಪಾರದಲ್ಲಿ ಏಕಸ್ವಾಮ್ಯ ಗಳಿಸಿದ್ದರು. ಹಾಗೂ ಅಲ್ಪಾವಧಿಯಲ್ಲಿಯೇ ಇದು ಅಂತ್ಯಗೊಂಡಿತು. ಇವರಿಬ್ಬರು ಭತ್ತದ ವ್ಯಾಪಾರದಲ್ಲಿ ಸಮಾನವಾಗಿ ಪಾಲ್ಗೊಂಡಿದ್ದರು. ಪೋರ್ಚುಗೀಸರ ಹಿಡಿತದಲ್ಲಿದ್ದ ಗೋವಾ ಮತ್ತು ಕೊಚ್ಚಿನ್ ಬಂದರು ಪ್ರದೇಶದ ಮೂಲಕ ಬಸ್ರೂರಿನಿಂದ ಸಗಟು ರೂಪದಲ್ಲಿ ಭತ್ತವನ್ನು

ತಂದು ಆ ಮೂಲಕ ಸಿಲೋನ್, ಮಲಕಾ ಮತ್ತು ಮೊಜಾಂಬಿಕ್ ರಾಷ್ಟ್ರಗಳಿಗೆ ಭತ್ತವನ್ನು ರಫ್ತು ಮಾಡುತ್ತಿದ್ದರು. ಹೀಗೆ ಸಾರಸ್ವತ ಮತ್ತು ಪೋರ್ಚುಗೀಸ್ ವರ್ತಕರು ಜೀರಿಗೈ ಎಂದು ಕರೆಯುತ್ತಿದ್ದ ಅತ್ಯುತ್ತಮ ಗುಣಮಟ್ಟದ ಭತ್ತ ಹಾಗೂ ಅಮುಟ್ಟಿ ಎಂದು ಕರೆಯುತ್ತಿದ್ದ, ಸಾಧಾರಣ ಭತ್ತವನ್ನು ಹೇರಳ ಪ್ರಮಾಣದಲ್ಲಿ ರಫ್ತು ಮಾಡುತ್ತಿದ್ದರು. ಒಳನಾಡಿನ ಮುಖಾಂತರ ರೈತರು/ವರ್ತಕರು ಭತ್ತವನ್ನು ತಂದು ಭತ್ತದ ಸಗಟು ಕೇಂದ್ರದಲ್ಲಿ ವಿಕ್ರಯಿಸು ತ್ತಿದ್ದರು.[144] ಅಲ್ಲದೇ ಈ ಭತ್ತದ ಬೆಳೆಯ ಬಗ್ಗೆ ಜನರ ಜೀವನಕ್ಕೆ ಹತ್ತಿರವಾದ ಬೇಸಾಯಕ್ಕೆ ಸಂಬಂಧಿಸಿದಂತೆ ಜನಪದ ಹಾಡುಗಳಲ್ಲಿ ಹಾಗೂ ಪಾಡ್ದನಗಳಲ್ಲಿ ಉಕ್ತವಾಗಿರುವುದನ್ನು ತಿಳಿಯಬಹುದು. ಜನಪದ ಹಾಡುಗಳಿರುವುದು ತುಳುವಿನಲ್ಲಿಯೇ, ಕೆಲವೊಮ್ಮೆ ಕಲ್ಯಾಣಪುರ ನದಿಯ ಉತ್ತರ ಭಾಗದ ಪ್ರದೇಶದ ದೈವಗಳು ಅಥವಾ ಘಟ್ಟದ ಬದಿಯ ದೈವಗಳು ಕನ್ನಡದಲ್ಲಿ ಮಾತನಾಡುವುದುಂಟು. ಹಾಗೆಯೇ ಕೇರಳ ಪ್ರದೇಶದ ದೈವಗಳು ಮಲಯಾಳದಲ್ಲಿ ವ್ಯವಹರಿಸುವುದು. ಅಂದರೆ ದೈವಗಳು ಜನರೊಡನೆ ವ್ಯವಹರಿಸುವುದು ಅವರವರ ಭಾಷೆಯಲ್ಲಿಯೇ.[145]

ಪಾಡ್ದನಗಳು ನಿರ್ದಿಷ್ಟ ಕಥೆಯನ್ನು ಹೇಳುವ ಜನಪದ ಕಾವ್ಯಗಳು ತುಳುನಾಡಿನ ಸಮಗ್ರ ಹಾಗೂ ಸಂಕೀರ್ಣ ಜೀವನಚಿತ್ರ ಪಾಡ್ದನಗಳಲ್ಲಿ ಬಿಂಬಿತವಾಗಿದೆ. ಪಾಡ್ದನಗಳಲ್ಲಿ ತುಳುನಾಡಿನ ಚಿತ್ರಣವು ಬಹುತೇಕ ಬೇಸಾಯ ಕೇಂದ್ರಿತ ಬೇಸಾಯದ ಅನೇಕ ವಿಚಾರಗಳು, ಸಮಸ್ಯೆಗಳು, ಆತಂಕಗಳು, ಅದರೊಳಗೆ ಸೇರಿಕೊಂಡ ಹಲವು ಆಚರಣೆ, ನಂಬಿಕೆಗಳು ಕರಾವಳಿಯ ಜಾನಪದದಲ್ಲಿ ತುಂಬಿಹೋಗಿದೆ. ವಿಷೇಶವಾಗಿ ಬೊಬ್ಬರ್ಯ ಪಾಡ್ದನವು ಸಾಗರೋತ್ತರ ಮತ್ತು ಕರಾವಳಿ ವ್ಯಾಪಾರಿಗಳ ಕುರಿತು ನೀಡುವ ವಿವರಗಳು ಈ ಪ್ರದೇಶದ ಆರ್ಥಿಕ ಮತ್ತು ಸಾಮಾಜಿಕ ಜೀವನವನ್ನು ಅಧ್ಯಯನ ಮಾಡಿದ ಇತಿಹಾಸಕಾರರಿಗೆ ಇರುವ ಮಾಹಿತಿಯನ್ನು ಬಹಳಷ್ಟು ಹೋಲುತ್ತವೆ. "ಊರಿನಲ್ಲಿದ್ದ ಅಕ್ಕಿ ಭತ್ತವನ್ನೆಲ್ಲಾ ಅವರು ಹಡಗಿಗೆ ತುಂಬಿದರು" ಎಂಬ ಪಾಡ್ದನದ ಮಾತು ಪಶ್ಚಿಮ ಕರಾವಳಿಯು ಪರ್ಶಿಯನ್ ಕೊಲ್ಲಿ, ಮಸ್ಕತ್ ಹಾಗೂ ಮಲಬಾರಿಗೆ ಅಕ್ಕಿಯನ್ನು ರಫ್ತುಮಾಡುವ ಅಥವಾ ಮಲಬಾರಿನಿಂದ ಮಾಲ್ಡೀವಿಗೆ ಪುನಃ ರಫ್ತುಮಾಡುವ ಕೇಂದ್ರವಾಗಿತ್ತು ಎಂಬುದನ್ನು ತಿಳಿಸುತ್ತದೆ. ಪೋರ್ಚುಗೀಸರು ಬಸ್ರೂರನ್ನು ಅಕ್ಕಿ ರಫ್ತಿನ ಕೇಂದ್ರವಾಗಿ ಬಳಸಿದರು.[146] ಅಲ್ಲಿಂದ ಪರ್ಶಿಯನ್ ಕೊಲ್ಲಿ ಮತ್ತು ಪಶ್ಚಿಮ ಕರಾವಳಿಯ ಅನೇಕ ಪಟ್ಟಣಗಳಿಗೆ ಅಕ್ಕಿಯನ್ನು

ಸರಬರಾಜು ಮಾಡುವ ವ್ಯಾಪಾರವನ್ನು ಕೈಗೊಂಡರು. ಸಂಜಯ್ ಸುಬ್ರಹ್ಮಣ್ಯಮ್‌ರವರ ಲೆಕ್ಕಾಚಾರದಂತೆ 1630ರ ಸುಮಾರಿಗೆ ಕೆನರಾ ಕರಾವಳಿಯಿಂದ ರಫ್ತಾದ ಅಕ್ಕಿಯ ಪ್ರಮಾಣ 505 ಮಿಲಿಯನ್ ಕಿಲೋ ಗ್ರಾಂ. ಇದರಲ್ಲಿ ಬಹಳಷ್ಟು ಗೋವಾಕ್ಕೆ ಹೋದರೂ, ಅಲ್ಲಿಂದ ಅದು ಇತರ ಕಡೆಗೆ ರಫ್ತಾಗುತ್ತಿತ್ತು.[147] ಬೊಬ್ಬರ್ಯ ಪಾಡ್ದನವು ತಿಳಿಸಿರುವಂತೆ ಮಕ್ಕಾ ಮತ್ತು ಮಕಾಯ್‌ಗಳಿಗೆ ಹಡಗುಗಳು ಹೋಗಿತ್ತಿದ್ದವು. ಈ ಕರಾವಳಿ ವರ್ತಕರ ನಾವೆಗಳು ಪಶ್ಚಿಮ ಮತ್ತು ಪೂರ್ವದೇಶಗಳೊಡನೆ ವ್ಯಾಪಾರ ನಡೆಸುತ್ತಿದ್ದವು.[148] ಬೊಬ್ಬರ್ಯನು ಓರ್ವ ವಿಶೇಷವಾದ ಮುಸ್ಲಿಂ ನಾವಿಕ ಮತ್ತು ವ್ಯಾಪಾರಿಯಾಗಿದ್ದ. ಸಮುದ್ರದಲ್ಲಿ ದುರ್ಮರಣವನ್ನಪ್ಪಿ ದೈವದ ಸ್ಥಾನವನ್ನು ಗಳಿಸಿದ, ಅಲ್ಲದೆ ಕರಾವಳಿಯ ವ್ಯಾಪಾರ–ವಾಣಿಜ್ಯದ ಬಗ್ಗೆಯು ಸಾಕಷ್ಟು ಬೆಳಕು ಚೆಲ್ಲುತ್ತದೆ. ಪಶ್ಚಿಮ ಕರಾವಳಿಯು ಭಾರತದ ಪೂರ್ವ ಕರಾವಳಿ ಹಾಗೂ ಚೀನಾ ದೇಶದೊಡನೆ ವ್ಯಾಪಾರ ಸಂಬಂಧಗಳನ್ನಿಟ್ಟುಕೊಂಡಿತ್ತು. ಮಲಬಾರಿನ ಪಟ್ಟಣಗಳಿಗೆ ಅಕ್ಕಿಯನ್ನು ರಫ್ತಿಗಾಗಿ ಕಳುಹಿಸುತ್ತಿತ್ತು. ಇದನ್ನು ಬಾರ್ಬೊಸ ಉಲ್ಲೇಖಿಸುತ್ತಾನೆ.[149] ಸ್ಥಳೀಯ ಜಾನಪದವು ಅಕ್ಕಿ ಭತ್ತದ ರಫ್ತಿನ ಬಗ್ಗೆ ತಿಳಿಸುತ್ತದೆ.[150] ತುಳು ಜಾನಪದವು ಬಹುತೇಕ ಬೇಸಾಯ ಕೇಂದ್ರಿತವಾಗಿದೆ. ಈ ಬೇಸಾಯವು ನದಿಗಳನ್ನು ಹೆಚ್ಚಾಗಿ ಅವಲಂಬಿಸದೆ ಮಳೆಯ ನೀರನ್ನು ಸಣ್ಣ ಪುಟ್ಟ ತೊರೆ ತೋಡುಗಳಿಗೆ ತಡೆಗಳನ್ನು ಕಟ್ಟಿ ಶೇಖರಿಸಿ ನೀರನ್ನು ಕೃಷಿ ಕಾರ್ಯಗಳಿಗೆ ಬಳಸುತ್ತಾರೆ.[151]

ಹಾಗೆಯೇ ಅಕ್ಕಿ ಭತ್ತದ ಬೆಳೆಯ ಜೊತೆಗೆ ಈ ತುಳು ಪಾಡ್ದನವು ವ್ಯಾಪಾರದ ಮತ್ತು ವ್ಯಾಪಾರಿಗಳ ಬಗ್ಗೆ ಸಾಕಷ್ಟು ಮಾಹಿತಿ ಕೊಡುತ್ತದೆ. ಇಲ್ಲಿ ವ್ಯಾಪಾರವನ್ನು ಒಳನಾಡಿನ ವ್ಯಾಪಾರ ಮತ್ತು ಸಾಗರೋತ್ತರ ವ್ಯಾಪಾರ ಎಂದು ವಿಂಗಡನೆ ಮಾಡಲಾಗಿದೆ. ಏಕೆಂದರೆ, ತುಳುನಾಡು ದೊಡ್ಡ ಪ್ರಮಾಣದಲ್ಲಿ ಕರಾವಳಿ ಪ್ರದೇಶವನ್ನು ಹೊಂದಿರುವುದರಿಂದ ಇದು ಅನಿವಾರ್ಯವಾಗಿದೆ. ಇಲ್ಲಿನ ಆರ್ಥಿಕ ವಿಚಾರಗಳ ಬಗ್ಗೆ ಪಾಡ್ದನಗಳಲ್ಲಿ ಯಾವ ಕಾಲಕ್ಕೆ ಸಂಬಂಧಿಸಿದ್ದು ಎಂದು ನಿರ್ಧರಿಸುವುದು ಕಷ್ಟಸಾಧ್ಯ. ಸಾಮಾನ್ಯವಾಗಿ ವಿಜಯನಗರ ಹಾಗೂ ಅನಂತರದ ಕಾಲಘಟ್ಟಕ್ಕೆ ಸೇರಿರಬಹುದು. ಪಂಜುರ್ಲಿ ಪಾಡ್ದನದಲ್ಲಿ ವಿಜಯನಗರದ ಪ್ರಸ್ತಾಪವಿದೆ. ದೈವಗಳು ಮತ್ತು ಅವುಗಳ ಸ್ಥಾನಗಳನ್ನು ಶಾಸನಗಳು ಸುಮಾರು 14ನೇ ಶತಮಾನದ ಮಧ್ಯಭಾಗದಿಂದ ಉಲ್ಲೇಖಿಸತೊಡಗುತ್ತವೆ ಎಂಬುದು ವಸಂತಮಾಧವರ ಅಭಿಪ್ರಾಯವಾಗಿದೆ.[152] ಕುಂದಾಪುರ ತಾಲೂಕಿನ ಎಲ್ಲ ಪ್ರದೇಶಗಳಲ್ಲೂ ಬೆಳೆಯುವ ಅತೀ

ಮುಖ್ಯವಾದ ಆಹಾರ ಬೆಳೆ ಭತ್ತ. ಈ ತಾಲೂಕಿನಲ್ಲಿ ಭತ್ತದ ಬೆಳೆಗೆ ನಾಟಿ ಮಾಡುವ ಪದ್ಧತಿಯನ್ನು ಅನುಸರಿಸಲಾಗುತ್ತದೆ. ಕುಂದಾಪುರ ತಾಲೂಕಿನಲ್ಲಿ ಭತ್ತದ ಬೆಳೆಯು ಎಪ್ಪತ್ತರ ದಶಕದ ವರೆಗೆ ಅತಿ ಮುಖ್ಯ ಬೆಳೆಯಾಗಿದ್ದು ಕ್ರಮೇಣ ಅದರ ಪ್ರಾಮುಖ್ಯ ಕಡಿಮೆಯಾಗುತ್ತಿದೆ.

ಕೆಳದಿ ನಾಯಕರ ಆಳ್ವಿಕೆಯ ಕಾಲದಲ್ಲಿ ಅಕ್ಕಿಯ ವ್ಯಾಪಾರ ಭರದಿಂದ ನಡೆಯುತ್ತಿತ್ತು. ಹಾಗೂ ತುಳುನಾಡಿನ ಬಂದರಿನಿಂದ ರಫ್ತಾಗುತ್ತಿತ್ತು ಎಂದು 1745ರ ಇಸವಿಯಲ್ಲಿ ಮಂಜೇಶ್ವರದಲ್ಲಿ ಸಿಕ್ಕಿದ ಕಾಗದ ದಾಖಲೆ ತಿಳಿಸುತ್ತದೆ. ಮೊದಲಿಗೆ ಇಲ್ಲಿನ ವ್ಯಾಪಾರ ಪೋರ್ಚುಗೀಸರ ಕೈಯಲ್ಲಿತ್ತು. ತದನಂತರ ಸ್ಥಳೀಯರ ಕೈಸೇರಿತು. ಇದರಲ್ಲಿ ಪ್ರಮುಖವಾಗಿ ಹರಿ ಕಮಟಿ (ಹರಿಕಾಮತ್) ಕೆಳದಿ ನಾಯಕರ ವ್ಯಾಪಾರಸ್ಥರಾಗಿದ್ದರು. ಅಲ್ಲದೇ ಪೋರ್ಚುಗೀಸರು ಸ್ಥಳೀಯ ಅರಸು ಮನೆತನದೊಡನೆ ಕಪ್ಪವನ್ನು, ಅಕ್ಕಿಯ ರೂಪದಲ್ಲಿ ವಸೂಲಿ ಮಾಡುತ್ತಿದ್ದರು. ಇಷ್ಟಲ್ಲದೇ ಅವರ ವ್ಯಾಪಾರ ಜುಲುಮೆ ರೀತಿಯಾಗಿತ್ತು, ಆಗಾಗ ತಮ್ಮ ತೋಳ್ಬಲವನ್ನು ತೋರಿಸುತ್ತಿದ್ದರು. ಇಟಾಲಿಯನ್ ಪ್ರವಾಸಿ ವರ್ಥೆಮಾ 1506ರಲ್ಲಿ ಭಾರತವನ್ನು ಸಂದರ್ಶಿಸಿದ್ದು ಮಂಗಳೂರು ಬಂದರದಲ್ಲಿ ಸುಮಾರು 60 ಅಕ್ಕಿ ತುಂಬಿದ ಹಡಗುಗಳು ಹೊರಡಲು ಅಣಿಯಾಗಿದ್ದವು ಎಂದಿದ್ದಾನೆ.[153]

ಕಾಳು ಮೆಣಸು, ಅಡಿಕೆ, ಹೊಗೆಸೊಪ್ಪು, ಹತ್ತಿಬಟ್ಟೆ, ಹತ್ತಿಯ ನೂಲು, ಕಾಚು, ಕೊಬ್ಬರಿ, ಉಪ್ಪು, ಸಾರಾಯಿ, ಬೆಲ್ಲ, ಎಳ್ಳೆಣ್ಣೆ ಮತ್ತು ತೆಂಗಿನಕಾಯಿ ಈ ತಾಲೂಕಿನ ವ್ಯಾಪಾರದ ವಸ್ತುಗಳಲ್ಲಿ ಸೇರಿದ್ದುವು. ಆದರೆ ಇವೆಲ್ಲ ಬಹುಶಃ ವ್ಯಾಪಾರದ ಏರಿಳಿತಗಳಿಗೆ ಕಾರಣವಾಗುತ್ತಿರಲಿಲ್ಲ. ಮಲಬಾರಿನ ಕಾಳುಮೆಣಸಿನಂತೆ ಈ ತಾಲೂಕಿನ ಮಾತ್ರವಲ್ಲ, ಇಡೀ ಜಿಲ್ಲೆಯ ವ್ಯಾಪಾರದ ಮಟ್ಟವನ್ನು ನಿರ್ಧರಿಸುತ್ತಿದ್ದುದು ಇಲ್ಲಿನ ಅಕ್ಕಿ ವ್ಯಾಪಾರ. ಅಕ್ಕಿನ ರಫ್ತಿನ ಏಕಸ್ವಾಮ್ಯ ಪಡೆದಿದ್ದ ಅರಬ್ ವ್ಯಾಪಾರಿಗಳಿಂದ ಇಲ್ಲಿನ ಅಕ್ಕಿ ಅರೇಬಿಯ, ಮಸ್ಕತ್ ಮತ್ತು ಪರ್ಶಿಯನ್ ಕೊಲ್ಲಿ ರಾಷ್ಟ್ರಗಳಿಗೆ ರಫ್ತಾಗುತ್ತಿತ್ತು. 17ನೆಯ ಶತಮಾನದ ಆದಿ ಭಾಗದಲ್ಲಿ ಬಸ್ರೂರು ಬಂದರಿನಲ್ಲೇ ಪ್ರತಿ ವರ್ಷ ಕನಿಷ್ಠ $3^1/_2$ ಮಿಲಿಯ ಕಿಲೊ ಅಕ್ಕಿ ಪೋರ್ಚುಗೀಸ್ ವಸಾಹತುಗಳಿಗೆ (ಗೋವಾ, ಮಲಾಕ್ಕಾ, ಮಸ್ಕತ್ ಮತ್ತು ಮೊಝಾಂಬಿಕ್) ರಫ್ತಾಗುತ್ತಿತ್ತೆಂದು ಸಂಜಯ ಸುಬ್ರಹ್ಮಣ್ಯಂರವರ ಸಂಶೋಧನ ಲೇಖನದಿಂದ ತಿಳಿದುಬರುತ್ತದೆ. ಡಚ್ಚರೂ ಬಸ್ರೂರಿನಲ್ಲಿ ಅಕ್ಕಿ ವ್ಯಾಪಾರದಲ್ಲಿ ತೊಡಗಿದ್ದರೆಂಬ ಬಗ್ಗೆ ದಾಖಲೆಯಿದೆ. ಐರೋಪ್ಯ ರಾಷ್ಟ್ರಗಳ

ನಡುವೆ ಅಕ್ಕಿ ವ್ಯಾಪಾರದ ಸ್ಪರ್ಧೆ ನಡೆದಾಗ ಅರಬ್ ವ್ಯಾಪಾರಿಗಳು ಇದರ ಪ್ರಯೋಜನ ಪಡೆದುಕೊಂಡರು. ಈ ವೇಳೆಗಾಗಲೇ ನೈಸರ್ಗಿಕ ಕಾರಣಗಳಿಂದಾಗಿ ಪತ್ತೆಮಾರುಗಳಾಗಲೀ, ಹಡಗುಗಳಾಗಲೀ, ಬಸ್ರೂರು ಬಂದರಲ್ಲಿ ತಂಗಲು ಅಸಾಧ್ಯವಾದ್ದರಿಂದ ಗಂಗೊಳ್ಳಿ ಬಂದರಿನಲ್ಲಿ ಅವರು ತಮ್ಮ ಅಕ್ಕಿ ವ್ಯಾಪಾರವನ್ನು ಭದ್ರಗೊಳಿಸಿಕೊಂಡರು. ಗಂಗೊಳ್ಳಿ ಬಂದರ್‌ನಿಂದ ಅರೇಬಿಯ ಪರ್ಶಿಯಾ ಮತ್ತು ಜ಼ಾಂಜ಼ಿಬಾರ್‌ಗೆ ಅಕ್ಕಿ ರಫ್ತಾಗುತ್ತಿತ್ತೆಂದು ಸ್ಪರಕ್‌ರು ದೃಢೀಕರಿಸಿದ್ದಾರೆ.[154]

ಹೈದರಾಲಿಯ ಕಾಲದಲ್ಲಿಯೂ ಕೂಡಾ ವ್ಯಾಪಾರ ವಾಣಿಜ್ಯ ಬೇಸಾಯಕ್ಕೆ ಪ್ರಾಮುಖ್ಯ ದೊರೆತಿರುವುದು ಕಾಣುತ್ತೇವೆ. ಹೈದರಾಲಿಯು ಪ್ರಮುಖವಾಗಿ ಲಾಭದ ಉದ್ದೇಶದಿಂದ ವಾಣಿಜ್ಯ ಬೆಳೆಗಳಿಗೆ ಪ್ರೋತ್ಸಾಹ ನೀಡಿರುವುದನ್ನು ಗಮನಿಸಬಹುದು. ತುಳುನಾಡಿನಲ್ಲಿ ಪ್ರಮುಖ ಬಂದರಾಗಿದ್ದ ಮಂಗಳೂರನ್ನು ನೌಕಾನೆಲೆಯನ್ನಾಗಿ ಪರಿವರ್ತಿಸಲು ಕೂಡಾ ಮುಂದಾದನು. ತುಳುನಾಡು ಪ್ರಾಚೀನ ಕಾಲದಿಂದಲೂ ದೇಶ ವಿದೇಶಗಳೊಡನೆ ವ್ಯಾಪಾರ ಸಂಬಂಧವನ್ನು ಐತಿಹಾಸಿಕ ಆಧಾರಗಳಿಂದ ತಿಳಿಯಬಹುದು. ಅಕ್ಕಿಯ ಜೊತೆಗೆ ವಾಣಿಜ್ಯ ಬೆಳೆಗಳಿಗೆ ಹೆಚ್ಚಿನ ಪ್ರಾಮುಖ್ಯ ಕೊಟ್ಟರು. ಏಕೆಂದರೆ ವಿದೇಶಗಳಲ್ಲಿ ಸಾಕಷ್ಟು ಬೇಡಿಕೆಯಿದ್ದು, ಅಡಿಕೆ, ಮೆಣಸು, ತೆಂಗು, ಏಲಕ್ಕಿ, ಸಂಭಾರ ಪದಾರ್ಥಗಳ ಪೂರೈಕೆಗೆ ಬೆಳೆಗಳಿಗೆ ಪ್ರೋತ್ಸಾಹಿಸಿದ ಇದು ಲಾಭದ ಉದ್ದೇಶವೂ ಹೌದು. ಹೈದರಾಲಿಯು ತುಳುನಾಡಿನ ಮೇಲೆ ಹಿಡಿತ ಸಾಧಿಸಿದ. ಮಂಗಳೂರು, ಬಾರಕೂರು, ಬಸ್ರೂರು ಮೊದಲಾದ ಬಂದರುಗಳ ಮೂಲಕ ಅಕ್ಕಿ ಹಾಗೂ ವಾಣಿಜ್ಯ ಸಂಬಂಧಗಳನ್ನು ಏರ್ಪಡಿಸಿದ್ದ.[155]

ಬಸರೂರಿನಿಂದ ಮಸ್ಕತ್‌ಗೆ ಅಕ್ಕಿ ರಫ್ತಾಗುತಿತ್ತು. ಇದಕ್ಕೆ ಮಸ್ಕತಿ ಅಕ್ಕಿ ಎಂದು ಕರೆಯಲಾಗಿದೆ. ಪರ್ಷಿಯ ದೇಶಗಳಲ್ಲಿ ಈ ಅಕ್ಕಿಗೆ ಭಾರೀ ಬೇಡಿಕೆ ಇತ್ತು. ಸಿದ್ದಾಪುರ, ಅಂಪಾರು, ಹಳ್ನಾಡು, ಕಾರ್ವಾಡಿ, ಹಸೋಳ್, ಹಟ್ಟಿಯಂಗಡಿ, ಗುಲ್ವಾಡಿ, ಕರ್ಕುಂಜೆ ಇತ್ಯಾದಿ ಒಳನಾಡು ಪ್ರದೇಶಗಳಿಂದ ಭತ್ತವನ್ನು ಭಂಡಸಾಲೆಗೆ ತರಿಸಿಕೊಂಡು ಅವುಗಳನ್ನು ಒನಕೆಯಲ್ಲಿ ಕುಟ್ಟಿ ಅಕ್ಕಿ ಮಾಡುತ್ತಿದ್ದರು. ಇದು ಒಂದು ರೀತಿಯಲ್ಲಿ ಉದ್ಯೋಗವನ್ನು ಕೂಡಾ ಸೃಷ್ಟಿಸಿತ್ತು. ಎತ್ತಿನ ಗಾಡಿಯಲ್ಲಿ, ಮಚುವೆಗಳಲ್ಲಿ ಭತ್ತವನ್ನು ಒಳನಾಡಿನಿಂದ ತರುತ್ತಿದ್ದರು.

ಕಣ್ವ ಅಕ್ಕಿ ಊಟಕ್ಕೆ ಹೆಚ್ಚು ರುಚಿ ಹಾಗೂ ಪೌಷ್ಟಿಕತೆಯಿಂದ ಕೂಡಿತ್ತು. ಇದರಲ್ಲಿ ಕಪ್ಪು ಮತ್ತು ಕೆಂಪು ಅಕ್ಕಿಯನ್ನು ಈ ಕಣ್ವ ಅಕ್ಕಿಯಲ್ಲಿ ಕಾಣಬಹುದು. ಮಲಬಾರಿಗಳು ಈ ಅಕ್ಕಿಯನ್ನು ಕಾಯಮೆ ಎಂದು ಹೇಳುತ್ತಾರೆ. ಅಂದರೆ, ಕಾಯಮೆ ಅಕ್ಕಿ(ಕಣ್ವ ಅಕ್ಕಿ)ಯ ಬೇಡಿಕೆ ಹೆಚ್ಚಾಗಲು ಕಾರಣ ಮತ್ತು ಇದರ ವೈಶಿಷ್ಟ್ಯವೇನೆಂದರೆ, ಯಾವುದೇ ರೀತಿಯಲ್ಲಿಯೂ ಅಕ್ಕಿ ಬಹು ಬೇಗನೆ ಕೆಡುವುದಿಲ್ಲ, ಬಹಳ ದೀರ್ಘಕಾಲದ ವರೆಗೆ ಸಂಗ್ರಹಿಸಿಟ್ಟುಕೊಳ್ಳಬಹುದು. ಹಾಗೆಯೇ ಅಕ್ಕಿಯ ಬೆಲೆ ಕಡಿಮೆ ಇರುವುದರಿಂದ ದಿನನಿತ್ಯ ಬಳಸುವುದರಿಂದ ಸಾಕಷ್ಟು ಬೇಡಿಕೆ ಇತ್ತು. ಮತ್ತೊಂದು ರೀತಿಯ ಅಕ್ಕಿಯನ್ನು ಕಾಣುತ್ತೇವೆ ಅದು ಗುಳುವಾಡಿ ಸಣ್ಣಕ್ಕಿ, ಇದನ್ನು ಗುಳ್ವಾಡಿ ಪ್ರದೇಶದಲ್ಲಿ ಬೆಳೆಯುತ್ತಿದ್ದರಿಂದ ಈ ಹೆಸರು ಬಂತು. ಈ ಅಕ್ಕಿಯನ್ನು ಸ್ಥಳೀಯ ತುಂಡರಸರು, ಶ್ರೀಮಂತವರ್ಗದವರು, ವ್ಯಾಪಾರವರ್ಗದವರು, ಬ್ರಾಹ್ಮಣ ವರ್ಗದವರು ಬಳಸುತ್ತಿದ್ದರು. ಇತರೆ ವರ್ಗದವರು ವಿಶೇಷ ಸಂದರ್ಭಗಳಲ್ಲಿ ಬಳಸುತ್ತಿದ್ದರು. ಈ ಅಕ್ಕಿಗೆ ಗಂಧಸಾಲೆ ಅಕ್ಕಿ ಎಂದೂ ಕರೆಯುತ್ತಾರೆ. ಪೋರ್ಚುಗೀಸರು ಮತ್ತು ಡಚ್ಚರು ಪ್ರಾರಂಭದಲ್ಲಿ ಬಸ್ರೂರಿಗೆ ಬಂದ ಸಂದರ್ಭದಲ್ಲಿ ಇಲ್ಲಿ ಭಂಡಸಾಲೆಗಳನ್ನು ಪ್ರಾರಂಭಿಸಿದ್ದರು ಇದರ ದಾಖಲೆಯನ್ನು ಡಚ್ಚರು ಸಂಗ್ರಹಿಸಿಟ್ಟಿದ್ದಾರೆ. ದಾಲ್ಚಿನ್ನಿ, ಕ್ಯಾಸಿಯ ಮತ್ತು ದಂತ, ಮಂಗಗಳು ಮತ್ತು ನವಿಲುಗಳಂತಹ ಪಕ್ಷಿಗಳನ್ನು ಬೈಬಲ್‌ನಲ್ಲಿ ಉಲ್ಲೇಖಿಸಲಾದ ಸರಕುಗಳನ್ನು ರಾಜ ಸೊಲೊಮನ್ ಆಮದುಮಾಡಿಕೊಂಡಿದ್ದು, ಇದು ಪಶ್ಚಿಮ ಕರಾವಳಿಯ ಉತ್ಪನ್ನಗಳಾಗಿವೆ. ಈ ಪಶ್ಚಿಮ ಕರಾವಳಿ ಪ್ರದೇಶದ ವ್ಯಾಪಾರವನ್ನು ಗ್ರೀಕ್ ಮತ್ತು ರೋಮನ್ ಬರಹಗಾರರು ಉಲ್ಲೇಖಿಸಿದ್ದಾರೆ.[156]

ಒಟ್ಟಿನಲ್ಲಿ ತುಳುನಾಡಿನಲ್ಲಿ ಅಕ್ಕಿಯ ಉತ್ಪಾದನೆ ಮತ್ತು ವ್ಯಾಪಾರ ಪ್ರಾಚೀನ ಕಾಲದಿಂದಲೂ ಚಾಲ್ತಿಯಲ್ಲಿತ್ತು ಎಂಬುದನ್ನು ತಿಳಿಯಬಹುದು. ಈ ಭತ್ತದ/ಅಕ್ಕಿಯ ಉತ್ಪಾದನೆ ಪರಂಪರೆಯಾಗಿ ಬಂದಿರುವಂತಹದಾಗಿದೆ. ಇದು ಇಲ್ಲಿನ ಜನರ ಸಂಸ್ಕೃತಿಯೊಂದಿಗೆ ಬೆರೆತುಹೋಗಿದೆ. ಇಲ್ಲಿನ ವ್ಯಾಪಾರದ ಸರಕುಗಳು ದಿನನಿತ್ಯದ ಜೀವನದಲ್ಲಿ ಬೆರೆತುಹೋಗಿವೆ. ಹೆಚ್ಚುವರಿ ಉತ್ಪನ್ನಗಳು ರಫ್ತಾಗುತ್ತಿದ್ದವು. ಮತ್ತು ಅವಶ್ಯವಿರುವ ಸರಕುಗಳು ಆಮದಾಗುತ್ತಿದ್ದವು.

## ಅಡಿಟಿಪ್ಪಣಿಗಳು ಮತ್ತು ಪರಾಮರ್ಶನಗಳು

1. S.I.I vol. VII No- 330, 332, 342, 349, 356, 362.
2. S.I.I.Vol.VII.No.340
3. S.I.I Vol.IX part II No.417
4. S.I.I Vol.VII No.248
5. S.I.I Vol.VII No.273
6. S.I.I Vol.IX part II No.459
7. S.I.I Vol.IX part II No.450
8. S.I.I Vol.IX part II No.459
9. S.I.I Vol.IX part II No.423:S.I.I Vol.VII No.352
10. S.I.I Vol.IX part II No.449
11. S.I.I Vol.IX part II No.444
12. S.I.I Vol. IX part II No. 655
13. S.I.I Vol.IX part II No.457: S.I.I Vol. VII No.340
14. S.I.I Vol. VII No.310
15. S.I.I Vol.VII No.323, 324.
16. S.I.I Vol.VII No.344
17. S.I.I Vol.VII No.231
18. S.I.I Vol.VII No.196
19. S.I.I Vol. VII No.197 and 384,
20. I.A, VIII P 287, C. 800 A.D.
21. E.C. VI Kd. 145, C 750 AD., IA. VIII P. 285, C. 735 A.D.
22. S.I.I. IX . i. 141, 1079 AD. BKI. I. ii. 181, 1094 A.D., E.I. XIII P. 14, 1107 A.D.; BKI. ii. 158, 1109 A.D 3
23. ಡಿ.ಎಸ್. ಜಯಪ್ಪ ಗೌಡ, *ಕರ್ನಾಟಕದ ಕಡಲಾಚೆಯ ಸಂಪರ್ಕಗಳು* (ಕ್ರಿ.ಶ. 1350ರ ವರೆಗೆ), ಶುಭೋದಯ ಪ್ರಕಾಶನ ಮೈಸೂರು.1983, ಪು.136
24. ಹೆಚ್. ಎಸ್. ಪಾಟೀಲ ಅನು– *ಸಾರ್ಥವಾಹ, ಮೋತಿಚಂದ್ರ,* ಪುಟ– 57.

25. ಅದೇ. ಪು–58

26. ಜಯಪ್ಪಗೌಡ : 1983, p.92:, ರೋಮಿಲಾ ಥಾಪರ್ : ಭಾರತದ ಇತಿಹಾಸ ಪು–113–115.

27. ಮೋತಿಚಂದ್ರ, ಪು. 247

28. ಜಯಪ್ಪಗೌಡ:1983, ಪು.137, ಸಾರ್ತವಾಹ: ಪು 213–214

29. S.I.I. Vol XI.9.No 2.450. ಬಸರೂರು ತಾ. ಕುಂದಾಪುರ ಕ್ರಿ.ಶ. 1444.

30. ಕೆ.ವಿ. ರಮೇಶ್; ಎಂ.ಜೆ. ಶರ್ಮ (ಸಂ), *ತುಳುನಾಡಿನ ಶಾಸನಗಳು*. ಸಂಪುಟ ಒಂದು, ನಂ. 57. ಬಾರಕೂರು ತಾ. ಉಡುಪಿ. ಕ್ರಿಶ 1390, ಗೀತಾ ಬುಕ್ ಹೌಸ್ ಮೈಸೂರು, 1978,

31. ಅದೇ, ನಂ.65. ಬಾರಕೂರು ತಾ. ಉಡುಪಿ. ಕ್ರಿಶ 1430.

32. ಬಿ.ಆರ್. ಹಿರೇಮಠ, *ಶಾಸನಗಳಲ್ಲಿ ಕರ್ನಾಟಕದ ವರ್ತಕರು*, ಧಾರವಾಡ, 1986 ಪುಟ.59–60

33. ಅದೇ ಪು.76

34. ಅದೇ ಪು.78.

35. ಎಂ. ಚಿದಾನಂದಮೂರ್ತಿ, *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ* (ಕ್ರಿ.ಶ.450–1150), ಬೆಂಗಳೂರು, 2017, ಪು.382–383:, ಬಿ.ಆರ್.ಹಿರೇಮಠ: ಪು.79

36. ಬಿ.ಆರ್. ಹಿರೇಮಠ: ಪೂರ್ವೋಕ್ತ, ಪು.79

37. ಡಿ.ಎಸ್. ಜಯಪ್ಪಗೌಡ: 1983, ಪೂರ್ವೋಕ್ತ, ಪು.140., ಕನ್ನಡ ವಿಶ್ವಕೋಶ ಪು.22

38. S. Gururajachar, Some aspects of economic and social life in Karnataka (AD 1000-1300) Mysore 1974 : P-111

39. ಬಿ.ಆರ್. ಹಿರೇಮಠ್: ಪೂರ್ವೋಕ್ತ, ಪುಟ 12

40. ಅದೇ

41. S.I.I Vol IX. 2. 473 ಬಸರೂರು ತಾ. ಕುಂದಾಪುರ (ಕ್ರಿ.ಶ. 1487)

42. ಕೆ. ವಿ. ರಮೇಶ್, *ತುಳುನಾಡಿನ ಇತಿಹಾಸ*, ಎಂ.ಜಿ.ಎಂ. ಕಾಲೇಜ್ ಉಡುಪಿ.1968 ಪುಟ 70.

43. *ಸಕಲ ಪುರಾತನರ ವಚನಗಳು*, ಸಂಪುಟ 2, ವಚನ ಸಂಖ್ಯೆ 1862

44. S.I.I XV NO 572, ARSIE 1929. 30 NOS 479-580, S.I.I IX Pt II NO 457. RAMESH K.V., *History Of South Kanara*, Pp 170, 183, 252, 255,262, 263, 266, 267, 281, 263, 288.
45. ಕೆ. ವಿ. ರಮೇಶ್: 1968, ಪೂರ್ವೋಕ್ತ, ಪುಟ. 252..
46. ಬಿ.ಆರ್. ಹಿರೇಮಠ್, ಪೂರ್ವೋಕ್ತ, ನಂ.84. ಮೂಡಬಿದರೆ ತಾ. ಕಾರ್ಕಳ ಕಿ.ಶ.1615
47. ಮಾನವೀಕ ಕರ್ನಾಟಕ, 6–2, ಪುಟ 69–72.
48. ಕೆ.ವಿ. ರಮೇಶ್: 1968, ಪೂರ್ವೋಕ್ತ, ಪುಟ.72
49. ಬಿ.ಆರ್. ಹಿರೇಮಠ್, ಪೂರ್ವೋಕ್ತ, ಪುಟ–64
50. ಕೆ.ವಿ. ರಮೇಶ; *ಗತಕಾದ ತುಳುನಾಡಿನ ಪ್ರಾತಿನಿಧಿಕ ಸಂಘಗಳು*; ಪ್ರಜಾರಾಜ್ಯ ಸಂಚಿಕೆ; 1968; 16.
51. ಕೆ.ವಿ. ರಮೇಶ್: 1968, ಪು.69
52. ಅದೇ, ಪು.76
53. ಕೆ.ವಿ. ರಮೇಶ್; 1968, ಪೂರ್ವೋಕ್ತ ಪು.71,72:, ಬಿ.ಆರ್. ಹಿರೇಮಠ್: ಪೂರ್ವೋಕ್ತ ಪು.74.
54. ಅದೇ, ಪು.71.
55. ಹನುಮನಾಯಕ್, *ಪೂರ್ವ ಮಧ್ಯಯುಗೀನ ಕರ್ನಾಟಕದ ವರ್ತಕ ಶ್ರೇಣಿಗಳು: ಒಂದು ವಿಶ್ಲೇಷಣೆ*, ಪುಟ.56.57. ಸಂಪುಟ.5
56. ಬಿ.ಆರ್. ಹೀರೆಮಠ: 1986, ಪೂರ್ವೋಕ್ತ, ಪುಟ 102, 103.
57. S.I.I Vol IX part II, ಬಸ್ರೂರು ತಾಲೂಕು ಕುಂದಪುರ, (ಕ್ರಿ.ಶ. 1465), SII Vol VII part II No. 182, ಕೋಡಿಹಾಳಬೆಟ್ಟ, ತಾ, ಮಂಗಳೂರು (ಕ್ರಿ.ಶ. 1419).
58. ಬಿ.ಆರ್. ಹೀರೆಮಠ: 1986, ಪು.102:,S.I.I Vol IX.2.459 ಬಸರೂರು ತಾ. ಕುಂದಾಪುರ (ಕ್ರಿ.ಶ. 1465).
59. S.I.I Vol VII. 182. ಕೋಡಿಹಾಳಬೈಲ ತಾ. ಮಂಗಳೂರು ಕ್ರಿ.ಶ. 1419
60. K.I., 1.ಪು. 112–113. ಕೈಕಿಣಿ ತಾ. ಭಟ್ಕಳ ಕ್ರಿ.ಶ. 1427
61. ಎ.ವಿ.ವೆಂಕಟರತ್ನಂ, *ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ*, ಮೈಸೂರು 1974, ಪುಟ–140

62. T.V Mahalingam, *Administration and Social Life Under Vijayanagara* Part II, Madras, 1975, P. 233.
63. S.I.I. Vol VII, No.s 314, 325, 379
64. Pearson M.N., 1984, *Coastal western India, studies from the portugueses records*. Concept publishing company, New Delhi, P-122:, Duarte Barbosa : *The Book of Duarte Barbosa, An Account of countries etc*. P-187, 188, 189-196:, Framcois pyrard : 'The Vaiage of Francois, of Lavat, tr. And (id). Gray) two volumes, Hakluys 1887-90, P. 344-45, 386, 444.
65. M.N.Pearson, *Coastal Western India,Studies from the Portuguese India*, New Delhi. 1984, P-124:, K.G.Vasantha Madhav- *Western Karnataka: Its Agrarian Relations 1500-1800 A.D.* 1991, P. 149.
66. M.N.Pearson:1984, p-125:, B.S. Shastry: *Studies Indo-Portuguese History*, I.B.H. Bangalore,1981, Pp 24.
67. *Imperial census, Madras presidency*, South kanara, 1891. P.16
68. Francis Buchanan; *A Journey From Madras through The Countries Of Mysore, Canara, And Malabar* Vol III, New Delhi.1999, p.21
69. Francis Buchanan;1999, Vol III, p.22
70. H.A, Stuart, *The South Kanara Manual, Vol II*, Reprint 2003, P. 153
71. *Statistical Appenddix to the South Kanara Manuals* 1938.p.39,
72. Malathi K. Moorthy, *Trade And Commerce In Colonial South Kanara*,Manglore University 1991 Unpublished:p.102
73. Malathi K. Moorthy: 1991, p.148
74. Wahab Doddamane A. *Muslims in Dakshina kannada*. Greenwords publication, mangalore, 1993.p.78
75. Malathi K. Moorthy, p. 97
76. Mohankrishna Rai K, *Urbanization of Mangalore A Colonial Experience* (1799-1947), Mangalagangotri, 2003,p.104

77. Francis Buchanan:1999, Vol III; p.58
78. P.Gururaj Bhat, *Studies in Tuluva History and Culture,* Manipal.1975, p.224
79. K.V. Ramesh.: *A History of South kanara,* Dharwar, 1970.p.43.
80. S.I.I: Vol. VII, No.s 196 and 197.
81. S.K. Aiyangar*: Sources of Vijayanagara History*, Madras : 1919, P. 58.
82. Duarte Barbosa,The Book of Duarte Barbosa, Vol. II, P .126.
83. Robert Sewell, *A forgotten empire Vijayanagara: A contribution to the History of India*, New Delhi, 1962 ; p. 371.
84. Barbosa Duarte : op.cit., P. 73. 126
85. Barbosa, Duarte :op.cit., P. 76.
86. K.G. Vasanth Madava; *Western Karnataka-its Agrarian relations 1500-1800 A.D.* Navrang, New Delhi 1991 p.232-240
87. ಹೆಚ್.ಎಲ್. ನಾಗೇಗೌಡ, ಪ್ರವಾಸಿ ಕಂಡ, ಇಂಡಿಯಾ : ಸಂ. 2, 1966, ಪ್ರಸಾರಂಗ, ಮೈಸೂರು ವಿಶ್ವವಿದ್ಯಾನಿಲಯ, ಪು 125–128, 151–171.
88. ಕೆ.ಜಿ. ವಸಂತಮಾಧವ, *ಕರಾವಳಿ ಕರ್ನಾಟಕದ ರಾಜಕೀಯ ಇತಿಹಾಸ ಅಧ್ಯಯನ ಮತ್ತು ಸಂಶೋಧನೆ,* 1999; ಪು 118.
89. ಅದೇ. ಪುಟ 32.
90. ಬಿ.ಎ. ವಿವೇಕ ರೈ. (ಸಂ) *ಪ್ರವಾಸಿ ಕಂಡ ವಿಜಯನಗರ,* ಹಂಪಿ.2005, ಪು 32–33.
91. ಅದೇ, ಪು. 354.
92. ಬಿ.ಸಚ್ಚಿದಾನಂದ ಹೆಗ್ಡೆ, *ತುಳುಭಾಷೆ– ತುಳುನಾಡು,* 2010. ಪು. 195–196
93. S.I.I.vol.vii. no 243; A.R. no 67 of 1901:, ಎಸ್.ಡಿ.ಶೆಟ್ಟಿ, *ತುಳುನಾಡಿನ ಜೈನಧರ್ಮ–ಒಂದು ಸಾಂಸ್ಕೃತಿಕ ಅಧ್ಯಯನ,* ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, 2002, ಪುಟ.239.
94. ಪಿ.ಎನ್.ನರಸಿಂಹಮೂರ್ತಿ; *ಹಟ್ಟಿಯಂಗಡಿ ಒಂದು ಐತಿಹಾಸಿಕ ಸಮೀಕ್ಷೆ;* ಲೋಕನಾಥೇಶ್ವರ ಜೀರ್ಣೋದ್ದಾರ ಸಮಿತಿ, ಹಟ್ಟಿಯಂಗಡಿ. 1986, ಪುಟ.5
95. S.I.I, VII Nos,309,340

96. Muhammad hssayan Nainar, *Arabs Geographical knowledge of southern India*, p.28
97. ಕೆ.ಜಿ. ವಸಂತಮಾಧವ: 1999, ಪುಟ 142.
98. ಅದೇ, ಪುಟ 142
99. ಅದೇ, ಪುಟ 143
100. Alexander Hamilton, A New Account of East Indies, ed.Foster, volume 2, London 1930.p
101. ಕೆ.ಜಿ. ವಸಂತಮಾಧವ:1999, ಪುಟ143 ;ARSIE; 1939; ApA no.I.
102. ಕೆ.ಜಿ. ವಸಂತಮಾಧವ:1999, ಪುಟ 143–144.
103. ಎಂ. ಗಣಪತಿ ರಾವ್ ಐಗಳ್, *ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ,* ಉಡುಪಿ 2004, ಪುಟ.438
104. K.G. Vasanth Madhava;1991, p 144;
105. Warmington; P. 273
106. ಅದೇ, ಪುಟ 180–234
107. ಜಯಪ್ಪ ಗೌಡ: 1983, ಪುಟ 137–138
108. Warmington; P. 258
109. ಅದೇ, ಪುಟ 259
110. ಮೋಹನ್ ಕೃಷ್ಣ ರೈ; 2003, ಪು,154.
111. Warmington. P. 122
112. ಹೆಚ್.ಎಲ್. ನಾಗೇಗೌಡ,ಸಂ.1., ಪುಟ 95
113. ಎಸ್.ಸಿ.ಪಿ.ಎಮ್.ಬಿ.ಅರ್. 17–5—1830, ವಾಲ್ಯುಂ.62, ಪುಟ 316–337., ಮೊಹನ್ ಕೃಷ್ಣ ರೈ; 2003, ಪು. 155.
114. ಹೆಚ್.ಎಲ್. ನಾಗೇಗೌಡ:ಸಂ.1 ಪುಟ 84
115. ಅಮಿತಾವ್ ಘೋಷ್, *ಇನ್ ಯಾನ್ ಆಂಟಿಕ್ ಲ್ಯಾಂಡ್*, 1992. ಪುಟ 177,210
116. ಅದೇ
117. Sewell: 1962 ; p. 371.
118. S.I.I. Vol VII, No. 196.
119. ವಿವೇಕ ರೈ (ಸಂ): 2005, ಪು. 34,

120. ಅದೇ, ಪುಟ.48
121. ಅದೇ, ಪುಟ.48
122. ಅದೇ, ಪುಟ.35
123. ಅದೇ, ಪುಟ.35.
124. ಹೆಚ್.ಎಲ್.ನಾಗೇಗೌಡ: 1966, ಪು. 280–303., ವಿವೇಕ ರೈ (ಸಂ): 2005, ಪು.36
125. S.Gururajachar: Some aspects of economic and social life in Karnataka (AD 1000-1300), Mysore, 1974, p.105
126. ಹೆಚ್.ಎಲ್. ನಾಗೇಗೌಡ: 1966,ಪುಟ 239,
127. Duarte Barbosa ,op. cit., PP 187, 199.
128. Fransis Buchanan, op. cit., Vol. 3, Pp. 21-23
129. B. Surendra Rao, Ibid. Pp. 42-44
130. ಬಿ. ಸುರೇಂದ್ರ ರಾವ್, 2016, ಪುಟ. 43
131. ಅದೇ.
132. ಬಿ.ಎಸ್ ಶಾಸ್ತ್ರೀ, ಪುಟ. 153
133. ಬಿ. ಸುರೇಂದ್ರ ರಾವ್, 2016, ಪುಟ. 58
134. Fransis Buchanan: 1999, page 58.
135. S. Muhammad Husayn Nainar – *Arab Geographers' knowledge of Southern India* Page No – 28, 29, 61 Madras, 1942.
136. Duarte Barbosa, op.cit.,
137. Sanjay Subramanyam, *The Portuguese the port of Basrur and the rice trade 1600-50*,P. 454
138. Ibid.
139. ಪುರುಷೋತ್ತಮ ಎಸ್. *ಪೋರ್ಚುಗೀಸರು ಮತ್ತು ಕರ್ನಾಟಕದ ವ್ಯಾಪಾರ-ವಾಣಿಜ್ಯ ವಲಯಗಳ ಸ್ಥಿತ್ಯಂತರಗಳು, ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕಲೆವು ನೆಲೆಗಳು* ಎಸ್. ಚಂದ್ರಶೇಖರ್ ಮತ್ತು ಬಿ. ಸುರೇಂದ್ರ ರಾವ್ (ಸಂಪಾದಕರು) ಸಂಪುಟ–5. ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, 2016. ಪುಟ78–81.

140. ಬಿ. ಸುರೇಂದ್ರ ರಾವ್ – *ಕರಾವಳಿ ಜಾನಪದವು ಅನಾವರಣಗೊಳಿಸುವ ಸಮಾಜ ಮತ್ತು ಆರ್ಥಿಕತೆ, ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕಲೆವು ನೆಲೆಗಳು* ಎಸ್. ಚಂದ್ರಶೇಖರ್ ಮತ್ತು ಬಿ. ಸುರೇಂದ್ರ ರಾವ್ (ಸಂಪಾದಕರು) ಸಂಪುಟ 06., ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, 2016 ಪುಟ 06.
141. ಅದೇ, 45-46.
142. ಅದೇ
143. ಬಿ.ಎ. ಸಾಲೆತ್ತೂರು: 1936, ಪುಟ.483
144. A. Appadorai, *Economic Conditions in Southern India, 1000-1500*; Madras, 1936. P 199., ಸುರೇಂದ್ರ ರಾವ್ ಬಿ. ಪೂರ್ವೋಕ್ತ, ಸಂಪುಟ 06, ಪುಟ 4
145. ಅದೇ, 53-54
146. K.G.Vasantha Madhav, *Religions in Coastal Karnataka 1500-1763*; 1985. Pp. 69-70
147. Temple R.G. – *The Intinerary of Ludovico Di Varthema of Bologha* (From 1502 to 1508).
148. ಮಾಲತಿ ಕೆ. ಮೂರ್ತಿ, *ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಆರ್ಥಿಕ ಇತಿಹಾಸದಲ್ಲಿ 'ಐರೋಪ್ಯ ವ್ಯಾಪಾರ ಪರ್ವ', ಚರಿತ್ರೆ ಅಧ್ಯಯನ, ಸಂಪುಟ 1,* ಸಂಚಿಕೆ 1., ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. 2006, ಪುಟ 62–65
149. P. Gururaj Bhatt:1975, PP. 56-57.
150. B.S Shastri, *Studies in Indo-Portuguese History*, IBH Banglore, 1981 page 38, 48.

## ಅಧ್ಯಾಯ –ಐದು

## –: ಉಪಸಂಹಾರ :–

### ಬ್ರಿಟಿಷ್ ಪೂರ್ವಕಾಲದ ತುಳುನಾಡಿನ ವ್ಯಾಪಾರ ಮತ್ತು ವಾಣಿಜ್ಯ

ತುಳುನಾಡು ಭಾರತದ ಪಶ್ಚಿಮ ಕರಾವಳಿಯ ಕೊಂಕಣ ತೀರದ ದಕ್ಷಿಣದ ಭಾಗವಾಗಿದೆ. ಇದು ದಕ್ಷಿಣದಲ್ಲಿ ಮಲಬಾರ್ ತೀರವನ್ನು ಉತ್ತರದಲ್ಲಿ ಕೊಂಕಣದ ಉತ್ತರ ತೀರವನ್ನು ಎಲ್ಲೆಯಾಗಿ ಹೊಂದಿ ಬೈಂದೂರಿನಿಂದ ನೀಲೇಶ್ವರದವರೆಗಿನ ಕಡಲ ಕಿನಾರೆಯನ್ನು ಹೊಂದಿದ್ದು ಇದು ಬೈಂದೂರು, ಕುಂದಾಪುರ, ಉಡುಪಿ, ಮಂಗಳೂರು ತಾಲ್ಲೂಕುಗಳನ್ನು ಕಡಲತೀರದಲ್ಲಿಯೂ ಮತ್ತು ಇಡೀ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು ಉತ್ತರ ಕನ್ನಡ ಜಿಲ್ಲೆಯ ದಕ್ಷಿಣದ ಭಾಗವನ್ನು ತನ್ನ ಎಲ್ಲೆಯಲ್ಲಿ ಹೊಂದಿದ್ದು ತುಳು ಮಾತನಾಡುವ ಜನರು ವಾಸಿಸುವ ಪ್ರದೇಶವನ್ನೇ ಇಂದು ತುಳುನಾಡೆಂದು ಅರ್ಥೈಸಲಾಗುತ್ತಿದೆ.

ತುಳುವ ಪದದ ವಿವೇಚನೆ ಸಹ ತುಳುನಾಡಿನ ಇತಿಹಾಸದಷ್ಟೇ ರೋಚಕವಾಗಿದೆ. ತೌಳವದ ಸಂಸ್ಕೃತ ರೂಪವೇ ತುಳುವ ಎಂದು ರೂಪಾಂತರಗೊಂಡಿರಬಹುದೆಂದು ಇತಿಹಾಸಕಾರರ ಅಭಿಪ್ರಾಯ. ಇದರ ಅತಿ ಪ್ರಾಚೀನ ಉಲ್ಲೇಖ ಸಂಗಂ ಸಾಹಿತ್ಯದಲ್ಲಿ ಕಂಡುಬರುತ್ತದೆ. ಶಾಸನಗಳಲ್ಲಿ ಕಂಡುಬರುವ ತುಳು, ತೌಳವ ಅಥವಾ ತುಳು ಪದಗಳು ಪ್ರದೇಶವನ್ನು ಪ್ರತಿನಿಧಿಸುವುದಿಲ್ಲ. ಬದಲಾಗಿ ಜನಾಂಗವನ್ನು ನಿರ್ದೇಶಿಸುತ್ತವೆ. ಹೀಗಾಗಿ, ತುಳುನಾಡಿನ ಪ್ರಾಚೀನತೆಯನ್ನು ನಿಖರವಾಗಿ ನಿರ್ಧರಿಸುವುದು ಒಂದು ಸಾಧನೆ. ಕೆಲವರು ಕುಂದಾಪುರ ತಾಲ್ಲೂಕಿನ ಕೋಟೇಶ್ವರದ ಪ್ರದೇಶವನ್ನು ತುಳುನಾಡಿನ ಕೇಂದ್ರವೆಂದು 'ಕೇರಳೋತ್ಪತ್ತಿ' ಗ್ರಂಥದ ಆಧಾರದ ಮೇಲೆ ನಿರ್ಧರಿಸುತ್ತಾರೆ. ಆದರೆ ಪ್ರಾಚೀನ ತಮಿಳು ಗ್ರಂಥ 'ಅಹನಾನೂರು' ಮತ್ತು ಪಟ್ಟಾಲಮಂಗಲಂನ ಶಾಸನದಲ್ಲಿ ಉಕ್ತವಾಗಿರುವಂತೆ ಎರಡನೇ ನಂದಿವರ್ಮನ ಕಾಲದಲ್ಲಿ ಹೊನ್ನಾವರ ಪ್ರದೇಶವನ್ನು ತುಳುನಾಡೆಂದು ಗುರುತಿಸಲಾಗಿದೆ. ಅಲ್ಲದೇ ತುಳುನಾಡನ್ನು ಚೇರ ಅಥವಾ ಕೇರಳದೇಶದಿಂದ ಭಿನ್ನವಾಗಿ ಗುರುತಿಸಲಾಗಿದೆ. ಸಾಲೆತ್ತೂರು ಅವರು ತುಳುವ ಪದ ಕನ್ನಡ ಪದದ ಮೂಲ ಪದವಾದ ತುಳುದಿಂದ ಬಂದಿರಬಹುದೆಂದು ಗುರುತಿಸುತ್ತಾರೆ. ಆದರೆ ತುಳುವ ಪದದ ಅರ್ಥವನ್ನು

ಬೇರೆ ರೀತಿಯಾಗಿ ಸಹ ಮಾಡಲಾಗಿದೆ. ತುಳುವ ಎಂದರೆ ಶಾಂತಿಪ್ರಿಯರು ಮತ್ತು ಸಹಿಷ್ಣುಗಳು ಎಂಬ ಅರ್ಥ ಬರುತ್ತದೆಯೆಂದು ತಿಳಿದುಬರುತ್ತದೆ. ಇದೇ ವಾದವನ್ನು ಮಂಜೇಶ್ವರ ಗೋವಿಂದ ಪೈಯವರು ಸಹ ಅನುಮೋದಿಸುತ್ತಾರೆ. ಮತ್ತೊಂದೆಡೆ ತುಳು ಪದ ತಮಿಳಿನ ಮೂಲರೂಪವಾದ ತುಳ್ಳೈ ಅಂದರೆ 'ಹುಟ್ಟುಹಾಕು': 'ದೋಣಿ' ಎಂಬ ಅರ್ಥಗಳನ್ನು ಸಹ ಕೊಡುತ್ತದೆ. ಅಲ್ಲದೆ ನೀರಿಗೆ ಹಾರು ಎಂಬ ಅರ್ಥವೂ ಬರುತ್ತದೆ. ಈ ಅರ್ಥದಲ್ಲಿ ನೋಡಿದಾಗ ತುಳುನಾಡವರು ಮೀನುಗಾರರ ಅಥವಾ ಸಮುದ್ರದೊಂದಿಗೆ ಸಂಪರ್ಕ ಹೊಂದಿದ್ದವರೆಂದು ತಿಳಿದುಬರುತ್ತದೆ. ಮತ್ತೊಂದೆಡೆ ಇದೇ ಪದ ದನಗಾಹಿ ಗಳೆಂದು ಅರ್ಥಕೊಡುವುದಾಗಿ ಸಹ ಉಲ್ಲೇಖವಾಗಿದೆ. ಹೀಗಾಗಿ ತುಳು ಶಬ್ದೋತ್ಪತ್ತಿಯನ್ನು ಈ ಕೆಳಗಿನಂತೆ ಉಲ್ಲೇಖಿಸಬಹುದಾಗಿದೆ. ಪ್ರಾಚೀನ ತುಳವರು ಸಮುದ್ರದೊಡನೆ ಸಂಪರ್ಕವಿರುವವರು ಅಥವಾ ಗೋವಳರಾಗಿದ್ದು ಕಾಲಾಂತರದಲ್ಲಿ ಅದರ ಮೂಲಕವಾಗಿ ಪ್ರಭುತ್ವವನ್ನು ಸಾಧಿಸಿರಬಹುದು. ಪರದೇಶದವರೊಂದಿಗೆ ಮತ್ತು ಒಳನಾಡ ಕನ್ನಡಿಗರ ನಡುವೆ ಇವರು ವ್ಯಾಪಾರಕ್ಷೇತ್ರದಲ್ಲಿ ಸೇತುವೆಯಾಗಿ ಕಾರ್ಯನಿರ್ವಹಿಸಿರುವುದು ಸಾಂದರ್ಭಿಕ ಆಕರಗಳಿಂದ ಸಹ ದೃಢಪಡುತ್ತದೆ.

ತುಳುನಾಡಿನ ವಿಸ್ತಾರವನ್ನು ಅಥವಾ ಅದರ ಕೇಂದ್ರವನ್ನು ಗುರುತಿಸುವುದು ಸ್ವಲ್ಪ ಜಟಿಲ ಸಮಸ್ಯೆ. ಅತ್ಯಂತ ಪ್ರಾಚೀನ ಉಲ್ಲೇಖದಂತೆ ತುಳುನಾಡಿನ ಕೇಂದ್ರ ಬನವಾಸಿಯ ಸುತ್ತಮುತ್ತಲಿನ ಹೊನ್ನಾವರ ಮತ್ತು ಭಟ್ಕಳ ನಡುವಿನ ಪ್ರದೇಶವಿರಬಹುದೆಂದು ಗುರುತಿಸಲಾಗಿದೆ. ಆದರೆ ಯಾವುದನ್ನೂ ನಿರ್ಧಾರವಾಗಿ ಹೇಳಲು ಸಾಧ್ಯವಿಲ್ಲ. 9 ಮತ್ತು 10ನೇ ಶತಮಾನದ ಕಾಲದಲ್ಲಿ ಮತ್ತು ಆನಂತರ ಗೇರುಸೊಪ್ಪೆ, ಹೊನ್ನಾವರ ಮತ್ತು ಸುತ್ತಮುತ್ತಲಿನ ಪ್ರದೇಶವನ್ನು ತುಳುನಾಡೆಂದು ಕರೆಯುತ್ತಿದ್ದಂತೆ ಶಾಸನಾಧಾರಗಳು ದೊರೆಯುತ್ತವೆ. ಆದರೆ ತುಳುನಾಡಿನ ಬಗೆಗೆ ಇರುವ ಕಲ್ಪನೆಯನ್ನು ಇಟ್ಟುಕೊಂಡು ಅದರ ವಿಸ್ತಾರವನ್ನು ಹೇಳುವ ಪ್ರಯತ್ನವನ್ನು ಕೆಲವು ವಿದ್ವಾಂಸರು ನಡೆಸಿದ್ದಾರೆ. 12ನೇ ಶತಮಾನದ ವರೆಗೆ ತುಳುನಾಡು ಎಂದರೆ ಹೊಯ್ಸಳ ಸಾಮ್ರಾಜ್ಯಕ್ಕೆ ಪಶ್ಚಿಮ ದಿಕ್ಕಿನಲ್ಲಿದ್ದ ಗೇರುಸೊಪ್ಪೆಯ ಪ್ರದೇಶ ಎಂದು ಗುರುತಿಸಲಾಗಿದೆ. ಆನಂತರದ ಕಾಲದಲ್ಲಿ ಉತ್ತರದಲ್ಲಿ ಕುಂದಾಪುರದಿಂದ ದಕ್ಷಿಣದಲ್ಲಿ ಕಾಸರಗೋಡು ಸಮೀಪದ ನೀಲೇಶ್ವರದವರೆಗಿನ ತುಳು ಮಾತನಾಡುವ ಪ್ರದೇಶವನ್ನು ತುಳುನಾಡೆಂದು ಗುರುತಿಸಲಾಗಿತ್ತೆಂದು ತಿಳಿದುಬರುತ್ತದೆ. ಗೋವಿಂದ

ಪೈಯವರು ಒಂದನೆಯ ಶತಮಾನಕ್ಕೆ ಹಿಂದೆ ಕರ್ನಾಟಕದ ಕಡಲ ತೀರದಲ್ಲಿದ್ದ ಭಾಷೆಗಳ ಕುರಿತು ಈ ಬಗೆಯ ಅಭಿಪ್ರಾಯಗಳನ್ನು ಕೊಡುತ್ತಾರೆ. ವೈತರಿಣಿಯಿಂದ ಗೋವೆಯವರೆಗೆ ಕೊಂಕಣಿ ಭಾಷೆ. ಗೋವೆಯಿಂದ ಬಾರ್ಕೂರು ಅಥವಾ ಸೀತಾನದಿಯವರೆಗೆ ಕನ್ನಡ, ಅಲ್ಲಿಂದ ದಕ್ಷಿಣದಲ್ಲಿ ಚಂದ್ರಗಿರಿ ಅಥವಾ ನೀಲೇಶ್ವರದ ಹೊಳೆಯವರೆಗೂ ತುಳುಭಾಷೆ ಇದ್ದಿತೆಂದು ಅಭಿಪ್ರಾಯಪಡುತ್ತಾರೆ. ಇದರ ಆಧಾರದಿಂದ ನೋಡಿದಾಗಲೂ ತುಳುನಾಡಿನ ಎಲ್ಲೆ ಪ್ರಾರಂಭವಾಗುವುದು ಗೇರುಸೊಪ್ಪೆಯ ಆಸುಪಾಸಿನಲ್ಲಿ. ಈ ಎಲ್ಲ ಆಕರಗಳಿಂದ ನಿರ್ಧಾರವಾಗುವ ವಿಷಯವೆಂದರೆ, ಪ್ರಾಚೀನ ತುಳುವ ದೇಶದ ಎಲ್ಲೆ, ಹೊನ್ನಾವರ, ಗೇರುಸೊಪ್ಪೆ, ಸುತ್ತಮುತ್ತಲಿನ ಪ್ರದೇಶದಲ್ಲಿಯೇ ಪ್ರಾರಂಭವಾಗುವುದು ನಿಖರವಾಗಿ ವೇದ್ಯವಾಗುತ್ತದೆ. ಆದರೆ ವಿಜಯನಗರ ಕಾಲದ ತುಳುರಾಜ್ಯ ಅಥವಾ ಬಾರ್ಕೂರು ರಾಜ್ಯ, ತುಳುಭಾಷೆ ಮಾತನಾಡುವ ಒಟ್ಟು ಪ್ರದೇಶವಾದ ಬಾರ್ಕೂರಿನಿಂದ ನೀಲೇಶ್ವರದವರೆಗಿನ ಕಡಲತಡಿ ಮತ್ತು ಅದಕ್ಕೆ ಹೊಂದಿಕೊಂಡ ಘಟ್ಟಗಳೆಂದು ತಿಳಿದುಬರುತ್ತದೆ.

ಸಾಗರ ಸಂಬಂಧೀ ಚಟುವಟಿಕೆಗಳು ಮಾನವ ಸಂಸ್ಕೃತಿಯ ಇತಿಹಾಸದಲ್ಲಿ ಹೊಸ ಆವಿಷ್ಕಾರವೇನಲ್ಲ. ಮಾನವನ ಸಾಗರ ಸಂಬಂಧೀ ಚಟುವಟಿಕೆಗಳನ್ನು ಶಿಲಾಯುಗದ ಕಾಲಕ್ಕೆ ಕೊಂಡೊಯ್ಯಬಹುದು. ಶಿಲಾಯುಗ ಕಾಲದಲ್ಲಿ ಈ ಚಟುವಟಿಕೆ ಇದ್ದಿತಾದರೂ ಆ ಕಾಲಘಟ್ಟದಲ್ಲಿ ಘಟಿಸಿರುವ ಎಲ್ಲಾ ವಿವರಗಳನ್ನು ದಾಖಲಿಸಲು ಸಾಕಷ್ಟು ಇತಿಮಿತಿಗಳಿವೆ. ಈ ಕಾಲಘಟ್ಟದ ಸಂಸ್ಕೃತಿಯ ಕುರುಹುಗಳನ್ನು ಕೇವಲ ಪುರಾತತ್ವ ಆಕರಗಳ ಆಧಾರದಿಂದಲೇ ತಿಳಿದುಕೊಳ್ಳಬೇಕಾಗಿದೆ. ಹಲವಾರು ಬಗೆಯ ಮಾನವನ ನಿರ್ಮಿತಿಗಳು ನಮಗೆ ಉತ್ಖನನದಲ್ಲಿ ಲಭ್ಯವಾಗಿಲ್ಲ. ದಕ್ಷಿಣ ಭಾರತೀಯ ಇತಿಹಾಸಕ್ಕೆ ಸಂಬಂಧಿಸಿದಂತೆ, ನೂತನ ಶಿಲಾಯುಗದ ಕಾಲದಿಂದ, ಭಾರತೀಯ ಇತಿಹಾಸಕ್ಕೆ ಸಂಬಂಧಿಸಿದಂತೆ ಹರಪ್ಪಾ ಸಂಸ್ಕೃತಿಯ ಕಾಲಘಟ್ಟದಿಂದ ಸಾಗರ ಸಂಬಂಧಿ ಚಟುವಟಿಕೆಗಳನ್ನು ಗುರುತಿಸಬಹುದಾಗಿದೆ. ಸೂಕ್ಷ್ಮ ಶಿಲಾಯುಗದ ಕಾಲಕ್ಕಾಗಲೆ ಮಾನವನು ಮೀನುಗಳನ್ನು ಆಹಾರವಾಗಿ ಬಳಸಲು ಪ್ರಾರಂಭಿಸಿದ್ದನು. ಬಹುಶಃ ಆತನು ಮೀನುಗಳನ್ನು ಬಿದಿರಿನಿಂದ ನಿರ್ಮಿಸಿದ ಬುಟ್ಟಿ ಮಾದರಿಯ ಉಪಕರಣದಿಂದ ಹಿಡಿದಿರಬೇಕು ಅಥವಾ ಅವನು ಕರಗತ ಮಾಡಿಕೊಂಡಿದ್ದ ಬಿಲ್ಲು ವಿದ್ಯೆಯನ್ನು ಅದಕ್ಕಾಗಿ ಬಳಸಿರಬಹುದು. ಈ ಬಗೆಯ ಮೀನುಗಾರಿಕೆಯನ್ನು ಅಂಡಮಾನ್‌ನ ಬುಡಕಟ್ಟು ಜನಾಂಗದಲ್ಲಿ ಇಂದಿಗೂ ಕಾಣಬಹುದಾಗಿದೆ. ನಿಜವಾದ ಸಮುದ್ರ

ಸಂಬಂಧೀ ವ್ಯಾಪಾರ ವಹಿವಾಟನ್ನು ನೂತನ ಶಿಲಾಯುಗದ ಕಾಲಘಟ್ಟಕ್ಕೆ ಕೊಂಡೊಯ್ಯಬಹುದಾಗಿದೆ. ನೂತನ ಶಿಲಾಯುಗ-ತಾಮ್ರ ಶಿಲಾಯುಗದ ಕಾಲದಲ್ಲಿ ಸಮುದ್ರದ ಮೇಲೆ ಸಣ್ಣ ದೋಣಿಗಳಲ್ಲಿ ಪ್ರಯಾಣ ಮಾಡುವ ಪ್ರಯತ್ನ ನಡೆದಿರುವುದಕ್ಕೆ ಪೂರಕವಾದ ಮಾಹಿತಿ ಭಾರತದ ನೆಲೆಗಳಲ್ಲಿ ಉತ್ಖನನಗಳಲ್ಲಿ ದೊರೆತಿರುವ ಹಿನ್ನೆಲೆಯಲ್ಲಿ ಅದೇ ಕಾಲಘಟ್ಟಕ್ಕೆ ಸಾಗರ ವ್ಯಾಪಾರ ವಹಿವಾಟನ್ನು ಕೊಂಡೊಯ್ಯಬಹುದಾಗಿದೆ. ಕ್ರಿ.ಪೂ. ಮೂರು ಸಾವಿರ ವರ್ಷಕ್ಕೆ ಪೂರ್ವದಲ್ಲಿ ಈ ಬಗೆಯ ಚಟುವಟಿಕೆಗಳು ಪ್ರಾರಂಭವಾಗಿದ್ದವೆನ್ನಬಹುದು.

ತುಳುನಾಡಿನ ಇತಿಹಾಸ ಆಳುಪರಿಂದ ಆರಂಭವಾದರೂ ಅವರು ಸಂಪೂರ್ಣವಾಗಿ ಸ್ವತಂತ್ರ ನೆಲೆಯಲ್ಲಿ ತುಳುನಾಡನ್ನು ಆಳದೇ ಹೋದುದು ವಿಪರ್ಯಾಸ. ಕರ್ನಾಟಕದ ಗಂಗ ಮನೆತನದಂತೆಯೇ ಆಳುಪರೂ ಕೂಡ ಅನೇಕ ಸಾಮ್ರಾಜ್ಯಗಳ ಸಾಮಂತರಾಗಿ ಆದರೆ ಸಾಮಂತತ್ವದಲ್ಲಿಯೂ ತನ್ನ ಆಂತರಿಕ ವ್ಯವಹಾರಕ್ಕೆ ಮತ್ತು ವ್ಯವಹಾರಕುಶಲತೆಗೆ ಧಕ್ಕೆ ಬಾರದ ಮಟ್ಟಿಗೆ ಸ್ವಾತಂತ್ರ್ಯವನ್ನನುಭವಿಸಿಕೊಂಡು ತನ್ನ ಸಂಸ್ಕೃತಿಯನ್ನು ಉಳಿಸಿ, ಬೆಳೆಸಿಕೊಳ್ಳುವಲ್ಲಿ ಮಹತ್ವವಾದ ಕಾರ್ಯನಿರ್ವಹಿಸಿದರು. ಈ ಬೆಳವಣಿಗೆಗಳಿಂದಾಗಿಯೇ ತುಳುನಾಡು, ವಿಜಯನಗರ ಸಾಮ್ರಾಜ್ಯದ ಉದಯದವರೆಗೆ ಒಂದು ರೀತಿ ಬಯಲುಸೀಮೆಯೊಂದಿಗಿನ ಸಂಪರ್ಕವನ್ನು ವ್ಯಾಪಾರಕ್ಕೆ ಮಾತ್ರ ಸೀಮಿತಗೊಳಿಸಿಕೊಂಡಿದ್ದಿತು. ಇದಕ್ಕೆ ಕಾರಣಗಳು ಇಲ್ಲದಿಲ್ಲ. ಶಾತವಾಹನರಾದಿಯಾಗಿ ರಾಷ್ಟ್ರಕೂಟರ ಅಂತ್ಯದವರೆಗೆ ಸಾಮ್ರಾಜ್ಯದ ವ್ಯಾಪಾರ ಬಹುತೇಕವಾಗಿ ಉತ್ತರ ಕೊಂಕಣದ ಬಂದರುಗಳ ಮೂಲಕ ಪೂರ್ವಕರಾವಳಿಯ ಬಂದರುಗಳ ಮೂಲಕ ನೆರವೇರುತ್ತಿತ್ತು. ಕಲ್ಯಾಣದ ಚಾಲುಕ್ಯರ ಪುರೋಭಿವೃದ್ಧಿ ಮತ್ತು ಹತ್ತನೆಯ ಶತಮಾನದಲ್ಲಿ ಕಲ್ಯಾಣಿ ಚಾಲುಕ್ಯರ ಸಾಮಂತರಾಗಿದ್ದ ಹೊಯ್ಸಳರು ತಮ್ಮ ಪ್ರಭುತ್ವವನ್ನು ವಿಸ್ತರಿಸುವ ಹಾಗೂ ಚಾಲುಕ್ಯರಿಂದ ಸ್ವತಂತ್ರರಾಗುವ ಹೆಬ್ಬಯಕೆಯಿಂದ ತಮ್ಮ ದಕ್ಷಿಣದ ರಾಜ್ಯವಿಸ್ತರಣೆಯನ್ನು ಮುಂದುವರಿಸಿದರು. ಹೊಯ್ಸಳರು ಮಲೆನಾಡಿನ ಭೂಪ್ರದೇಶಗಳನ್ನು ಆಕ್ರಮಿಸಿಕೊಂಡ ಮೇಲೆ ತುಳುನಾಡಿಗೆ ಹೊಂದಿಕೊಂಡಿದ್ದ ಮಲೆನಾಡಿನ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದ ಉಂಗಾಳ್ವರು ಮತ್ತು ಚೆಂಗಾಳ್ವರನ್ನು ಸೋಲಿಸಿ ಅವರಿಂದ ಘಟ್ಟಪ್ರದೇಶದ ಸೀಮೆಗಳನ್ನು ನೀಲಗಿರಿಯವರೆಗೆ ಅಥವಾ ಉದಕಮಂಡಲದವರೆಗೆ ವಿಸ್ತರಿಸಿ ಮಲೆಪ್ಪರೊಳಗಂಡ ಬಿರುದನ್ನು ತಮ್ಮದಾಗಿಸಿಕೊಂಡು ಕಡಲತೀರಕ್ಕೆ ಅಡೆತಡೆಯಾಗಿದ್ದ ದುರ್ಗಮ ಬೆಟ್ಟಪ್ರದೇಶವನ್ನು ಗೆದ್ದು ಕಣಿವೆಗಳ ಮೂಲಕ ತಮ್ಮ ವ್ಯಾಪಾರ ವಹಿವಾಟನ್ನು

ಸಾಂಸ್ಕೃತಿಕ ವಿಸ್ತರಣೆಯನ್ನು ಮಾಡಿದುದನ್ನು ಇತ್ತೀಚಿನ ಸಂಶೋಧನೆಗಳು ಗುರುತಿಸಿವೆ. ಇದನ್ನೇ ಅನೇಕ ಲೇಖನಗಳಲ್ಲಿ ಇತ್ತೀಚಿನ ವಿದ್ವಾಂಸರು ಸಾಧಿಸುತ್ತಾರೆ. ಇದಕ್ಕೆ ಪೂರ್ವದ ಸಂಶೋಧನೆಗಳನ್ನು ಗಮನದಲ್ಲಿಟ್ಟುಕೊಂಡು ಕೆಲ ವಿದ್ವಾಂಸರು ತುಳುನಾಡು ಆರಂಭದ ಇತಿಹಾಸ ಕಾಲಘಟ್ಟದಲ್ಲಿ ದ್ವೀಪದಂತೆ ವ್ಯವಹರಿಸಿ ತನ್ನ ಪೂರ್ವದ ಎಲ್ಲೆಯಲ್ಲಿನ ಘಟ್ಟ ಪ್ರದೇಶಗಳು ಮತ್ತು ಬಯಲುಸೀಮೆಯೊಂದಿಗೆ ಸಾಕಷ್ಟು ಅಂತರವನ್ನು ನಿರ್ಮಿಸಿ ಕೊಂಡಿದ್ದಿತೆಂಬ ಅಪವಾದವನ್ನು ಮೇಲೆ ಉಲ್ಲೇಖಿಸಿದ ಸಂಶೋಧನೆಗಳು ಅಲ್ಲಗಳೆಯುತ್ತವೆ. ಗಣಪತಿರಾವ್ ಐಗಳು ತಮ್ಮ ಗ್ರಂಥದಲ್ಲಿ ಹೊಯ್ಸಳರ ಕಾಲಘಟ್ಟದಲ್ಲಿ ತುಳುನಾಡಿನಲ್ಲಿ ವಾಸವಾಗಿರುವ ಜೈನ ಅರಸುಮನೆತನಗಳು ತಮ್ಮೊಂದಿಗೆ ತಮ್ಮ ಆರಾಧ್ಯದೈವ ಸೋಮೇಶ್ವರ ನನ್ನು ದಕ್ಷಿಣ ಕನ್ನಡ ಜಿಲ್ಲೆಗೆ ಕರೆದುಕೊಂಡು ಬಂದರೆಂದು ಅಭಿಪ್ರಾಯಪಡುತ್ತಾರೆ. ಪ್ರಾಯಶಃ ದಕ್ಷಿಣ ಕರ್ನಾಟಕ ಅಥವಾ ಗಂಗವಾಡಿ ತೊಂಬತ್ತಾರು ಸಾವಿರ ಚೋಳರಿಂದ ಆಕ್ರಮಿತವಾದ ಮೇಲೆ ಜೈನರು ತಮಗೆ ಚೋಳರಿಂದ ರಾಜಾಶ್ರಯ ದೊರೆಯದ ಕಾರಣ ತುಳುನಾಡಿಗೆ ಸಾಗಿರಬೇಕು ಅಥವಾ ಶ್ರೀವೈಷ್ಣವ ಪಂಥದ ವಿಸ್ತಾರದೊಂದಿಗೆ ಜೈನರು ತುಳುನಾಡನ್ನು ತಮ್ಮ ಧರ್ಮಾಚರಣೆಗೆ ಆರಿಸಿಕೊಂಡಂತೆ ಭಾವಿಸಬೇಕಾಗುತ್ತದೆ. ಇದು ನಮ್ಮ ಸಂಶೋಧನೆಯ ಉದ್ದೇಶವಲ್ಲದ್ದರಿಂದ ಈ ಬಗ್ಗೆ ಹೆಚ್ಚಿನ ಸಂಶೋಧನೆಗೆ ಒಳಗಾಗದೆ ಗಣಪತಿರಾವ್ ಐಗಳ್ ಹೇಳುವ ವಿಷಯವನ್ನು ಪೂರ್ವಪೀಠಿಕೆಯಾಗಿ ಒಪ್ಪಿಕೊಂಡು ಇದು ರಾಜಕೀಯ ಮತ್ತು ಆರ್ಥಿಕ ದೃಷ್ಟಿಕೋನದಲ್ಲಿ ನಡೆದ ಧಾರ್ಮಿಕ ಪ್ರಕ್ರಿಯೆಯೆಂದು ಭಾವಿಸಿ ಮುಂದೆ ಸರಿಯಲಾಗಿದೆ.

ಪ್ರಸ್ತುತ ಸಂಶೋಧನೆಯಲ್ಲಿ ತುಳು ನಾಡಿನ ವ್ಯಾಪಾರ ಮತ್ತು ವಹಿವಾಟನ್ನು ಬ್ರಿಟಿಷ್ ಆಗಮನದವರೆಗಿನ ಇತಿಮಿತಿಯಲ್ಲಿ ಅಧ್ಯಯನ ಮಾಡಿ ಅವುಗಳ ಅಧ್ಯಯನದಲ್ಲಿ ಕಂಡುಕೊಂಡ ಹಲವಾರು ನೂತನ ವಿಚಾರಗಳನ್ನು ತುಳುನಾಡಿಗೆ ಸೀಮಿತವಾದಂತೆ ವಿವಿಧ ಕಾಲಘಟ್ಟಗಳಲ್ಲಿ ಅದರ ಏಳುಬೀಳುಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಮೊದಲನೆಯ ಅಧ್ಯಾಯವು ಇಡೀ ಸಂಶೋಧನೆಗೆ ಪೀಠಿಕೆಯಾಗಿದ್ದು ಇದರಲ್ಲಿ ತುಳುನಾಡಿನ ಭೌಗೋಳಿಕ ಎಲ್ಲೆ, ತುಳುವ ಪದದ ವಿಶ್ಲೇಷಣೆ, ಅಧ್ಯಯನದ ಉದ್ದೇಶ, ಮಹತ್ವ ಇತಿಮಿತಿಗಳು, ಉದ್ದೇಶಗಳು, ಸಂಶೋಧನ ವಿಧಾನ ಮುಂತಾದವುಗಳನ್ನು ಚರ್ಚಿಸಿ ಇವುಗಳ ಹಿನ್ನೆಲೆಯಲ್ಲಿ ಈ ಹಿಂದೆ ನಡೆದಿರುವ ಮತ್ತು ಪ್ರಕಟವಾಗಿರುವ ಸಂಶೋಧನೆಗಳ

ಸಾರದ ಇತಿಮಿತಿಯಲ್ಲಿ ಪ್ರಸ್ತುತ ಸಂಶೋಧನೆಯ ಆವಶ್ಯಕತೆಯನ್ನು ಮನಗಂಡು ಅದರನ್ವಯ ಹಿಂದಿನ ಆಕರ ಸಾಮಗ್ರಿಗಳನ್ನು ವಿಶ್ಲೇಷಿಸಿ ನಂತರ ಪ್ರಸ್ತುತ ಅಧ್ಯಯನದ ಸ್ವರೂಪವನ್ನು ನೀಡಲಾಗಿದೆ.

ಎರಡನೆಯ ಅಧ್ಯಾಯವು ತುಳುನಾಡಿನ ವ್ಯಾಪಾರ ಎಂಬ ಶೀರ್ಷಿಕೆಯನ್ನು ಹೊಂದಿದ್ದು ಈ ಅಧ್ಯಾಯದಲ್ಲಿ ಪ್ರಾಗೈತಿಕಹಾಸಿಕ ಕಾಲದಿಂದ ಬ್ರಿಟಿಷ್ ಆಗಮನದ ವರೆಗಿನ ತುಳುನಾಡಿನ ಸಾಗರೋತ್ತರ ಸಂಪರ್ಕವನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಆ ವ್ಯಾಪಾರ ನಡೆಯಲು ಹೇಗೆ ಆಂತರಿಕ ವ್ಯಾಪಾರ ಮತ್ತು ವ್ಯಾಪಾರಿ ಮಾರ್ಗಗಳು ನಮಗೆ ಹೇಗೆ ಅನುಕೂಲಕರವಾದವೆಂಬುದನ್ನು ಅರ್ಥಮಾಡಿಕೊಳ್ಳುವ ಪ್ರಯತ್ನಪಡಲಾಗಿದೆ. ಈ ಹಂತದಲ್ಲಿ ಆಂತರಿಕ ವ್ಯಾಪಾರವನ್ನು ಉಲ್ಲೇಖಿಸುವ ಆಕರ ಸಾಮಗ್ರಿಗಳಾದ ಶಾಸನಗಳು, ಶಾಸನಗಳ ವಸ್ತುವಿಷಯ ಅದರಲ್ಲಿ ಉಲ್ಲೇಖಿಸಲಾದ ವಿಶೇಷ ಸಂಗತಿಗಳನ್ನು ಕಡತಗಳಲ್ಲಿ ಉಲ್ಲೇಖಿತವಾಗಿರುವ ವ್ಯಾಪಾರ ಸಂಬಂಧಿ ಘಟನೆಗಳನ್ನು ಪರಿಚಯಿಸಲಾಗಿದೆ. ಶಾಸನಗಳು ಕಡತಗಳಲ್ಲದೆ ವಿದೇಶೀಯ ಬರವಣಿಗೆಗಳು ವಸಾಹತುಶಾಹಿ ಕಂಪೆನಿಯ ಕಛೇರಿಯ ಕಡತಗಳು ಮುಂತಾದವುಗಳನ್ನು ಮೂಲ ಆಕರಗಳಾಗಿ ಬಳಸಿಕೊಂಡು ತುಳುನಾಡಿನಲ್ಲಿ ನಡೆಯುತ್ತಿದ್ದ ಆಂತರಿಕ ವ್ಯಾಪಾರದ ಕ್ರಮಗಳನ್ನು ಅಧ್ಯಯನ ಮಾಡಲಾಗಿದೆ. ಈ ಅಧ್ಯಾಯದಲ್ಲಿ ತುಳುನಾಡಿನಲ್ಲಿ ವ್ಯಾಪಾರದಲ್ಲಿ ತೊಡಗಿಕೊಂಡಿದ್ದ ನಖರು, ಹಲರು, ಸೆಟ್ಟಿಕಾರರು ನಾನಾದೇಶಿಗಳು, ಹಂಜಮಾನ ಮುಂತಾದ ವ್ಯಾಪಾರ ಸಂಘಗಳು ಅವುಗಳು ಪ್ರಾರಂಭವಾದ ಕಾಲದ ಮತ್ತು ಪೋರ್ಚುಗೀಸ್ ಮತ್ತು ಬ್ರಿಟಿಷ್ ಆಗಮನದವರೆಗಿನ ಅವುಗಳ ವ್ಯಾಪಾರದ ಸ್ಥಿತಿಗತಿಗಳನ್ನು ವಿಶ್ಲೇಷಿಸಲಾಗಿದೆ. ಈ ಆಂತರಿಕ ವ್ಯಾಪಾರಕ್ಕೆ ಹೇಗೆ ನದಿಮಾರ್ಗಗಳು ಮತ್ತು ಭೂಮಾರ್ಗಗಳು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕಾರಿಯಾದವು ಅಷ್ಟೇ ಅಲ್ಲದೆ ಈ ವ್ಯಾಪಾರಿ ಸಮುದಾಯ ಬಯಲುಸೀಮೆ, ಮಲೆನಾಡು ಮತ್ತು ಕರಾವಳಿ ತುಳುನಾಡಿನ ವ್ಯಾಪಾರಿ ಕೇಂದ್ರಗಳು ಮತ್ತು ಬಂದರುಗಳ ನಡುವೆ ಹೇಗೆ ಸಂಪರ್ಕ ಸಾಧಿಸಿದ್ದವು ಮುಂತಾದ ಅಂಶಗಳನ್ನು ಕೂಡ ಈ ಅಧ್ಯಾಯದಲ್ಲಿ ಸುದೀರ್ಘವಾಗಿ ಚರ್ಚಿಸಲಾಗಿದೆ. ಜೊತೆಗೆ ಮಲೆನಾಡಿನ ಬಂದರುಗಳು ಹೊಂದಿದ್ದ ಭೂಮಾರ್ಗಗಳನ್ನು ಅವುಗಳು ಬಯಲುಸೀಮೆಯಲ್ಲಿ ತಲುಪುತ್ತಿದ್ದ ಮುಖ್ಯ ವ್ಯಾಪಾರಿ ಕೇಂದ್ರಗಳು, ರಾಜಧಾನಿಗಳು, ಉಪರಾಜಧಾನಿಗಳು ಮುಂತಾದ ವಿವರಗಳನ್ನು ಕ್ಷೇತ್ರಕಾರ್ಯ ಮತ್ತು

ಪ್ರಾಥಮಿಕ ಹಾಗೂ ಆನುಷಂಗಿಕ ಆಕರಗಳ ತೌಲನಿಕ ಅಧ್ಯಯನದ ಆಧಾರದ ಮೇಲೆ ನಿರೂಪಿಸಲಾಗಿದೆ.

ತುಳುನಾಡಿನ ವ್ಯಾಪಾರ ಕೇಂದ್ರಗಳು ಮತ್ತು ಕಡಲ ಕಿನಾರೆಯ ಬಂದರುಗಳು ವಿದೇಶೀಯ ಸಂಪರ್ಕವನ್ನು ಹೊಂದಿದ್ದ ಬಗೆ ತುಳುನಾಡಿನಿಂದ ವಿದೇಶಗಳಿಗೆ ಈ ಬಂದರುಗಳು ಮತ್ತು ವ್ಯಾಪಾರಿ ಪಟ್ಟಣಗಳು ಸಾಗಿಸುತ್ತಿದ್ದ ಸರಕುಗಳು ಅವುಗಳ ಗುಣಮಟ್ಟ ಮತ್ತು ಅವುಗಳನ್ನು ಯಾವ ಯಾವ ಪ್ರದೇಶಗಳಿಗೆ ಸಾಗಿಸುತ್ತಿದ್ದರು ಎಂಬ ವಿವರಗಳನ್ನು ಸಾಕಷ್ಟು ವಿಸ್ತಾರವಾಗಿ ಆಕರಗಳ ತೌಲನಿಕ ಅಧ್ಯಯನದ ಆಧಾರದ ಮೇಲೆ ಸತ್ಯಕ್ಕೆ ಅತಿ ಹತ್ತಿರವಾದ ವಿಚಾರಗಳನ್ನು ಮಾತ್ರ ಸಂಪ್ರಬಂಧದಲ್ಲಿ ಮಂಡಿಸಿದ್ದೇವೆ. ಕರ್ನಾಟಕದ ಈ ಬಂದರುಗಳ ಪ್ರಮುಖ ರಫ್ತು ಅಕ್ಕಿ, ಸಂಭಾರ ಪದಾರ್ಥಗಳು, ಭಾರತದಲ್ಲಿ ಅದರಲ್ಲೂ ದಕ್ಷಿಣ ಕರ್ನಾಟಕದ ಒಳನಾಡಿನಲ್ಲಿ ದೊರೆಯುವ ಪ್ರಶಸ್ತ ಮತ್ತು ಅರೆಪ್ರಶಸ್ತ ಶಿಲೆಗಳು ಔಷಧೀಯ ಸಸ್ಯಗಳು, ಔಷಧಗಳು, ಹತ್ತಿ ಮತ್ತು ರೇಷ್ಮೆಬಟ್ಟೆ, ಕಬ್ಬಿಣ ಮುಂತಾದ ವಸ್ತುಗಳನ್ನು ವಿದೇಶಗಳಿಗೆ ರಫ್ತುಮಾಡುತ್ತಿದ್ದ ಬಗೆ ಮತ್ತು ಭಾರತೀಯ ವ್ಯಾಪಾರಿಗಳು ಅದರಿಂದ ಪಡೆಯುತ್ತಿದ್ದ ಅಪಾರವಾದ ಲಾಭ ಮತ್ತು ಈ ವ್ಯಾಪಾರದಲ್ಲಿ ತೊಡಗಿದ್ದ ಜನಸಮುದಾಯದ ಬಗೆಗೆ ಕೂಡ ಸಾಕಷ್ಟು ವಿಸ್ತೃತ ಮಾಹಿತಿಯನ್ನು ಈ ಅಧ್ಯಾಯವು ಒಳಗೊಂಡಿರುತ್ತದೆ.

ತುಳುನಾಡಿನ ಎಲ್ಲೆಯಲ್ಲಿ ಪ್ರಾರಂಭದ ದಿನಗಳಿಂದ ಬ್ರಿಟಿಷ್ ವಸಾಹತುಶಾಹಿ ಆರಂಭವಾಗುವವರೆಗೆ ವಿದೇಶೀಯ ವ್ಯಾಪಾರದಲ್ಲಿ ತೊಡಗಿದ್ದ ಬಂದರುಗಳಾದ ಹೊನ್ನಾವರ, ಭಟ್ಕಳ, ಗಂಗೊಳ್ಳಿ, ಬಸ್ರೂರು, ಮಲ್ಪೆ, ಬಾರ್ಕೂರು, ಮಂಗಳೂರು ಮುಂತಾದ ಸ್ಥಳಗಳು, ಅವುಗಳ ಮಹತ್ವ, ಆ ಬಂದರುಗಳು ನಡೆಸುತ್ತಿದ್ದ ವ್ಯಾಪಾರ ಮತ್ತು ವಹಿವಾಟುಗಳ ಅಧ್ಯಯನವನ್ನೂ ಸಹ ಈ ಅಧ್ಯಾಯದಲ್ಲಿ ಅಡಕ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ವಿಜಯನಗರೋತ್ತರ ಕಾಲದಿಂದ ಬ್ರಿಟಿಷ್ ಆಗಮನದ ಕಾಲದ ವರೆಗಿನ ಆಂತರಿಕ ಮತ್ತು ವಿದೇಶಿ ವ್ಯಾಪಾರದ ಏಳುಬೀಳುಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ವಿಜಯನಗರ ಸಾಮ್ರಾಜ್ಯದ ಮೂರನೆಯ ಮನೆತನ ಸಾಳ್ವರ ಕಾಲದಲ್ಲಿಯೇ ಪೋರ್ಚುಗೀಸರು ಕರ್ನಾಟಕದ ಕಿನಾರೆಯನ್ನು ಪ್ರವೇಶಿಸಿದರು. ಕೃಷ್ಣರಾಯನ ಮರಣದವರೆಗೆ ಪೋರ್ಚುಗೀಸರು ಕರ್ನಾಟಕದಲ್ಲಿ ಆಂತರಿಕ ವ್ಯಾಪಾರದಲ್ಲಿ ತಲೆಹಾಕಲು ಸಾಧ್ಯವಾಗಲಿಲ್ಲ. ಆದರೂ ಕೃಷ್ಣರಾಯನ ಮರಣಾನಂತರ ಗೋವೆ ಪೋರ್ಚುಗೀಸರ

ಕೇಂದ್ರಸ್ಥಾನವಾಗಿ ಮಾರ್ಪಟ್ಟ ಹಿನ್ನೆಲೆಯಲ್ಲಿ ಅರವೀಡು ಮನೆತನದ ರಾಜರುಗಳು ಬಹಮನಿ ಸಾಮ್ರಾಜ್ಯದೊಂದಿಗಿನ ವೈರತ್ವವನ್ನು ಹೋರಾಟಕ್ಕೆ ಬದಲಿಸಿ ತಮ್ಮ ಹೋರಾಟಕ್ಕೆ ಕುದುರೆಗಳ ಆವಶ್ಯಕತೆ ಇದ್ದುದರಿಂದ ಪೋರ್ಚುಗೀಸರಿಗೆ ಸೋತ ಅರಬ್ಬರನ್ನು ಮುನ್ನೆಲೆಗೆ ತರಲು ಅಶಕ್ತವಾಗಿ ಪೋರ್ಚುಗೀಸರನ್ನೇ ಆಶ್ರಯಿಸಿ ಅವರಿಂದ ಅರಬ್ಬೀ ಕುದುರೆಗಳನ್ನು ಆಮದು ಮಾಡಿಕೊಳ್ಳುವ ಪ್ರಯತ್ನದಲ್ಲಿ ಸಫಲರಾದರೂ ಭಟ್ಕಳ, ಗೋವೆ, ಮುಂತಾದ ಬಂದರುಗಳಲ್ಲಿನ ಆಂತರಿಕ ಮತ್ತು ವಿದೇಶೀ ವ್ಯಾಪಾರದ ಮಹತ್ವವನ್ನು ಪೋರ್ಚುಗೀಸರಿಗೆ ಬಿಟ್ಟುಕೊಟ್ಟು ಅಪಾರ ನಷ್ಟವನ್ನನುಭವಿಸಿದರಲ್ಲದೆ ಪೋರ್ಚುಗೀಸರು ಆಂತರಿಕ ವ್ಯಾಪಾರ ವನ್ನು ತಮ್ಮ ಕಪಿಮುಷ್ಟಿಯಲ್ಲಿ ಹಿಡಿದುಕೊಳ್ಳಲು ಅನುವು ಮಾಡಿಕೊಟ್ಟರು. ತಾಳಿಕೋಟೆ ಯುದ್ಧಾನಂತರ ತುಳುನಾಡಿನ ವ್ಯಾಪಾರಿ ಮಾರ್ಗಗಳ ಮೇಲೆ ಪ್ರಭುತ್ವ ಸಾಧಿಸಲು ಕೆಳದಿ ಅರಸರು ಪ್ರಯತ್ನ ಮಾಡಿ ಸಫಲರಾದರು. ಈ ಕಾಲಘಟ್ಟದಲ್ಲಿ ಪೋರ್ಚುಗೀಸರು ತಮ್ಮ ಮೂಲವೃತ್ತಿಯಾದ ವ್ಯಾಪಾರವನ್ನು ಕಡೆಗಣಿಸಿ ಕ್ರೈಸ್ತಮತ ಪ್ರಚಾರವನ್ನೇ ಮೂಲ ಉದ್ದೇಶವನ್ನಾಗಿ ಪರಿವರ್ತಿಸಿಕೊಂಡು ಧರ್ಮಬಾಹಿರ ಚಟುವಟಿಕೆಯಲ್ಲಿ ಮತ್ತು ಹಿಂದುಗಳ ಮಾರಣಹೋಮ ಮುಸಲ್ಮಾನರ ಕೊಲೆ, ಧಾರ್ಮಿಕ ಕ್ಷೇತ್ರಗಳ ವಿನಾಶ ಮುಂತಾದವುಗಳಲ್ಲಿ ತೊಡಗಿಕೊಂಡಿರುವುದರಿಂದ ಬಸ್ರೂರು, ಭಟ್ಕಳ, ಹೊನ್ನಾವರ ಮುಂತಾದ ಪ್ರದೇಶಗಳಲ್ಲಿ ಜನರು ಅವರಿಗೆ ಪ್ರತಿರೋಧ ವ್ಯಕ್ತಪಡಿಸಿದರು. ಕೆಳದಿಯ ಅರಸರಿಗೂ ಈ ವಿಷಯ ಮುಟ್ಟಿ ಅವರು ಸೈನ್ಯ ಸಮೇತರಾಗಿ ತುಳುನಾಡನ್ನು ಪ್ರವೇಶಿಸಿ ಪೋರ್ಚುಗೀಸರನ್ನು ಈ ಮೇಲೆ ಉಲ್ಲೇಖಿಸಿದ ಸ್ಥಳಗಳಿಂದ ಹೊರದಬ್ಬಿದರು. ಅಷ್ಟೇ ಅಲ್ಲದೆ ತಮ್ಮದೇ ಆದ ನೌಕಾ ಪಡೆಯನ್ನು ಕಟ್ಟಿಕೊಂಡು ವಿದೇಶಗಳೊಂದಿಗೆ ಮತ್ತು ಪಶ್ಚಿಮ ಕರಾವಳಿಯ ಇತರ ಬಂದರುಗಳೊಂದಿಗೆ ವ್ಯಾಪಾರವನ್ನು ನಡೆಸಿದರು. ಇದು ಬಹುಕಾಲ ಮುಂದುವರಿಯಲಿಲ್ಲ. ಹೈದರಾಲಿಯು ಕೆಳದಿಯನ್ನು ಆಕ್ರಮಿಸಿದ ನಂತರ ಕೆನರಾ ಕೂಡ ಹೈದರಾಲಿಯ ವಶವಾಯಿತು. ಹೈದರಾಲಿಯು ಎರಡು ಮೈಸೂರು ಯುದ್ಧಗಳ ಅವಧಿಯವರೆಗೆ ಕೆನರಾ ಪ್ರದೇಶದ ಮೇಲೆ ತನ್ನ ಪ್ರಭುತ್ವವನ್ನು ಸಾಧಿಸಿದ್ದನು. ದುರದೃಷ್ಟವಶಾತ್ ಎರಡನೆಯ ಮೈಸೂರು ಯುದ್ಧ ಮುಕ್ತಾಯವಾಗುವ ಮೊದಲೇ 1782ರಲ್ಲಿ ಅಸುನೀಗಿದನು. 1784ರಲ್ಲಿ ಮಂಗಳೂರು ಒಪ್ಪಂದದೊಂದಿಗೆ ಎರಡನೇ ಮೈಸೂರು ಯುದ್ಧ ಅಂತ್ಯವಾಯಿತು. 1791ರವರೆಗೆ ಕೆನರಾ ಹೈದರಾಲಿಯ ಮಗ ಟಿಪ್ಪುವಿನ ವಶದಲ್ಲಿದ್ದಿತು. 1792ರ ಶ್ರೀರಂಗಪಟ್ಟಣ ಒಪ್ಪಂದದ ನಂತರ ಕೆನರಾ ಮುಂಬೈ ಪ್ರಾಂತ್ಯದ ಭಾಗವಾಗಿ ಪರಿವರ್ತಿತವಾಯಿತು. ಈ

ಕಾಲಾವಧಿಯಲ್ಲಿ ಮಂಗಳೂರಿನಿಂದ ಹೊನ್ನಾವರದವರೆಗಿನ ಬಂದರುಗಳು ಹಾಗೂ ಈ ಬಂದರುಗಳು ಒಳನಾಡಿನ ವ್ಯಾಪಾರ ಕೇಂದ್ರಗಳವರೆಗೆ ಸಂಪರ್ಕ ಸಾಧಿಸಿದ್ದ ಬಗೆಗೆ ಆ ಮಾರ್ಗದಲ್ಲಿ ಸರಬರಾಜಾಗುತ್ತಿದ್ದ ಸಾಮಗ್ರಿಗಳು ಮತ್ತು ವ್ಯಾಪಾರದ ಮಾಧ್ಯಮಗಳು, ಸಾಗಾಣಿಕೆಯ ಮಾಧ್ಯಮಗಳು ಮುಂತಾದವುಗಳ ಬಗ್ಗೆ ತುಳುನಾಡನ್ನು ಸಂದರ್ಶಿಸಿದ ಇಂಗ್ಲಿಷ್, ಡಚ್ ವ್ಯಾಪಾರಿಗಳು ಕಂಪನಿಯ ಸರ್ವೇಕ್ಷಣೆಯ ವರದಿಗಳು ಮುಂತಾದವುಗಳು ಮಹತ್ವಪೂರ್ಣವಾದ ವರದಿಗಳನ್ನು ಸಲ್ಲಿಸುತ್ತವೆ. ಅವುಗಳೆಲ್ಲವನ್ನೂ ಪರಿಶೀಲಿಸಿ ಆನುಷಂಗಿಕ ಆಕರಗಳನ್ನು ತುಲನೆ ಮಾಡಿ ಅವುಗಳ ಸತ್ಯಾಸತ್ಯತೆಯನ್ನು ಒರೆಹಚ್ಚಿ ಸತ್ಯಕ್ಕೆ ಸಮೀಪದಲ್ಲಿರುವ ಸಂಗತಿಗಳನ್ನು ಈ ಅಧ್ಯಾಯದಲ್ಲಿ ಅಡಕಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ತುಳುನಾಡಿನ ಆಂತರಿಕ ವ್ಯಾಪಾರ ಕೇಂದ್ರಗಳು, ಈ ಆಂತರಿಕ ವ್ಯಾಪಾರ ಕೇಂದ್ರಗಳಲ್ಲಿ ನೆಲೆನಿಂತು ಧಾರ್ಮಿಕ, ಮತ್ತು ಸಾಮಾಜಿಕ ಅಭಿವೃದ್ಧಿಯ ಜೊತೆಗೆ ವ್ಯಾಪಾರ ಮತ್ತು ವಿನಿಮಯದಲ್ಲಿ ತೊಡಗಿಕೊಂಡಿದ್ದ ಶ್ರೇಷ್ಠಿ ವರ್ಗ ಹಾಗೂ ವರ್ತಕ ಸಂಘಗಳು ತುಳುನಾಡಿನ ಜೈನ, ಶೈವ, ವೈಷ್ಣವ, ಧಾರ್ಮಿಕ ಸ್ಥಳಗಳು ವ್ಯಾಪಾರಿ ಕೇಂದ್ರಗಳಾಗಿ ಕೂಡ ಕಾರ್ಯನಿರ್ವಹಿಸಿರುವ ಬಗೆಯನ್ನು ಪ್ರಾಂತೀಯ ರಾಜಧಾನಿಗಳಾದ ಮಂಗಳೂರು, ಬಾರ್ಕೂರು, ಬಸ್ರೂರು, ಗೇರುಸೊಪ್ಪೆ, ಬನವಾಸಿ, ಕಾರ್ಕಳ, ವೇಣೂರು, ಮೂಡಬಿದರೆ, ಶಂಕರನಾರಾಯಣ, ಕೊಲ್ಲೂರು ಮುಂತಾದ ಸ್ಥಳಗಳು ವ್ಯಾಪಾರಿ ಕೇಂದ್ರಗಳಾಗಿ, ಧಾರ್ಮಿಕ ಕೇಂದ್ರಗಳಾಗಿ, ಸಾಮಾಜಿಕ–ಧಾರ್ಮಿಕ ಚಟುವಟಿಕೆಗಳ ಜೊತೆಯಲ್ಲಿ ಆರ್ಥಿಕ ಚಟುವಟಿಕೆಯನ್ನು ಬೆಳೆಸಿರುವುದು ಅಲ್ಲಿನ ಶಾಸನಗಳು, ಸ್ಮಾರಕಗಳು, ತಿಳಿಹೇಳುವ ಅಂಶಗಳನ್ನು ಆಧರಿಸಿ ತುಳುನಾಡಿನ ವ್ಯಾಪಾರ ಕೇಂದ್ರಗಳು, ತುಳುನಾಡಿನ ವ್ಯಾಪಾರದಲ್ಲಿ ಬಹುಮುಖ್ಯವಾಗಿ ವರ್ಗಾವಣೆಯಾದ ಸರಕುಗಳು ಅವುಗಳ ಮೂಲಗಳ ಬಗೆಗೆ ವಿಸ್ತೃತವಾದ ಅಧ್ಯಯನವನ್ನು ಮಾಡಲಾಗಿದೆ.

ಈ ಸಂಶೋಧನೆಯು ಐದು ಅಧ್ಯಾಯಗಳಲ್ಲಿ ಪಸರಿಸಿದ್ದು ಪ್ರಸ್ತುತ ಅಧ್ಯಾಯವು ಎರಡು, ಮೂರು ಮತ್ತು ನಾಲ್ಕನೆಯ ಅಧ್ಯಾಯಗಳಲ್ಲಿ ಕಂಡುಕೊಂಡ ವಿಶೇಷವಾದ ಸಂಗತಿಗಳನ್ನು ಮತ್ತು ಆಯಾ ಅಧ್ಯಾಯಗಳಲ್ಲಿ ಚರ್ಚಿಸಲಾದ ವಿಚಾರಗಳ ಸಮಗ್ರ ಮಾಹಿತಿಯನ್ನು ಸಾರಾಂಶ ರೂಪದಲ್ಲಿ ನೀಡುತ್ತದೆ.

## ಸಂಶೋಧನೆಯ ಫಲಿತಗಳು :

1. ಕರಾವಳಿ ಕರ್ನಾಟಕವು ನೂತನ ಶಿಲಾಯುಗ ಸಂಸ್ಕೃತಿಯ ಕಾಲಘಟ್ಟದಿಂದಲೇ ವಿದೇಶೀಯ ಸಂಸ್ಕೃತಿಗಳೊಂದಿಗೆ ಸಮಕಾಲೀನ ಭಾರತೀಯ ಸಂಸ್ಕೃತಿಯಾದ ಹರಪ್ಪಾ ನಾಗರೀಕತೆಯೊಂದಿಗೆ ಸಂಪರ್ಕ ಹೊಂದಿತ್ತೆಂಬುದು ಈಗಾಗಲೇ ನಡೆದ ಸಂಶೋಧನೆಗಳಿಂದ ನಿರೂಪಿತವಾಗಿರುವುದನ್ನು ಮತ್ತೆ ಪುನರವಲೋಕಿಸಿ ಖಚಿತ ಪಡಿಸಿಕೊಳ್ಳಲಾಗಿದೆ.
2. ಬೃಹತ್ ಶಿಲಾಯುಗ ಸಂಸ್ಕೃತಿಯು ಕರಾವಳಿ ಮಾರ್ಗವಾಗಿಯೇ ಭಾರತವನ್ನು ಹೊಕ್ಕಿತೆಂದು ಪ್ರಾರಂಭದ ವಿದ್ವಾಂಸರುಗಳಾದ ಮಹಾಲಿಂಗಂ, ಬಿ. ಕೆ. ಗುರುರಾಜ ರಾವ್, ಸುಂದರ ಮುಂತಾದವರು ಪ್ರತಿಪಾದಿಸಿದ್ದರು. ಇತ್ತೀಚಿನ ಸಂಶೋಧನೆಗಳ ಆಧಾರದ ಮೇಲೆ ಡೆಕ್ಕನ್ ಕಾಲೇಜಿನ ಎಂ.ಎಲ್.ಕೆ. ಮೂರ್ತಿಯವರು ಬೃಹತ್ ಶಿಲಾಯುಗ ಸಂಸ್ಕೃತಿಯು ತೀರ ಪ್ರದೇಶದಿಂದ ಬಯಲುಸೀಮೆಗೆ ಹರಡಿರುವುದನ್ನು ಆಧಾರಪೂರ್ವಕವಾಗಿ ನಿರೂಪಿಸಿರುತ್ತಾರೆ. ಕರಾವಳಿ ಕರ್ನಾಟಕದಲ್ಲಿ ಕಂಡುಬಂದ ಬೃಹತ್‌ಶಿಲಾಯುಗದ ಚಟುವಟಿಕೆಗಳ ಅಧ್ಯಯನ ಕೂಡ ನಮ್ಮನ್ನು ಮೂರ್ತಿಯವರ ಈ ಅಭಿಪ್ರಾಯವನ್ನು ಒಪ್ಪಿಕೊಳ್ಳುವತ್ತ ವಾಲುವಂತೆ ಮಾಡುತ್ತದೆ. ಅಂದರೆ ಬೃಹತ್ ಶಿಲಾಯುಗ ಸಂಸ್ಕೃತಿಯು ಸಮುದ್ರಮಾರ್ಗವಾಗಿಯೇ ಬಂದಿರುವ ಸಾಧ್ಯತೆಯನ್ನು ತುಳುನಾಡಿಗೂ ಅನ್ವಯಿಸಿಕೊಳ್ಳಬಹುದಾಗಿದೆ.
3. ಕರ್ನಾಟಕದ ತುಳುನಾಡಿನ ಎಲ್ಲೆಯೊಳಗಿರುವ ಮಲ್ಪೆ, ಹಯಗುಂದ ಪಟ್ಟಣ, ಹೊನ್ನಾವರ, ಬನವಾಸಿ, ಮಂಗಳೂರಿನ ಕದ್ರಿ ಮುಂತಾದ ಸ್ಥಳಗಳು ಇತಿಹಾಸ ಆರಂಭಕಾಲದ ನೆಲೆಗಳಾಗಿದ್ದು ಅವು ವಿದೇಶೀಯ ಸಂಪರ್ಕದಲ್ಲಿ ತಮ್ಮನ್ನು ತೊಡಗಿಸಿಕೊಂಡಿದುದನ್ನು ವಿದ್ವಾಂಸರು ಹಲವಾರು ಸಂಶೋಧನೆಗಳ ಹಿನ್ನೆಲೆಯಲ್ಲಿ ನಿರೂಪಿಸಿರುತ್ತಾರೆ. ತುಳು ನಾಡಿನ ಹೆಸರಾಂತ ವಿದ್ವಾಂಸರಾದ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಗಳು ಗ್ರೀಕ್‌ನಲ್ಲಿ ದೊರೆತ ಹಸ್ತಪ್ರತಿಯೊಂದನ್ನು ಆಧರಿಸಿ ಇತಿಹಾಸ ಆರಂಭಕಾಲದಲ್ಲಿ ಗ್ರೀಕರು ಕರ್ನಾಟಕ ಕಡಲತೀರದೊಂದಿಗೆ ಸಂಪರ್ಕ ಹೊಂದಿದ್ದನ್ನು ದಾಖಲಿಸುತ್ತ ಗ್ರೀಕ್ ನಾಟಕದಲ್ಲಿ ಉಲ್ಲೇಖವಾಗಿರುವ ಕನ್ನಡ

ಪದಗಳನ್ನು ಗುರುತಿಸುತ್ತಾರೆ. ಇದನ್ನು ಅವರು ಶಾಮಾಶಾಸ್ತ್ರಿಗಳು ಮತ್ತು ಸಾಲೆತ್ತೂರು ಅವರ ಅಧ್ಯಯನಗಳೊಂದಿಗೆ ಸಮೀಪಕರಿಸುತ್ತಾರೆ. ಇದು ತುಳುನಾಡಿನ ಇತಿಹಾಸ ಆರಂಭಕಾಲದ ಅತಿ ಮಹತ್ವದ ಘಟನೆ.

4. ವಿಶೇಷವಾಗಿ ಹೊನ್ನಾವರ ಸಮೀಪದ ಹಯಗುಂದ ಪಟ್ಟಣ ಶಾತವಾಹನೀಯ ಯುಗದ ಸಮಕಾಲೀನ ಸಂಸ್ಕೃತಿಯ ಮಜಲುಗಳನ್ನು ಹೊಂದಿದ್ದು ಇಲ್ಲಿನ ಪ್ರಾಚೀನತೆಯನ್ನು ಮೌರ್ಯಯುಗಕ್ಕೆ ಮತ್ತು ಶಾತವಾಹನಯುಗಕ್ಕೆ ಕೊಂಡೊಯ್ಯು ವುದನ್ನು ಕಾಣಬಹುದಾಗಿದೆ. ಅಲ್ಲದೆ ತುಳುನಾಡಿನ ಕರಾವಳಿಯುದ್ದಕ್ಕೂ ಕಂಡುಬಂದಿರುವ ಬೌದ್ಧ ಸ್ಮಾರಕಗಳು ಈ ವಿಚಾರವನ್ನು ಪುಷ್ಟೀಕರಿಸುತ್ತವೆ. ಈ ಹಿನ್ನೆಲೆಯಲ್ಲಿ ಆಳುಪರಿಗೂ ಪೂರ್ವದಲ್ಲಿಯೇ ತುಳುನಾಡು ವಿದೇಶೀ ವ್ಯಾಪಾರದಲ್ಲಿ ತೊಡಗಿಕೊಂಡಿತ್ತೆಂದು ಗ್ರೀಕ್ ಪ್ರಹಸನದ ಸಂಶೋಧನೆ ಮತ್ತು ತುಳುನಾಡಿನ ಸ್ಥಳನಾಮಗಳು ಪ್ರವಾಸ ಕಥನಗಳಲ್ಲಿ ಉಲ್ಲೇಖವಾಗಿರುವುದರ ಹಿನ್ನೆಲೆಯಲ್ಲಿ ಮತ್ತೊಮ್ಮೆ ಖಚಿತವಾಗುತ್ತದೆ.

5. ತುಳುವ ಪದವೇ ಸಮುದ್ರ ಸಂಪರ್ಕದೊಂದಿಗೆ ತಳುಕು ಹಾಕಿಕೊಂಡಿರುವುದರಿಂದ ತುಳುನಾಡಿಗರು ಮತ್ತು ಆಳುಪರ ಕಾಲಘಟ್ಟದಲ್ಲಿ ಕೂಡ ತುಳುನಾಡು ಆಂತರಿಕ ಮತ್ತು ವಿದೇಶಿ ವ್ಯಾಪಾರದಲ್ಲಿ ಬಹುಮುಖ್ಯ ಪಾತ್ರ ವಹಿಸಿದುದನ್ನು ಇತಿಹಾಸದ ಎಲ್ಲ ಆಕರ ಸಾಮಗ್ರಿಗಳು ಅನುಮೋದಿಸುತ್ತವೆ.

6. ಇದೇ ಪರಿಸ್ಥಿತಿ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರ ಕಾಲದಲ್ಲಿ ಕೂಡ ಮುಂದುವರಿಯಿತು. ತುಳುವರು ಬಾದಾಮಿ ಚಾಲುಕ್ಯರು ಮತ್ತು ರಾಷ್ಟ್ರಕೂಟರ ಸಾಮಂತರಾಗಿ ಕಾರ್ಯನಿರ್ವಹಿಸಿರುವುದನ್ನು ಸಾಲೆತ್ತೂರು ಅವರು ಶಾಸನಗಳ ಆಧಾರದ ಹಿನ್ನೆಲೆಯಲ್ಲಿ ನಿರೂಪಿಸಿರುತ್ತಾರೆ. ಈ ಎರಡೂ ಸಾಮ್ರಾಜ್ಯಗಳ ರಾಜಧಾನಿಗಳು ಉತ್ತರ ಕೊಂಕಣಕ್ಕೆ ಸಮೀಪದಲ್ಲಿದ್ದುದರಿಂದ ದಕ್ಷಿಣ ಕೊಂಕಣದ ಬಂದರುಗಳ ವ್ಯಾಪಾರಗಳು ಸ್ಥಾನಿಕ ಅವಶ್ಯಕತೆಗಳನ್ನು ಪೂರೈಸುತ್ತಿದ್ದವೇ ಹೊರತು ರಾಜಧಾನಿಯ ಮತ್ತು ರಾಜನ ಅವಶ್ಯಕತೆಗಳನ್ನು ಪೂರೈಸುವ ಮಹತ್ವದ ಜವಾಬ್ದಾರಿ ಯನ್ನು ಹೊರುತ್ತಿರಲಿಲ್ಲ. ಈ ದಿಸೆಯಲ್ಲಿ ಹೊಯ್ಸಳರು ಮತ್ತು ವಿಜಯನಗರ ಕಾಲದಲ್ಲಿ ತುಳುನಾಡಿನ ಬಂದರು ಪಟ್ಟಣಗಳುಹೆಚ್ಚಿನ ಮಹತ್ವವನ್ನು ಪಡೆದು ಕೊಂಡಿದ್ದುದನ್ನು ಗುರುತಿಸಲಾಗಿದೆ. ಹೊಯ್ಸಳರ ಕಾಲದಲ್ಲಿ ಕರಾವಳಿ

ಕರ್ನಾಟಕದಿಂದ ಬಯಲುಪ್ರದೇಶವನ್ನು ಸಂಧಿಸುವ ಅಥವಾ ಸಂಪರ್ಕಿಸುವ ಮಾರ್ಗಗಳನ್ನು ಗುರುತಿಸಲಾಗಿದೆ. ಅವುಗಳು ಈ ಕೆಳಗಿನಂತಿವೆ.

7. ಮಂಗಳೂರು, ಉಪ್ಪಿನಂಗಡಿ, ಬೆಳ್ತಂಗಡಿ, ನೇತ್ರಾವತಿ, ಕಣಿವೆಯ ಮೂಲಕ, ಅಂಗಡಿ, ಮೂಡಿಗೆರೆ, ಚಿಕ್ಕಮಗಳೂರು, ದೋರಸಮುದ್ರದ ಹಾದಿ ಚಾಲ್ತಿಯಲ್ಲಿತ್ತು. ಬೆಳ್ತಂಗಡಿ ಯಿಂದ ಅಂಗಡಿಯವರೆಗಿನ ದಾರಿ ಕಷ್ಟದಾಯಕವಾಗಿದ್ದರೂ, ಕಳ್ಳಕಾಕರ ಹಾವಳಿ ಯಿಂದ ಮುಕ್ತವಾಗಿದ್ದು ರಾಜ್ಯದೊಳಗಿನ ಮಾರ್ಗವಾಗಿದ್ದಿತು.
8. ತುಳುನಾಡು ಮತ್ತು ಬಯಲುಸೀಮೆಯನ್ನು ಸಂಪರ್ಕಿಸುವ ಇತರ ಮಾರ್ಗಗಳೆಂದರೆ

❖ ಮಂಗಳೂರು–ಉಪ್ಪಿನಂಗಡಿ–ಕನ್ಯಾಡಿ–ಸುಬ್ರಮಣ್ಯ–ಸಕಲೇಶಪುರ–ದೋರಸಮುದ್ರ

❖ ಮಂಗಳೂರು–ಉಪ್ಪಿನಂಗಡಿ–ಉಜಿರೆ–ಶಿಶಿಲೇಶ್ವರ–ಸಕಲೇಶಪುರ–ದೋರಸಮುದ್ರ ಮಾರ್ಗವು ಚಾಲ್ತಿಯಲ್ಲಿತ್ತು.

❖ ಉದ್ಯಾವರ–ಉಡುಪಿ–ಬಾರಕೂರು–ಕಾರ್ಕಳ–ಉಪ್ಪಿನಂಗಡಿ–ಸಕಲೇಶಪುರ–ದೋರಸಮುದ್ರ.

❖ ಉಡುಪಿ–ಬಾರಕೂರು–ಆಗುಂಬೆ–ಶೃಂಗೇರಿ–ಎನ್.ಆರ್.ಪುರ–ಮೂಡಿಗೆರೆ–ಬೇಲೂರು–ದೋರಸಮುದ್ರ.

❖ ಬಸರೂರು–ಶಂಕರನಾರಾಯಣ–ಹಾಲಾಡಿ–ಸಿದ್ಧಾಪುರ–ಹೊಸಅಂಗಡಿ–ಸಾಗರ–ಶಿವಮೊಗ್ಗ.

❖ ಮಂಗಳೂರು–ಉಪ್ಪಿನಂಗಡಿ–ಪುತ್ತೂರು–ಸೂಳ್ಯ–ಮಡಿಕೇರಿ–ಶ್ರೀರಂಗಪಟ್ಟಣ.

❖ ಶಿರಾಲಿ–ಭಟ್ಕಳ–ಗೇರುಸೊಪ್ಪ–ಮಾವಿನಗುಂಡಿ–ಸಿದ್ಧಾಪುರ–ಶಿರಸಿ–ಬನವಾಸಿ.

❖ ಹೊನ್ನಾವರ–ಗೇರುಸೊಪ್ಪ–ಜೋಗ–ಸಾಗರ–ಶಿವಮೊಗ್ಗ.

ಈ ಮಾರ್ಗಗಳು ವಸಾಹತುಶಾಹಿ ಕಾಲಘಟ್ಟದಲ್ಲಿ ಹೆಚ್ಚು ಅಭಿವೃದ್ಧಿಹೊಂದಿ ಕೆಲವೊಂದು ಘಟ್ಟದ ರಸ್ತೆಗಳು ನಿರ್ಮಾಣಗೊಂಡವು. ಶಿರಾಡಿ, ಚಾರ್ಮಾಡಿ, ಬಿಸಲೆ, ಸಂಸೆ, ಹುಲಿಕಲ್ಲು ಆಗುಂಬೆ, ಯಲ್ಲಾಪುರ, ಗೇರುಸೊಪ್ಪೆ ಮುಂತಾದ ಘಾಟಿರಸ್ತೆಗಳು ವಸಾಹತುಶಾಹಿ ಕಾಲದಲ್ಲಿ ನಿರ್ಮಾಣಗೊಂಡವು. ಅಂದರೆ ಪ್ರಾಣಿಗಳು ಮತ್ತು ಮಾನವರು ಹೊರೆ ರೂಪದಲ್ಲಿ

ಸರಕು ಸಾಗಾಣಿಕೆ ಮಾಡುತ್ತಿದ್ದುದನ್ನು ಈ ಕಾಲದಲ್ಲಿ ಗಾಡಿ ರಸ್ತೆಗಳಾಗಿ ಬದಲಾಯಿಸಲಾಯಿತು.

ಬಯಲುಸೀಮೆಯ ಹೆಚ್ಚಿನ ಉತ್ಪನ್ನಗಳು ಕರಾವಳಿಯ ಬಂದರುಗಳನ್ನು ಸೇರಿ ಅಲ್ಲಿಂದ ವಿದೇಶಗಳಿಗೆ ರಫ್ತಾಗುತ್ತಿದ್ದವು. ವಿಶೇಷವಾಗಿ ಬಯಲುಸೀಮೆಯ ಅಕ್ಕಿ, ಬೇಳೆ ಕಾಳುಗಳು, ಎಣ್ಣೆಕಾಳುಗಳು, ಹತ್ತಿಬಟ್ಟೆ, ರೇಷ್ಮೆಬಟ್ಟೆ, ಸಂಭಾರಪದಾರ್ಥಗಳು, ಗಂಧದ ಮರ, ಔಷಧೀಯ ಸಸ್ಯಗಳು, ಕಬ್ಬಿಣ ಅದರಲ್ಲೂ ಉಕ್ಕು ಕರ್ನಾಟಕದ ಬಂದರುಗಳ ಮೂಲಕ ವಿದೇಶಗಳಿಗೆ ರಫ್ತಾಗುತ್ತಿತ್ತು. ಹೊಯ್ಸಳ ಮತ್ತು ವಿಜಯನಗರ ಕಾಲದಲ್ಲಿ ಅತೀ ಹೆಚ್ಚಿಗೆ ಕುದುರೆಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು. ಇದಲ್ಲದೆ ತಾಮ್ರ, ಸೀಸ, ಕರ್ಪೂರ, ಮುಂತಾದ ಅಲಭ್ಯ ಲೋಹಗಳನ್ನು ಮಾತ್ರ ತರಿಸಿಕೊಳ್ಳುತ್ತಿದ್ದರು.

ತುಳುನಾಡು ವಿಜಯನಗರಕಾಲಘಟ್ಟದಲ್ಲಿ ಹೊಸ ವ್ಯಾಪಾರಸಂಸ್ಥೆಯೊಂದಕ್ಕೆ ಅವಕಾಶ ಮಾಡಿಕೊಟ್ಟಿತು, ಅದೇ ಭಂಡಸಾಲೆಗಳು. ಇವು ತುಳುನಾಡಿನ ಆಂತರಿಕ ಮತ್ತು ವಿದೇಶೀ ವ್ಯಾಪಾರದಲ್ಲಿ ಸಗಟು ಮತ್ತು ಚಿಲ್ಲರೆ ವ್ಯಾಪಾರದ ಕೇಂದ್ರವಾಗಿ ಕಾರ್ಯನಿರ್ವಹಿಸುತ್ತಿದ್ದವು. ಇವುಗಳ ಬಗೆಗೆ ಕೂಡ ಮತ್ತು ಅಕ್ಕಿ ವ್ಯಾಪಾರದ ಬಗೆಗೆ ಕೂಡ ವಿಶೇಷವಾದ ಪ್ರಸ್ತಾಪವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ತುಳುನಾಡಿನ ಇತಿಹಾಸ ಮತ್ತು ವ್ಯಾಪಾರದ ಚಟುವಟಿಕೆಗಳು ಅತಿಪ್ರಾಚೀನ ಕಾಲಘಟ್ಟದಿಂದ ಪ್ರಾರಂಭವಾದರೂ ಅವುಗಳು ರಾಜಕೀಯ ಮಹತ್ವವನ್ನು ಪಡೆದು ಕೊಂಡಿದ್ದುದು ಮಧ್ಯಕಾಲೀನ ಯುಗದ ನಂತರವೆಂದರೆ ತಪ್ಪಾಲಿಕ್ಕಿಲ್ಲ. ಪ್ರಾರಂಭದ ದಿನಗಳಲ್ಲಿ ತುಳುನಾಡಿನ ಬಂದರುಗಳು ವಿದೇಶಗಳಿಗೆ ಸಂಭಾರ ಪದಾರ್ಥಗಳು, ಔಷಧೀಯ ಸಸ್ಯಗಳು, ಉತ್ತಮ ದರ್ಜೆಯ ಅಕ್ಕಿ, ಹತ್ತಿಬಟ್ಟೆ, ರೇಷ್ಮೆಬಟ್ಟೆ, ಶ್ರೀಗಂಧದ ಮರ ಮುಂತಾದವುಗಳನ್ನು ಯಥೇಚ್ಛವಾಗಿ ರಫ್ತು ಮಾಡುತ್ತಿದ್ದು ಕೇವಲ ಕೆಲವೇ ಕೆಲವು ವಸ್ತುಗಳಾದ ತಾಮ್ರ, ಸೀಸ, ಪಾದರಸ, ಮುಂತಾದ ವಸ್ತುಗಳನ್ನು ಮಾತ್ರ ವಿದೇಶಗಳಿಂದ ಆಮದು ಮಾಡಿಕೊಳ್ಳುತ್ತಿದ್ದವು. ಅರಬ್ಬರ ಆಗಮನದೊಂದಿಗೆ ಭಾರತದಲ್ಲಿ ಉತ್ತಮ ಜಾತಿಯ ಕುದುರೆಗಳಿಗೆ ಬೇಡಿಕೆ ದ್ವಿಗುಣವಾಯಿತು. ಚಾಲುಕ್ಯ ಮತ್ತು ಪಲ್ಲವರ ಹೋರಾಟಗಳು ಆನಂತರ ವಿಜಯನಗರ ಬಹಮನೀಯ ಹೋರಾಟಗಳು ಈ ಕುದುರೆಗಳ ಬೇಡಿಕೆಗಳನ್ನು ದ್ವಿಗುಣಗೊಳಿಸಿದವು. ಇದಕ್ಕಾಗಿಯೇ ಹೊಯ್ಸಳರು ಕುದುರೆಗಳನ್ನು ಆಮದು ಮಾಡಿಕೊಳ್ಳುವ ಸಲುವಾಗಿಯೇ

ಮಲಬಾರ್ ತೀರವನ್ನು ಸಂಪರ್ಕಿಸುವ ದಕ್ಷಿಣ ಕೊಂಕಣವನ್ನು ಸಂಪರ್ಕಿಸುವ ಮಾರ್ಗಗಳ ಮೇಲೆ ಹಿಡಿತ ಸಾಧಿಸಲು ಕೊಂಗಾಳ್ವರು, ಚೆಂಗಾಳ್ವರನ್ನು ಸೋಲಿಸಿ ಆ ಮೂಲಕ ದಕ್ಷಿಣದ ಕೊಂಕಣ ಮತ್ತು ಮಲಬಾರಿನ ಪ್ರದೇಶಗಳನ್ನು ಸಂಪರ್ಕಿಸುವ ಮಾರ್ಗಗಳ ಮೇಲೆ ಪ್ರಭುತ್ವ ಸಾಧಿಸಿ ಕುದುರೆಗಳನ್ನು ಈ ಮಾರ್ಗದ ಮೂಲಕ ಆಮದು ಮಾಡಿಕೊಳ್ಳುತ್ತಿದ್ದುದು ಖಚಿತವಾಗುತ್ತದೆ. ಇವು ದಕ್ಷಿಣ ಕರ್ನಾಟಕದಲ್ಲಿ ವ್ಯವಸ್ಥಿತವಾಗಿ ಆಯಕಟ್ಟಿನ ಪ್ರದೇಶಗಳಲ್ಲಿ ನಗರೀಕರಣಕ್ಕೆ ಕೂಡ ಅನುವಾಯಿತು. ಇದೇ ಪರಿಸ್ಥಿತಿಯು ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿಯೂ ತುಳುನಾಡಿನಲ್ಲಿ ಮತ್ತು ದಕ್ಷಿಣ ಕರ್ನಾಟಕದಲ್ಲಿ ಮುಂದುವರಿದುದನ್ನು ಗಮನಿಸಬಹುದಾಗಿದೆ.

** ** **

# ಗ್ರಂಥಸೂಚಿ

# BIBLIOGRAPHY

## 1 . Primary sources

### A. Inscriptions

1. Annual Report of Archaeology Government of Madras 1889-1912.
2. Annual Report of Mysore Archaeologial Department
3. Annual Report of the Archaeologial Survey of India.
4. Epigrapahia India Archaeologial Survey of India
5. Epigraphia Carnatica (ed. Rice, New ed. By Gopal B.R)
6. Karnataka Inscriptions (Dharwad) Kannada Research Institute, Dharwad.
7. South Indian Inscriptions

### B. Inscriptions collected by individuals.

1. Chidananda Murthy: 1975, *Viragallu mathu Mastigallugalu*, I.B.H. Bangalore.
2. Desai, P.B: 1971, *Karnataka Nadina Sasanagalu*, Dharwar.
3. Gopal B.R and S.H.Ritti: 1966, *Summaries of Inscriptions 1943-44, 1949-50*, Dharwad.
4. Ramesh, K.V & Sharma M.J: 1978, *Tulunadina Sasanagala Samputa*, Udupi.
5. Ramesh, K.V: *Indian Epigraphy*, Delhi.
6. Ramesh, K.V: 1971, *Karnataka Sasana Sameekshe*, Bangalore.

7. Shetty, Vasantha B.: 1986, *Selected Indian Inscriptions*, Brahmavar, I.C.

**2. Records**

A. Indigenous

- Shastry, A.K.: 1982, *Selections from the Kadita of the Sringeri Matha* Unpublished, submitted to ICHR, New Delhi.
- Shastry, A.K.: 1988, *Catalogue Of Kannada Records In The Archives Of The Sringeri Matha*, Bangalore.

B. Unpublished Foreign Sources

*Bombay Factory Records*, unpublished preserved in the Maharashtra state Archives, Bombay.

**3. Travelogues**

- Barbosa, Duarte: 1918, *The Book of Duarte Barbosa, An Account of the countries bordering on the Indian ocean and their inhabitants etc*. Completed about the year 1518. Ed. And annotated by Dames Hakluyt, London.
- Buchanan, Francis: 1870, *A Journey from Madras through the countries of Mysore, Canara and Malabar*, In Three Volumes.
- Della Valle, Pietro: 1892, *The Travels of Pietro Della Valle in India* from the old English Translation of 1664 by (Havers) in two volumes ed.Edward Grey London.
- Gowda, Nage (1966-1988), *Pravasi Kanda India*, vols., 8, University of Mysore, Mysore.
- Hamilton, Alexander: 1930, *A New Account of East Indies*, ed. Foster, Two volumes, London. Peter Mundy: *The travels of the Peter Mundy in Europe and Asia* Vol.III Pt. I ed. Col. Sir Richard Carnac Temple Hakluyt, London,1919.

Pyrard: *The Voyage of Francois Pyrard* of, tr. & ed. Gray) two volumes, Hakluyt 1887-90

- Tome Pires: 1944, *The Suma Oriental of (An account of the East Indies etc.1512*, tr. By Armando cortesao) Hakluyat society, London.

**4. Documents (Letters)**

1. ಗೋವಾ ಪತ್ರಾಗಾರದಲ್ಲಿರುವ ದಾಖಲೆಗಳು ಕಡತಸಂಖ್ಯೆ 18, ಸಂ–5, ಲಿಸ್ಬನ್ 1884
2. ಗೋವಾ ಪತ್ರಾಗಾರದಲ್ಲಿರುವ ದಾಖಲೆಗಳು ಕಡತಸಂಖ್ಯೆ 18, ಸಂ–5, ಲಿಸ್ಬನ್ 1884
3. ಗೋವಾ ಪತ್ರಾಗಾರದಲ್ಲಿರುವ ದಾಖಲೆಗಳು ಕಡತಸಂಖ್ಯೆ 18, ಸಂ–5, ಲಿಸ್ಬನ್ 1884
4. ಗೋವಾ ಪತ್ರಾಗಾರದಲ್ಲಿರುವ ದಾಖಲೆಗಳು ಕಡತಸಂಖ್ಯೆ 18, ಸಂ–5, ಲಿಸ್ಬನ್ 1884
5. ಗೋವಾ ಪತ್ರಾಗಾರದಲ್ಲಿರುವ ದಾಖಲೆಗಳು ಕಡತಸಂಖ್ಯೆ 18, ಸಂ–5, ಲಿಸ್ಬನ್ 1652
6. ಗೋವಾ ಪತ್ರಾಗಾರದಲ್ಲಿರುವ ದಾಖಲೆಗಳು ಕಡತಸಂಖ್ಯೆ 18, ಸಂ–5, ಲಿಸ್ಬನ್ 1653

**ಆನುಷಂಗಿಕ ಆಕರಗಳು**

**Secondary Source**

**5. English Works**

1. Abhishanker, K (Ed.), 1973, *Karnataka State, South Kanara District Gazetteer*, Bangalore.
2. Appadorai, A., 1936, *Economic conditions in Southern India A.D. 1000-1500*, two Volumes, Madras.
3. Bhat, Shyam N., 1998, *South Kanara*, New Delhi.
4. Bhat, P. Gururaj (Edited by A. Sundara), 2010, *History and Culture of South India* (Discoveries in coastal Karnataka) volume I, Dr. Paduru Gururaja Bhat Memorial trust Udupi.
5. Bhatt, P. Gururaja., 1969, *Antiquities of South Kanara*. Udupi.

6. Bhatt, P. Gururaja., 2010, *History and Culture of South India- Discoveries in Coastal Karnataka* volume I (A. Sundara Edited), Dr. Paduru Gururaja Bhat Memorial Trust, Udupi.

7. Bhatt, P. Gururaja., 1975, *Studies in Tuluva History and Culture*. Kallianpur.

8. Boxer, C.R., 1969, *The Portuguese Sea Borne Empire*. London.

9. Champakalakshmi R., 1996, *Trade, Ideology and Urbanization* (South India 300 BC to AD 1300), Madras.

10. Chitnis, K.N., 1974, *Keladi Polity*. Dharwad.

11. Gopal M.H., 1971, *Tipu Sultan's Mysore an Economic Study*. Bombay.

12. Gururajachar S., 1974, Some Aspects of *Economic and Social Life in Karnataka, A.D 1000-1300*, Mysore.

13. Kamath, S.U., 1983, *Karnataka State Gazetteer*. Part I &II. Government of Karnataka. Bangalore.

14. Karshima Noboru., 1984, *South Indian History and Society A.D. 800-1800*. Oxford, Delhi.

15. Kuppaswamy., 1975, *Economic Conditions in Karnataka A.D. 973-1336*. Karnataka University, Dharwad.

16. Mahalingam, T.V., 1075, *Administration and Social life under Vijayanagara II*. Masras.

17. Mathew, K.S., 1976, *The Portuguese trade with India in the Sixteenth century*. New Dehi.

18. Moraes, G.M., 1927, *Mangalore- A Historical Sketches*. Mangalore.

19. Nainar, S.M.H., 1942, *Arab Geographers Knowledge of Southern India*. Madras.

20. Narasimhamurthy, A.V., 1997, *Coins and Currency System in Karnataka*, Directorate of Archaeology & Museums in Karnataka. Mysore.

21. Narasimhamurthy, A.V., 1975, *The Coins of Karnataka*. Geeta. Mysore.

22. Nightingale, Pramila, 1970, *Trade and Empire in Western India 1784-1806*, Cambridge University Press,

23. Pearson, M.N., 1984, *Coastal Western India, Studies from the Portuguese Records*. Concept publishing company New Delhi.

24. *Perspectives on Dakshina Kannada and Kodagu*, Mangalore University Decennial volume, Mangalagangotri, 1991

25. Raju, A. Sarada., 1947, *Economic condition of the Madras Presidency 1800-1850*. University of Madras.

26. Ramesh, K.V., 1970, *A History of South Canara*, Karnataka University, Dharwad.

27. Rothermund, Dietman., 1978, *Government Landlord and Peasants in India. Agrarian relations under British rule 1865-1936.* GMDH, Wilshaden.

28. Saki., Making History: 1998, Karnatakas's people and Their Past, volume I, Stone Age to Mercantilism, Vimukthi Prakashana, Bangalore.

29. Saletore, B.A., 1936, *Ancient Karnataka I volume History of Tuluvas.* Oriental Book Agency Poona.

30. Saletore, B.A., 1956, *Karnatakas Trans-Oceanic Contacts.* Dharwar.

31. Saletore, B.A., 1934, *Social and political life in the Vijayanagara Empire*. Volume I & II. B.G. Paul, Madras.

32. Saletore, R.N., 1973, *Early Indian Economic History*. Bombay.

33. Sastri, Nilakanta K.A., 1966, *A History of South India from Prehistoric Times to the fall of Vijayanagar*. Third Edition. Oxford Madras.

34. Sewell, 1962, *A Forgotten Empire Vijayanagara: A contribution to the History of India*. Publication Division, New Delhi.

35. Shaastri, A.K., 1982, *A History Sringeri*. Darwad.

36. Shastry, B.S., 1985, *Portuguese Relation with Hyder Ali of Mysore*. Bastora, Goa.

37. Shastry, B.S., 1981, *Studies in Indo-Portuguese History: A collection of Articles An Indo-Portuguese History*, IBH, Bangalore

38. Shivanna, K.S., 1983, *The Agrarian System of Karnataka.* Prasaranga, Mysore.

39. Sinha, N.K., 1969, *Haider Ali.* Calcutta, Revised.

40. Stein, Burton., 1980, *Peasant State and Society in Medieval South India*. Oxford, New Delhi.

41. Stuart, H.A (Ed.), 1894, *Madras District Manuals*, South Canara, Vol. II, Government Press, Madras.

42. Sturrock, John (Ed.), 1894, *Madras District Manuals, South Canara,* Vol. I, Government Press, Madras.

43. Subrahmanyam, Sanjay, 2004, *The Political Economy of Commerce Southern India 1500-1650*, New Delhi.

44. Surendra Rao B., 2010, *Bunts in History and Culture*, Rastrakavi Govinda Pai Research Centre, Udupi.

45. Swamy, L.N., 2000, *Maritime Contacts of Ancient India*, Harman Publishing House, New Delhi.

46. Vasantha Madhava, K.G., 1985, *Religions in Coastal Karnataka*, A History 1500-1763, New Delhi.

47. Vasantha Madhava, K.G., 2018, *Trends In Karnataka Historical Research (with reference to Coastal Karnataka)*, Revised Enlarged Edition, Haleangadi.

48. Vasantha Madhava, K.G., 1991, *Western Karnataka- Its Agrarian Relations 1500-1800 AD*, Navrang, New Delhi.

49. Vasudevan, C., 1998, *Koragas –The Fogotten Lot: The primitive Tribe of Tulu Nadu,* The Ethos, Trichur. Kerala.

50. Veluthat, Keshavan, 1978, *Brahman Settlements in Kerala: Historical Studies*, Calcutta.

51. Venn, T.W., 1945, *Mangalore.* Cochin.

52. Way White, R.S., 1979, *The Rise of Portuguese Power in India- volume I 1497-1550*. Janaki Prakashan, Reprint.

## 6. ಕನ್ನಡ ಕೃತಿಗಳು

1. ಉದಯವರ್ಮರಾಜ., 1998, **ತುಳುನಾಡಿನ ಗತವೈಭವ,** ಕನ್ನಡ ಸಾಹಿತ್ಯ ಪರಿಷತ್ತು, ಕೇರಳ ವಿಶೇಷ ಘಟಕ, ಕಾಸರಗೋಡು.

2. ಉಪಾಧ್ಯಾಯ, ಯು. ಪಿ. (ಪ್ರ.ಸಂ), 1985–1997, **ತುಳು ನಿಘಂಟು,** ಆರು ಸಂಪುಟಗಳು, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ. ಉಡುಪಿ.

3. ಉಪಾಧ್ಯಾಯ, ಸುಶೀಲಾ ಪಿ.: 1998, **ದಕ್ಷಿಣ ಭಾರತ ಜಾನಪದ,** ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ. ಉಡುಪಿ.

4. ಐಗಳ್, ಗಣಪತಿ ರಾವ್, ಎಂ., 2004, **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ** (ಮೊದಲ ಮುದ್ರಣ 1923), ಉಡುಪಿ.

5. ಕಿಲ್ಲೆ, ಎನ್.ಎಸ್. ಮತ್ತು ಹೆಗ್ಡೆ, ಎನ್. ಎ. ಶೀನಪ್ಪ: 1954, **ಪ್ರಾಚೀನ ತುಳುನಾಡು**. ಮಂಗಳೂರು..

6. ಕುಡುವ, ಕೇಶವ ಕೃಷ್ಣ: 1948, **ದಕ್ಷಿಣ ಕನ್ನಡ ಇತಿಹಾಸ**. (ತುಳುವ ಚರಿತ್ರೆ). ಮಂಗಳೂರು,.

7. ಗಂಗಾನಾಯಕ್, ಕೆ. ಎನ್.: 2011, **ಕೆಳದಿ ಅರಸರ ಶಾಸನ ಸಂಪುಟ**. ಮೈಸೂರು.

8. ಗೋಪಾಲ್, ಆರ್.: 2007, **ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ** ಮೈಸೂರು..

9. ಗೌಡ, ಕುಶಾಲಪ್ಪ, ಗೌಡ, ಚಿನ್ನಪ್ಪ: 1983, **ದಕ್ಷಿಣ ಕನ್ನಡ ಜಿಲ್ಲೆಯ ಕೈಫಿಯತ್ತುಗಳು**. ಉಜಿರೆ.

10. ಗೌಡ, ಕೆ. ಚಿನ್ನಪ್ಪ, 1990, **ಭೂತಾರಾಧನೆ–ಜಾನಪದೀಯ ಅಧ್ಯಯನ,** ಮದಿಪು ಪ್ರಕಾಶನ, ಮಂಗಳಗಂಗೋತ್ರಿ, ಮಂಗಳೂರು.

11. ಗೌಡ, ಜಯಪ್ಪ ಡಿ.ಎಸ್.: 1983, **ಕರ್ನಾಟಕದ ಕಡಲಾಚೆಯ ಸಂಪರ್ಕಗಳು (ಕ್ರಿ.ಶ.1350 ರವರೆಗೆ)**. ಮೈಸೂರು..

12. ಚಂದ್ರಶೇಖರ್, ಎಸ್, ಬಿ ಸುರೇಂದ್ರ ರಾವ್ (ಸಂ), 2016, **ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು**. 12 ಸಂಪುಟಗಳು., ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು.

13. ಚಂದ್ರಶೇಖರ್, ಎಸ್. (ಸಂ), 1997, **ಕರ್ನಾಟಕ ಚರಿತ್ರೆ** *(ಕ್ರಿ.ಶ. 1900–1956),* ಸಂಪುಟ 7, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

14. ಚಿದಾನಂದಮೂರ್ತಿ, ಎಂ., 2017, 1969, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ** *(ಕ್ರಿ.ಶ.450–1150)*: ಸ್ವಪ್ನ ಬುಕ್ ಹೌಸ್. ಬೆಂಗಳೂರು.

15. ದೀಕ್ಷಿತ್, ಜಿ.ಎಸ್: **ಕೆಳದಿ ನಾಯಕರು,** ಧಾರವಾಡ.

16. ನಂಬಿಯಾರ್, ಕೆ. ಎಂ. ರಾಘವ: 1997, **ಮದ್ದಳೆಯ ಮಾಯಾಲೋಕ** (ಹಿರಿಯಡಕ ಗೋಪಾಲ ರಾಯರ ನೆನಪುಗಳು), ರೀಜಿನಲ್ ರಿಸೋರ್ಸಸ್ ಸೆಂಟರ್ ಫಾರ್ ಫೋಕ್ ಪರ್ಫಾರ್ಮಿಂಗ್ ಆರ್ಟ್ಸ್, ಎಂ.ಜಿ.ಎಂ. ಕಾಲೇಜ್ ಕ್ಯಾಂಪಸ್.

17. ನರಸಿಂಹಮೂರ್ತಿ ಪಿ.ಎನ್: 2007, ***'ಕುಂದನಾಡಿನ ಶಾಸನಗಳು',*** ಸ್ವಾಗತ ಸಮಿತಿ ಅಖಿಲ ಭಾರತ 74ನೆಯ ಕನ್ನಡ ಸಾಹಿತ್ಯ ಸಮ್ಮೇಳನ-ಉಡುಪಿ.

18. ಪೂಣಚ್ಚ, ವಿಜಯ್ ತಂಬಂಡ, ವಿರೂಪಾಕ್ಷಿ ಪೂಜಾರಹಳ್ಳಿ (ಸಂ), 2010, **ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ,** ಪ್ರಸಾರಂಗ, ಹಂಪಿ,

19. ಪೂಣಚ್ಚ, ವಿಜಯ್ ತಂಬಂಡ: 2004, **ಪಳಮೆ-ಮೌಖಿಕ ಆಕರಗಳು ಕಟ್ಟಿಕೊಡುವ ಕನ್ನಡ-ಕೊಡಗು-ತುಳುನಾಡಿನ ಅಧ್ಯಯನ,** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

20. ಪ್ರಭು, ಎಂ. ಮುಕುಂದ (ಪ್ರ.ಸಂ): 2000, **ಪೊಲಿ : ಕೆನರಾ 200,** ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

21. ಬಿಳಿಮಲೆ, ಪುರುಷೋತ್ತಮ: 1990, **ಕರಾವಳಿ ಜಾನಪದ,** ಮಂಗಳಗಂಗೋತ್ರಿ, ಮಂಗಳೂರು

22. ಭಟ್, ಕೃಷ್ಣ ಅ. (ಸಂ): 1977, **ಸುದರ್ಶನ.** ವಿಜಯ ಕಾಲೆಜ್ ಮುಲ್ಕಿ.

23. ಭಟ್, ಗಣಪಯ್ಯ ಪಿ., 1997, **ತೌಳವ,** ಸಿಂಧೂರ ಪ್ರಕಾಶನ, ಮೂಡಬಿದರೆ.

24. ಭಟ್, ಗುರುರಾಜ: 1963, **ತುಳುನಾಡು.** ಉಡುಪಿ.

25. ಭಟ್, ಗುರುರಾಜ ಪಿ.: 1966, **ತುಳುನಾಡಿನ ಸ್ಥಾನಿಕರು.** ಉಡುಪಿ.

26. ಭಟ್, ಗುರುರಾಜ ಪಿ.: 1997, **ಬಸರೂರು ಒಂದು ಸಮೀಕ್ಷೆ,** ಬಸ್ರೂರು ಒಂದು ಅಧ್ಯಯನ, ಶ್ರೀ ಶಾರದ ಕಾಲೆಜು, ಬಸ್ರೂರು.

27. ಭಟ್, ಗುರುರಾಜ ಪಿ.: 1972, **ದಕ್ಷಿಣ ಕನ್ನಡದ ತುಳುವರು, ತುಳುವ ಸಂಸ್ಕೃತಿ,** ಬೆಂಗಳೂರು.

28. ಭಟ್ಟ, ಪಾದೇಕಲ್ಲು ವಿಷ್ಣು (ಸಂ), 1997, **ತುಳುವರಿವರು,** ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

29. ಮಾಲತಿ ಕೃಷ್ಣಮೂರ್ತಿ, ನರಸಿಂಹಮೂರ್ತಿ ಎಚ್.ವಿ. (ಸಂ), 1994, **ಕುಂದಾಪುರ ತಾಲೂಕು ದರ್ಶನ,** ಕುಂದಾಪುರ.

30. ರಮೇಶ್, ಕೆ. ವಿ.: 1968, *ತುಳುನಾಡಿನ ಇತಿಹಾಸ.* ಎಂ.ಜಿ.ಎಂ. ಕಾಲೆಜ್, ಉಡುಪಿ.

31. ರಮೇಶ್, ಕೆ. ವಿ., ಶರ್ಮಾ ಎಂ.ಜೆ., 1978, **ತುಳುನಾಡಿನ ಶಾಸನಗಳು,** ಸಂಪುಟ ಒಂದು., ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ ಪರವಾಗಿ ಗೀತಾ ಬುಕ್ ಹೌಸ್ ಮೈಸೂರು. ಉಡುಪಿ.

32. ರಾವ್, ಕೃಷ್ಣ, ಎಂ.ವಿ.: 1959, **ಕರ್ನಾಟಕದ ಚರಿತ್ರೆ**, ಬೆಂಗಳೂರು.

33. ರಾವ್, ಕೃಷ್ಣ, ಎಂ. ವಿ. ಮತ್ತು ಭಟ್, ಕೇಶವ: 1970, **ಕರ್ನಾಟಕ ಇತಿಹಾಸ ದರ್ಶನ**. ಬೆಂಗಳೂರು.

34. ರೈ, ಮೋಹನ್‌ಕೃಷ್ಣ ಕೆ., 2007, **ವಸಾಹತುಶಾಹಿ ಮತ್ತು ನಗರೀಕರಣ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

35. ರೈ, ಮೋಹನ್‌ಕೃಷ್ಣ ಕೆ., 2012, **ತುಳುನಾಡು ಕನ್ನಡನುಡಿ** (ತುಳು ಕರ್ನಾಟಕದ ನಾಡು–ನುಡಿ ಚಿಂತನೆ).

36. ರೈ, ಮೋಹನ್‌ಕೃಷ್ಣ ಕೆ., 2010, **ಕೆನರಾ ವಿಭಜನೆ– ಹತ್ತಿ ರಾಜಕೀಯದ ವಿಶ್ಲೇಷಣೆ**, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

37. ರೈ, ವಿವೇಕ್ ಬಿ. ಎ.: 1985, **ತುಳು ಜಾನಪದ ಸಾಹಿತ್ಯ**. ಬೆಂಗಳೂರು.

38. ರೈ, ವಿವೇಕ್ ಬಿ. ಎ. (ಸಂ); 2005, **ಪ್ರವಾಸಿ ಕಂಡ ವಿಜಯನಗರ**. ಹಂಪಿ.

39. ರೈ, ವಿವೇಕ್ ಬಿ. ಎ. (ಪ್ರ.ಸಂ), 2007, **ತುಳು ಸಾಹಿತ್ಯ ಚರಿತ್ರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

40. ರೈ, ವಿವೇಕ್ ಬಿ. ಎ.: 2013, **ಅರಿವು ಸಾಮಾನ್ಯವೆ**. ಬೆಂಗಳೂರು..

41. ರೈ, ವಿವೇಕ್ ಬಿ. ಎ. (ಸಂ)., 2016, **ಮಂಗಳೂರು ದರ್ಶನ** 3 ಸಂಪುಟಗಳು. ಮಂಗಳೂರು.

42. ರೈ, ಸುಬ್ಬಣ್ಣ ಎ.: 1994, **ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು**, ಮಾಣಿ ಜೂನಿಯರ್ ಛೇಂಬರ್, ಮಾಣಿ.

43. ವಸಂತಮಾಧವ, ಕೆ.ಜಿ.; **ಮೂಲ್ಕಿಯ ಇತಿಹಾಸ**. ವಿಜಯ ಕಾಲೇಜ್ ಟ್ರಸ್ಟ್, ಮೂಲ್ಕಿ, 1988.

44. ವಸಂತಮಾಧವ ಕೆ.ಜಿ. 2007, **ಅಬ್ಬಕ್ಕ ದೇವಿಯರು**, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು.

45. ವಾದಿರಾಜ ಭಟ್.ಕೆ.: 1974, **ಪಾಡ್ದನಗಳು**. ಕಿನ್ನಿಗೋಳಿ..

46. ಶಾಸ್ತ್ರೀ, ಬಿ.ಎಸ್., 1972, **ಕೆಳದಿಯ ಅರಸರು ಹಾಗೂ ಪೋರ್ಚುಗೀಸರು**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

47. ಶಾಸ್ತ್ರೀ, ಎ.ಕೆ.: 1983, **ಶೃಂಗೇರಿ ಧರ್ಮ ಸಂಸ್ಥಾನ**. ಶೃಂಗೇರಿ.

48. ಶೆಟ್ಟಿ, ಎಸ್.ಡಿ., 2002, **ಜೈನಧರ್ಮ– ಒಂದು ಸಾಂಸ್ಕೃತಿಕ ಅಧ್ಯಯನ,** ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

49. ಶೈಲಾ ಟಿ. ವರ್ಮ, 2002, **ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಜ್ಞಾನೋದಯ ಪ್ರಕಾಶನ, ಬೆಂಗಳೂರು.

50. ಸೋಮೇಶ್ವರ, ಅಮೃತ: 1997, **ತುಳು ಪಾಡ್ದನ ಸಂಪುಟ,** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

51. ಸೋಸಲೆ, ಎನ್. ಚಿನ್ನಸ್ವಾಮಿ (ಸಂ), 2014, **ಕರಾವಳಿ ಕನಾಟಕದ ಜೈನ ಅರಸು ಮನೆತನಗಳು ಸಾಂಸ್ಕೃತಿಕ ಅಧ್ಯಯನ**. ಹಂಪಿ.

52. ಹೆಗಡೆ, ರಾಜಾರಾಮ, ಅಶೋಕ ಶೆಟ್ಟರ್ (ಸಂ), 2001, **ಮಲೆಕರ್ನಾಟಕದ ಅರಸು ಮನೆತನಗಳು,** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

53. ಹೆಗ್ಡೆ, ಶೀನಪ್ಪ, 1919, **ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯರಾಯನ ಅಳಿಯಕಟ್ಟು,** ಮಂಗಳೂರು (ದ್ವಿತೀಯ ಮುದ್ರಣ, 1981, ಉಡುಪಿ).

54. ಹೆಗ್ಡೆ, ಸಚ್ಚಿದಾನಂದ ಬಿ., 2010, **ತುಳುಭಾಷೆ–ತುಳುನಾಡು; ಪುರಾಣ ಜಾನಪದಗಳಲ್ಲಿ ತುಳುನಾಡವರು,** ನ್ಯೂ ವೇವ್ ಬುಕ್ಸ್, ಬೆಂಗಳೂರು.


## 7. ಪಿಎಚ್.ಡಿ. ಮತ್ತು ಎಂ.ಫಿಲ್. ಮಹಾಪ್ರಬಂಧಗಳು


1. Kamath, S.U., 1965, *Tuluvas in Vijayanagara Times*. Bombay. (Unpublished)

2. Karunakar H.R., 1985, *Socio-Economic Conditions in South Kanara, 1866-1956*, Mysore. (Unpublished)

3. Malathi K. Moorthy., 1991, *Trade and Commerce in Colonial South Kanara (1799-1862),* Mangalagangotri. (Unpublished)

4. Mascarennas., 1931, *Hyder and Tipu Sultan in Kanara*. Bombay (Unpublished)

5. Menezes W.J., 1953, *Canara and Portuguese*. Bombay. (Unpublished)

6. Mohankrishna Rai K., 2003, *Urbanization of Mangalore-A Colonial Experience (1799-1947),* Mangalagangotri. (Unpublished)
7. Rao, E. Nagendra, 1995, *The Historical Tradition of South Kanara and The Brahmanical Groups: A Study of Gramapaddhati and Sahyadri Khanda*, Mangalore University. (Mphil desertation, Unpublished)
8. Rao, E. Nagendra., 2001, *Craft Production and Trade in South Kanara 1000-1763*, Goa. (Unpublished)
9. Rashmi H.M., 2009, *Dr. P. Gururaja Bhattara Samshodhanegala ondu adhyayana –Pragitihasa, Shasanaglu, Nanyagalu Olagondante*, Hampi university. (M. Phil. Dissertation, Unpublished)
10. Shastry, B.S., 1969, The Portuguese in Kanara 1498-1763. Bombay, (Unpublished)
11. Vasanthamadhava K.G., 1976, *Political History of Kanara 1565-1763*. Mainly based on inscriptions. Karnataka University, Dharwad. (Unpublished)
12. Shetty, Vasantha B., 1984, *Barakuru-A Metropolitan City of Antiquity-Its History and Culture*, Mysore. (Unpublished)

## 8. ಜರ್ನಲ್ಸ್

1. *Indian Historical Review* –ICHR, New Delhi
2. *Indian History Congress Proceedings*, New Delhi
3. *Indica-Organ of the Heras Institute of Indian History and Culture*, Bombay
4. *Itihasa Darshana – Journal of Kannada Ithihasa Academy,* Bangalore
5. *Journal of Bombay – Historical Society*, Bombay

6. *Journal of the Bombay Branch of Royal Asiatic Society*. Old and New Bombay
7. *Journal of the Institute of Indian Studies*, Udupi
8. *Karnataka Bharati*, Dharwad
9. *Karnataka Sahitya Parishad Patrika*, Bangalore
10. *Manavika Karnataka*, Mysore
11. *Purabhilekha Puratattva*, Panaji, Goa
12. *Quarterly Journal of Mythic Society*, Bangalore
13. *South Indian History Congress*, Madurai
14. *Studies in Indian Epigraph Epigraphical Society*, Mysore. Now it is known as *Journal of the Epigraphical Society of India*, Mysore

## 9. ಲೇಖನಗಳು

1. ಅಡಿಗ, ಮಾಲಿನಿ, 2016, **'ಕರ್ನಾಟಕದ ಆರ್ಥಿಕತೆ ಮತ್ತು ಸಾಮಾಜಿಕ ವ್ಯವಸ್ಥೆ'., 'ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು'** (ಪುಟ.42–77) ಸಂಪುಟ 4., ಎಸ್. ಚಂದ್ರಶೇಖರ್, ಬಿ. ಸುರೇಂದ್ರ ರಾವ್ (ಸಂಪಾದಕರು)., (ಕುವೆಂಪು ಭಾಷಾ ಭಾರತಿ ಪ್ರಾಧಿಕಾರ. ಬೆಂಗಳೂರು).
2. ಗೋವಿಂದರಾಜು ಸಿ. ಆರ್., 2016, **"ಕರ್ನಾಟಕದ ಪರಿಕಲ್ಪನೆ: ಆರ್ಥಿಕ ಮತ್ತು ಸಾಮಾಜಿಕ ವಿಚಾರಗಳ ಹಿನ್ನಲೆಯಲ್ಲಿ"**. (92–104), **'ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು'** ಸಂಪುಟ 11., ಎಸ್. ಚಂದ್ರಶೇಖರ್, ಬಿ. ಸುರೇಂದ್ರ ರಾವ್ (ಸಂಪಾದಕರು)., (ಕುವೆಂಪು ಭಾಷಭಾರತಿ ಪ್ರಾಧಿಕಾರ. ಬೆಂಗಳೂರು).
3. ಗೌಡ, ಜಯಪ್ಪ, **"ಸಾಗರೋತ್ತರ ಸಂಪರ್ಕಗಳು"., 'ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು'** (ಪುಟ.178–214), ಸಂಪುಟ 1., ಎಸ್. ಚಂದ್ರಶೇಖರ್, ಬಿ. ಸುರೇಂದ್ರ ರಾವ್ (ಸಂಪಾದಕರು): 2016, (ಕುವೆಂಪು ಭಾಷಭಾರತಿ ಪ್ರಾಧಿಕಾರ. ಬೆಂಗಳೂರು).
4. ಜೋಯಿಸ್, ಕೆಳದಿ ವೆಂಕಟೇಶ್, 2012, **"ಕೆಳದಿ ಅರಸರು ಮತ್ತು ಪೋರ್ಚುಗೀಸರು"**, (ಪುಟ.31–38), **'ಸೆಮಿನಾರ್ ಪ್ರೊಸಿಡಿಂಗ್ಸ್'**, ಪ್ರಭಾಕರ್ ರಾವ್

ಕೆ. (ಪ್ರ.ಸಂ)., ಇತಿಹಾಸ ವಿಭಾಗ, ಶ್ರೀಮತಿ ಇಂದಿರಾಗಾಂಧಿ ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ಸಾಗರ,

5. ನರಸಿಂಹಮೂರ್ತಿ ಪಿ.ಎನ್., 2007, **"ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ-(ಒಂದು ಸಂಕ್ಷಿಪ್ತ ಪರಿಚಯ)"**, (ಪುಟ.55–59), **'ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ'**., ಗೋಪಾಲ್ ಆರ್(ಸಂ)., ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ. ಮೈಸೂರು.
6. ಪಟೇಲ್, ಟಿ. ದಯಾನಂದ, 2007, **"ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಹಾಗೂ ದಕ್ಷಿಣ ಕನ್ನಡ ಜಿಲ್ಲೆ (ಕ್ರಿ.ಶ. 1760–1799)"**, (ಪುಟ.102–108), *'ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ'*., ಗೋಪಾಲ್ ಆರ್(ಸಂ)., ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ. ಮೈಸೂರು.
7. ಪುರುಷೋತ್ತಮ ಎಸ್., 2016, **"ಹೈದರ್-ಟೀಪೂ ಕಾಲದ ಆರ್ಥಿಕ ನೀತಿ ಮತ್ತು ಸಾಧನೆಗಳು ಹಾಗೂ ಸಾಮಾಜಿಕ ನೀತಿಯ ವಿಶ್ಲೇಷಣೆ"**. (ಪುಟ.57–96) **'ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು'** ಸಂಪುಟ 8., ಎಸ್. ಚಂದ್ರಶೇಖರ್, ಬಿ. ಸುರೇಂದ್ರ ರಾವ್ (ಸಂಪಾದಕರು), (ಕುವೆಂಪು ಭಾಷಭಾರತಿ ಪ್ರಾಧಿಕಾರ. ಬೆಂಗಳೂರು).
8. ಭಟ್, ಗುರುರಾಜ ಪಿ., 1997, **'ಬಸರೂರು- ಒಂದು ಸಮೀಕ್ಷೆ'** (ಪುಟ.3–8), *"ಬಸ್ರೂರು ಒಂದು ಅಧ್ಯಯನ"*., ಶ್ರೀ ಶಾರದಾ ಕಾಲೇಜು ಟ್ರಸ್ಟ್, ಬಸ್ರೂರು, ದ.ಕ.
9. ಮಾಲತಿ ಕೃಷ್ಣಮೂರ್ತಿ, 2007, **"ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 16ನೇ ಶತಮಾನದ ನಂತರದ ವಿದೇಶೀ ವ್ಯಾಪಾರ"**. (ಪುಟ.95–101), **'ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ'**, ಗೋಪಾಲ್ ಆರ್(ಸಂ)., ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ. ಮೈಸೂರು.
10. ಮಾಲತಿ ಕೆ. ಮೂರ್ತಿ., 2005, **ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯ ಆರ್ಥಿಕ ಇತಿಹಾಸದಲ್ಲಿ "ಐರೋಪ್ಯ ವ್ಯಾಪಾರ ಪರ್ವ"** ಪುಟ.58., **'ಚರಿತ್ರೆ ಅಧ್ಯಯನ'**, ಸಂಪುಟ 1 ಸಂಚಿಕೆ 1., (ಜುಲೈ-ಡಿಸೆಂಬರ್ 2005), ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
11. ವಸಂತಮಾಧವ ಕೆ.ಜಿ., 1997, **'ಇತಿಹಾಸ** *(ಕ್ರಿ.ಶ. 1554–1763ರ ವರೆಗೆ)'*, (ಪುಟ.36–49), **"ಬಸ್ರೂರು ಒಂದು ಅಧ್ಯಯನ"**., ಶ್ರೀ ಶಾರದಾ ಕಾಲೇಜು ಟ್ರಸ್ಟ್, ಬಸ್ರೂರು, ದ.ಕ.,.
12. ವಸಂತಮಾಧವ ಕೆ.ಜಿ., 2007, **"ದಕ್ಷಿಣ ಕನ್ನಡ ಜಿಲ್ಲೆಯ ಕರಾವಳಿ-ಕರ್ನಾಟಕದ ಶಾಸನಗಳು (1551–1725)- ಒಂದು ಸಮೀಕ್ಷೆ"**. (ಪುಟ.83–86), **'ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ'**, ಗೋಪಾಲ್ ಆರ್(ಸಂ), ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ. ಮೈಸೂರು.

13. ವಸಂತಮಾಧವ ಕೆ.ಜಿ., 2014, **"ಕರಾವಳಿ ಕರ್ನಾಟಕದ ಶಾಸನ ಅಧ್ಯಯನ"**. (ಪುಟ.79–86) **'ಕರಾವಳಿ ಕರ್ನಾಟಕದ ಜೈನ ಅರಸುಮನೆತನಗಲು ಸಾಂಸ್ಕೃತಿಕ ಅಧ್ಯಯನ'.**, ಚಿನ್ನಸ್ವಾಮಿ ಸೋಸಲೆ ಎನ್.(ಸಂ)., ಕನ್ನಡ ವಿಶ್ವವಿದ್ಯಾಲಯ ಹಂಪಿ.

14. ವಸಂತಮಾಧವ ಕೆ.ಜಿ., 2000, **"ಜಿಲ್ಲೆಯ ಇತಿಹಾಸಕ್ಕೆ ವಿದೇಶಿ ಆಕರಗಳು** *(1800ರವರೆಗೆ)"*, **'ಪೊಲಿ–ಕೆನರಾ 200'**, (ಪುಟ.46–51), ಮುಕುಂದ ಪ್ರಭು(ಪ್ರ.ಸಂ)., ಜಿಲ್ಲಾಧಿಕಾರಿ ದಕ್ಷಿಣ ಕನ್ನಡ ಜಿಲ್ಲೆ. ಮಂಗಳೂರು.

15. ಶೆಟ್ಟಿ, ಬಿ. ಜಗದೀಶ, 2014, **"ಕರಾವಳಿ ಕರ್ನಾಟಕದ ಜೈನಶಾಸನಗಳಲ್ಲಿ ಆರ್ಥಿಕ ವಿವರ"**, (ಪುಟ.150–157), **'ಕರಾವಳಿ ಕರ್ನಾಟಕದ ಜೈನ ಅರಸುಮನೆತನಗಲು ಸಾಂಸ್ಕೃತಿಕ ಅಧ್ಯಯನ'**, ಚಿನ್ನಸ್ವಾಮಿ ಸೋಸಲೆ ಎನ್.(ಸಂ)., ಕನ್ನಡ ವಿಶ್ವವಿದ್ಯಾಲಯ ಹಂಪಿ.,

16. ಶೆಟ್ಟಿ, ಬಿ. ವಸಂತ, 1997, **'ಇತಿಹಾಸ** *(ಕೆಳದಿ ಆಳ್ವಿಕೆಯವರೆಗೆ)'*, (ಪುಟ.21–35), **"ಬಸ್ರೂರು ಒಂದು ಅಧ್ಯಯನ".**, ಶ್ರೀ ಶಾರದಾ ಕಾಲೇಜು ಟ್ರಸ್ಟ್, ಬಸ್ರೂರು, ದ.ಕ.

17. ಸ್ವಾಮಿ, ಲ.ನ., 2007, **"ತುಳುನಾಡಿನ ಸಮುದ್ರ ಮಾರ್ಗ ಸಂಪರ್ಕಗಳು"**. (296–302), **'ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ'**, ಗೋಪಾಲ್ ಆರ್(ಸಂ)., ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ. ಮೈಸೂರು.

18. ಸ್ವಾಮಿ ಲ. ನ., 2017, **"ಪ್ರಾಚೀನ ಕರ್ನಾಟಕದ ಕಡಲಾಚೆಯ ಸಂಪರ್ಕಗಳ ಸಾಹಿತ್ಯ ಸಮೀಕ್ಷೆ"** (ಪುಟ.20–39)., **'ಸೆಮಿನಾರ್ ಪ್ರೊಸಿಡಿಂಗ್ಸ್'**, ಪ್ರಭಾಕರ್ ರಾವ್ ಕೆ.(ಸಂ)., ಇತಿಹಾಸ ವಿಭಾಗ ಶ್ರೀಮತಿ ಇಂದಿರಾಗಾಂಧಿ ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ಸಾಗರ.

19. ಸ್ವಾಮಿ ಲ. ನ., 2012, **"ಕರ್ನಾಟಕದ ಬಂದರುಗಳು ಮತ್ತು ಮಲೆನಾಡಿನ ಸಂಬಂಧ"**, (ಪುಟ.39–43) **'ಸೆಮಿನಾರ್ ಪ್ರೊಸಿಡಿಂಗ್ಸ್'**, ಪ್ರಭಾಕರ್ ರಾವ್ ಕೆ.(ಪ್ರ.ಸಂ)., ಇತಿಹಾಸ ವಿಭಾಗ ಶ್ರೀಮತಿ ಇಂದಿರಾಗಾಂಧಿ ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ಸಾಗರ.

20. ಹನುಮನಾಯಕ, 2005, **"ದಕ್ಷಿಣ ಭಾರತದ ಮಧ್ಯಕಾಲಿನ ರಾಜ್ಯಗಳ ಸ್ವರೂಪ: ಹೊಯ್ಸಳ ರಾಜ್ಯ– ಒಂದು ವಿಶ್ಲೇಷಣೆ"**, (ಪುಟ.102) **'ಚರಿತ್ರೆ ಅಧ್ಯಯನ'**, ಸಂಪುಟ 1 ಸಂಚಿಕೆ 1., (ಜುಲೈ–ಡಿಸೆಂಬರ್ 2005), ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

21. Shastry, B.S., 1979, *'Timmayya and his relation with the Portuguese':*, (pp.34-55) Narasimha Murthy A.V.(chief editor), *"The Journal of The Institute of Indian Studies"*, Volume-I No.2., The Institute of Indian Studies, Kadiyali, Udupi-2 (D.K), January

22. Vasanthmadhava, K.G., 1979, 'A Survey Of Kannada Literary Sources of the Religions in Kanara',(pp 62-68), Narasimhamurthy, A.V. (chief editor), *"The Journal of The Institute of Indian Studies"*, Volume-I No.2., The Institute of Indian Studies, Kadiyali, Udupi-2 (D.K), January.
23. Bhat, P. Gururaja, 1976, *'Udayapura-An Archaeological Note'*, (pp.36-38), Archaeological Studies vol-I, mysore university, mysore.


**10. ಪತ್ರಿಕೆಗಳು**


1. ಐತಾಳ, ಜಿ. ಚಂದ್ರಶೇಖರ: 1975, **ಮಂಗಳೂರಿನ ಮೂಲ–** ಯುಗಪುರುಷ, ದಸರಾ ಅಂಕ.
2. ಭಟ್ಟ, ಪಿ. ಗುರುರಾಜ: 1963, **ತುಳುನಾಡಿನ ಮೂರು ಹೆಸರುಗಳು–** ಎಂ.ಜಿ.ಎಂ., ಕಾಲೆಜು ಮ್ಯಾಗಜಿನ್ ಸಂಪುಟ 8, 1963
3. ಭಟ್ಟ, ಪಿ. ಗುರುರಾಜ: 1968, **'ಕಾಪುವಿನ ಇತಿಹಾಸ** 1–3, ನವಯುಗ, 1–8—1968
4. ಭಟ್, ಪಿ. ಗುರುರಾಜ: 1968, **ತುಳುನಾಡಿನ ನಾಲ್ಕು ಪ್ರಾಚೀನ ಶಾಸನಗಳು,** ಕನ್ನಡ ಪ್ರಭ, ಜನವರಿ 1968
5. ಭಟ್ಟ, ಪಿ. ಗುರುರಾಜ: 1971, **ಹಟ್ಟಿಯಂಗಡಿಯಲ್ಲಿ ಜೈನಧರ್ಮ–** ಭವ್ಯವಾಣಿ, ಮಾರ್ಚ್, 1971.
6. ಭಟ್ಟ, ಪಿ. ಗುರುರಾಜ: 1971, **ಬಾರಕೂರಿನ ಗತವೈಭವ–** ನವಯುಗ ದೀಪಾವಳಿ ಸಂಚಿಕೆ.
7. ಭಟ್ಟ, ಪಿ. ಗುರುರಾಜ: 1971, **ಮರೆಯಲಾಗದ ತುಳುನಾಡ ರಾಜಧಾನಿ: ಬಾರಕೂರು–** ನವಯುಗ, ದೀಪಾವಳಿ ಸಂಚಿಕೆ.
8. ಭಟ್ಟ, ಪಿ. ಗುರುರಾಜ: 1971, **ಆಳುಪರ ಇತಿಹಾಸದ ಮೇಲೆ ಹೊಸಬೆಳಕು,** ಕನ್ನಡ ಪ್ರಭ– 13–6–1971.
9. ಭಟ್ಟ, ಪಿ. ಗುರುರಾಜ: 1972, **ಬೆಳ್ಮಣ್ಣು ದೇವಾಲಯದಲ್ಲಿ ಮಹತ್ವಪೂರ್ಣ ತಾಮ್ರಶಾಸನ– ಚರಿತ್ರೆಯ ಮೇಲೆ ಹೊಸಬೆಳಕು,** ಉದಯವಾಣಿ 6–5–1972
10. ಭಟ್ಟ, ಪಿ. ಗುರುರಾಜ: 1976, **'ಉದಯಪುರದಲ್ಲಿ ಎರಡು ಅಪೂರ್ವ ಶಾಸನಗಳ ಪತ್ತೆ',** ನವಭಾರತ, ಮೇ, 1972. (ಈ ಶಾಸನವನ್ನು ಪ್ರತಿ ಮಾಡಲು ಗುರುರಾಜ ಭಟ್ಟರಿಗೆ ಬಿ. ವಸಂತ ಶೆಟ್ಟಿಯವರು ಸಹಾಯ ಮಾಡಿದ್ದರು. **'ನ್ಯೂ ಲೈಟ್ ಆನ್**

**ಜೈನಿಸಂ ಇನ್ ಸೌತ್ ಕೆನರಾ'**. ಉದಯವಾಣಿ, ಆಗಸ್ಟ್ 26, 1976; 'ರಿಪೋರ್ಟ್ ಇನ್ ಹಿಂದೂ'.)

11. ಜಗದೀಶ ಶೆಟ್ಟಿ. ಬಿ.: 1993, **ಕೃಷಿ ಇತಿಹಾಸದ ಮೇಲೆ ಬೆಳಕು ಚೆಲ್ಲುವ ದಕ್ಷಿಣ ಕನ್ನಡದ ಶಾಸನಗಳು** – ಉದಯವಾಣಿ 7–11–1993
12. ವಸಂತ ಮಾಧವ ಕೆ.ಜಿ.: **ಹದಿನೇಳನೇ ಶತಮಾನದ ಗಂಗೊಳ್ಳಿಯ ಆರ್ಥಿಕ ಮತ್ತು ಧಾರ್ಮಿಕ ಚಟುವಟಿಕೆಗಳ ಆಕರಗಳು** – *ಇತಿಹಾಸ ದರ್ಶನ* ಸಂ. 7, ಪು.114–118
13. ವಸಂತ ಮಾಧವ ಕೆ.ಜಿ., 2017, **"ಹದಿನೈದನೇ ಶತಮಾನದ ಶಾಸನಗಳ ಒಂದು ಅಧ್ಯಯನ"** ಪುಟ. 41., ಯುಗಪುರುಷ, ಕನ್ನಡ ಮಾಸಪತ್ರಿಕೆ ಕಿನ್ನಿಗೋಳಿ. ದ.ಕ., ನವೆಂಬರ್ 2017.
14. ವಸಂತ ಮಾಧವ ಕೆ.ಜಿ., 2019, **"ಮಧ್ಯಕಾಲೀನ ಕರ್ನಾಟಕದಲ್ಲಿ ಧಾರ್ಮಿಕ ಸಾಮಾಜಿಕ ಸಂಘಟನೆ"** ಪುಟ. 15., ಯುಗಪುರುಷ, ಕನ್ನಡ ಮಾಸಪತ್ರಿಕೆ ಕಿನ್ನಿಗೋಳಿ. ದ.ಕ., ಫೆಬ್ರವರಿ 2019
15. ಸೂರ್ಯನಾಥ್ ಕಾಮತ್: 1975, **ತುಳುವ ಸಂಸ್ಕೃತಿ ಇತಿಹಾಸ** – ಪ್ರಜಾವಾಣಿ, 1–6–1975.

11.. **ಅಂತರ್ಜಾಲ ಆಕರಗಳು**

1. www.archive.org/web
2. Shodhganga_inflibnet/ac.in/..

12. **ವಕ್ತೃವಿವರ**

1. ಕೆ. ಜಿ. ವಸಂತಮಾಧವ, 95 ವ., ನಿವೃತ್ತ ಸಹಪ್ರಾಧ್ಯಾಪಕರು, ಪಾವಂಜೆ.
2. ಅಪ್ಪಣ್ಣ ಹೆಗ್ಡೆ, 88 ವ., ಭಂಡಸಾಲೆ ಮನೆತನ, ಬಸ್ರೂರು
3. ಕನರಾಡಿ ವಾದಿರಾಜ ಭಟ್ಟ, 75 ವ., ನಿವೃತ್ತ ಪ್ರಾಂಶುಪಾಲರು, ಬಸ್ರೂರು
4. ಬಿ.ಎ. ವಿವೇಕ ರೈ, 75., ನಿವೃತ್ತ ಕುಲಪತಿಗಳು, ಹಂಪೆ ವಿ.ವಿ.
5. ವಿಲಿಯಂ ಡಿ'ಸಿಲ್ವಾ, 70 ವ., ಮಂಗಳೂರು

** ** **




ಕೃಪೆ: ಎಸ್.ಡಿ ಶೆಟ್ಟಿ: 2002




ಕೃಪೆ: ಎಸ್.ಡಿ ಶೆಟ್ಟಿ: 2002

ಕರ್ನಾಟಕ ಕರಾವಳಿಯ ಬಂದರುಗಳು




ಕೃಪೆ: ಲ.ನ. ಸ್ವಾಮಿ: 2000

# ಮಂಗಳೂರು ಬಂದರು







Portuguese Map of Mangalore Port 1568-1776

ಕೃಪೆ : ವಸಂತಮಾಧವ ಕೆ.ಜಿ.

## ಗಂಗೊಳ್ಳಿ ಬಂದರು




Gangoli (Cambolim)

ಕೃಪೆ : ವಸಂತಮಾಧವ ಕೆ.ಜಿ.

